# ಗುಗ್ಗಳ ಆಚರಣೆ

ಜಾನಪದದಲ್ಲಿ ಮಾಸ್ಟರ್ ಆಫ್ ಫಿಲಾಸಫಿ (ಎಂ.ಫಿಲ್.) ಪದವಿಯ ಆಂಶಿಕ
ಅವಶ್ಯಕತೆಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಕಿರು ಪ್ರಬಂಧ

ಸಂಶೋಧಕಿ
ನೇತ್ರಾವತಿ ಪುಂಡಿಕಾಳು

ಮಾರ್ಗದರ್ಶಕರು
ಡಾ. ಮಂಜುನಾಥ ಬೇವಿನಕಟ್ಟಿ



ಜಾನಪದ ಅಧ್ಯಯನ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೦೨ ೨೦೦೩



# ಗುಗ್ಗಳ ಆಚರಣೆ

ಜಾನಪದದಲ್ಲಿ ಮಾಸ್ಟರ್ ಆಫ್ ಫಿಲಾಸಫಿ (ಎಂ.ಫಿಲ್.) ಪದವಿಯ ಆಂಶಿಕ ಅವಶ್ಯಕತೆಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಕಿರು ಪ್ರಬಂಧ

**ಸಂಶೋಧಕಿ**

ನೇತ್ರಾವತಿ ಪುಂಡಿಕಾಳು

**ಮಾರ್ಗದರ್ಶಕರು**

ಡಾ. ಮಂಜುನಾಥ ಬೇವಿನಕಟ್ಟಿ





ಜಾನಪದ ಅಧ್ಯಯನ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬.



೨೦೦೨-೨೦೦೩

# ಸಂಶೋಧಕರ ಪ್ರಮಾಣ ಪತ್ರ

ಕನ್ನಡ ವಿಶ್ವವಿದ್ಯಾಲಯದ ಜಾನಪದ ವಿಭಾಗದ ಮುಖ್ಯಸ್ಥರಾದ ಡಾ. ಮಂಜುನಾಥ ಬೇವಿನಕಟ್ಟಿ ಅವರ ಮಾರ್ಗದರ್ಶನದಲ್ಲಿ 'ಗುಗ್ಗಳ ಆಚರಣೆ' ಎಂಬ ವಿಷಯವನ್ನು ಕುರಿತು ಸಂಶೋಧನೆ ಮಾಡಿದುದರ ಫಲ ಈ ಕಿರು ಪ್ರಬಂಧ. ೨೦೦೨-೦೩ನೇ ಶೈಕ್ಷಣಿಕ ಸಾಲಿನ ಕನ್ನಡ ವಿಶ್ವವಿದ್ಯಾಲಯ ಎಂ.ಫಿಲ್. ಪದವಿಗಾಗಿ ಸಿದ್ಧಪಡಿಸಲಾಗಿದೆ. ಈ ಮೊದಲು, ಈ ಕಿರು ಪ್ರಬಂಧವನ್ನು ವಿಶ್ವವಿದ್ಯಾನಿಲಯದ ಯಾವುದೇ ಪದವಿಗಾಗಿ ಸಲ್ಲಿಸಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಪಿ. ನೇತ್ರಾವತಿ

(ಪುಂಡಿಕಾಳು ನೇತ್ರಾವತಿ)
ಸಂಶೋಧನಾ ವಿದ್ಯಾರ್ಥಿ
ಜಾನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ.
ವಿದ್ಯಾರಣ್ಯ - ೫೮೩ ೨೭೬.

ದಿನಾಂಕ: ೧೮-೦೪-೨೦೦೩
ಸ್ಥಳ : ವಿದ್ಯಾರಣ್ಯ

# ಮಾರ್ಗದರ್ಶಕರ ಪ್ರಮಾಣ ಪತ್ರ

ಪುಂಡಿಕಾಳು ನೇತ್ರಾವತಿ ಇವರು ನನ್ನ ಸಲಹೆ ಮತ್ತು ಮಾರ್ಗದರ್ಶನದಲ್ಲಿ ಸಂಶೋಧನೆ ನಡೆಸಿ **'ಗುಗ್ಗಳ ಆಚರಣೆ'** ಎಂಬ ಕಿರು ಪ್ರಬಂಧವನ್ನು ಸಿದ್ಧಪಡಿಸಿದ್ದಾರೆ. ೨೦೦೨-೦೩ನೇ ಶೈಕ್ಷಣಿಕ ಸಾಲಿನ ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿದ್ದಾರೆ. ಈ ಕಿರು ಪ್ರಬಂಧವನ್ನು ಭಾಗಶಃವಾಗಲಿ, ಪೂರ್ಣವಾಗಿ ಆಗಲಿ ಬೇರಾವುದೇ ಉದ್ದೇಶ ಅಥವಾ ಯಾವುದೇ ಪದವಿಗಾಗಿ ಈ ಹಿಂದೆ ಸಲ್ಲಿಸಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ದಿನಾಂಕ : ೧೮-೦೪-೨೦೦೩
ಸ್ಥಳ : ವಿದ್ಯಾರಣ್ಯ.

ಮಾರ್ಗದರ್ಶಕರು

**(ಮಂಜುನಾಥ ಬೇವಿನಕಟ್ಟಿ)**
ಮುಖ್ಯಸ್ಥರು
ಜಾನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬.

# ಕೃತಜ್ಞತೆ

ಜಾನಪದ ಇಂದು ವೈಜ್ಞಾನಿಕ ಹಾಗೂ ಸಾಂಸ್ಕೃತಿಕ ನೆಲೆಗಳಲ್ಲಿ ಶಿಸ್ತಿನಿಂದ ಅಧ್ಯಯನಕ್ಕೆ ಒಳಗಾಗಿದೆ. ನಾಡಿನಾದ್ಯಂತ ಲಭ್ಯವಿರುವ ಜನಾಂಗ, ಆಚರಣೆ, ಸಂಸ್ಕೃತಿ, ಭಾಷೆಗಳನ್ನು ಕುರಿತು ಅಧ್ಯಯನ ವಾದಂತೆ, ಒಂದು ಪ್ರದೇಶದ ವದಂತಿ ಐತಿಹ್ಯಗಳನ್ನು ಕುರಿತು ಹಲವು ನಿಟ್ಟಿನಲ್ಲಿ ಅಧ್ಯಯನ ಮಾಡುವುದರ ಮೂಲಕ ತನ್ನ ವ್ಯಾಪ್ತಿಯನ್ನು ಹಿಗ್ಗಿಸಿಕೊಂಡಿದೆ. ಹೀಗಾಗಿ ಜಾನಪದ ಅಧ್ಯಯನ ಕ್ಷೇತ್ರಕ್ಕೆ ಒಳಗಾಗದ ವಿಷಯವೇ ಇಲ್ಲ ಎನ್ನುವಷ್ಟರ ಮಟ್ಟಿಗೆ ಬೆಳೆದು ನಿಂತಿದೆ. ಆಕಾಶ - ಜಾನಪದ, ಮಳೆ - ಜಾನಪದ, ಕೃಷಿ - ಜಾನಪದ, ಉಡುಗೆ-ತೊಡಗೆ ಜಾನಪದ, ಹಬ್ಬ-ಆಚರಣೆಗಳ ಜಾನಪದ, ಎಂದಿತ್ಯಾದಿ ಶೀರ್ಷಿಕೆಗಳಲ್ಲಿ ಸಮಗ್ರ ಹಾಗೂ ಪ್ರೌಢವಾಗಿ ಅಧ್ಯಯನಗಳು ನಡೆದಿವೆ. ಇದರಿಂದ ಒಂದು ಪ್ರದೇಶದ ಜಾನಪದೀಯರ ಬದುಕಿನ ವೈವಿಧ್ಯತೆಗಳನ್ನು ಗುರುತಿಸಲು ಸಾಧ್ಯವೂ ಆಗಿದೆ. ಇಷ್ಟೆಲ್ಲಾ ಅಧ್ಯಯನಗಳು ನಡೆದರೂ ಇನ್ನೂ ಆಗಬೇಕಾದ ಕೆಲಸ ಸಾಕಷ್ಟಿವೆ. ಅನೇಕ ಸಣ್ಣಪುಟ್ಟ ವಿಷಯಗಳು ಅಧ್ಯಯನ ಯೋಗ್ಯವಾದ ಚರಿತ್ರೆಯನ್ನು ತನ್ನ ಒಡಲಲ್ಲಿ ಇರಿಸಿಕೊಂಡಿರುತ್ತದೆ. ಅಂತಹವುಗಳಲ್ಲಿ ಪ್ರಸ್ತುತ ಗುಗ್ಗಳ ಆಚರಣೆ ಎಂಬ ಅಧ್ಯಯನವೂ ಒಂದು.

ನಂದಿಹಳ್ಳಿಯ ಸ್ನಾತಕೋತ್ತರ ಕೇಂದ್ರದಲ್ಲಿ ಕನ್ನಡ ಪದವಿ ಮುಗಿಸಿಕೊಂಡ ಮೇಲೆ ನಮ್ಮೂರಾದ ಹೂವಿನಹಡಗಲಿಗೆ ಹೋದೆ. ಸುತ್ತ-ಮುತ್ತ ಹಳ್ಳಿಗಳಲ್ಲಿ ನಡೆಯುತ್ತಿದ್ದ ಗುಗ್ಗಳ ಆಚರಣೆ,ಇದರ ವೀರಗಾಸೆ ಕುಣಿತ, ಜನಪದ ಸಂಸ್ಕೃತಿ ಎಲ್ಲವೂ ನನ್ನ ಮನಸ್ಸನ್ನು ಆಕರ್ಷಿಸಿದವು. ಕನ್ನಡ ವಿಶ್ವವಿದ್ಯಾಲಯದಲ್ಲಿ ಎಂ.ಫಿಲ್. ಮಾಡುವ ಅವಕಾಶ ದೊರೆತಾಗ ಅದಕ್ಕೊಂದು ಆಕಾರ ಪ್ರಾಪ್ತವಾಯಿತೆಂದು ಹೇಳಬೇಕು. ಹೀಗೆ ಹಳ್ಳಿಯ ಬದುಕಿನ ಆಚರಣೆ ನೆನಪುಗಳಿಗೆ ಪೂರಕ ಆಕಾರಗಳು ಲಭ್ಯತೆಯನ್ನು ತಂದು ಕೊಟ್ಟವು. ಈ ಪದವಿಗೆ ಅವಕಾಶ ಮಾಡಿಕೊಟ್ಟಂತ ಕನ್ನಡ ವಿಶ್ವವಿದ್ಯಾಲಯದ ಕುಲಪತಿಗಳಾದ ಡಾ. ಹೆಚ್.ಜೆ.ಲಕ್ಕಪ್ಪಗೌಡ ಅವರಿಗೆ, ಕುಲಸಚಿವರಾದ ಡಾ. ಕೆ.ವಿ. ನಾರಾಯಣ ಹಾಗೂ ಅಧ್ಯಯನಾಂಗದ ನಿರ್ದೇಶಕರಾದ ಡಾ.ಕರೀಗೌಡ ಬೀಚನಹಳ್ಳಿ ಅವರಿಗೆ ನಾನು ಕೃತಜ್ಞಳಾಗಿದ್ದೇನೆ.

ಜಾನಪದ ಅಧ್ಯಯನ ವಿಭಾಗದ ಮುಖ್ಯಸ್ಥರಾದ ಡಾ.ಮಂಜುನಾಥ ಬೇವಿನಕಟ್ಟಿಯವರ ಬೆಲೆಯುಳ್ಳ ಮಾರ್ಗದರ್ಶನ, ಜಾನಪದ ಅಧ್ಯಯನಗಳ ಶಿಸ್ತು ಈ ಕಿರು ಪ್ರಬಂಧದುದ್ದಕ್ಕೂ ಕೆಲಸ ಮಾಡಿದೆ. ಅವರ ಸೌಜನ್ಯತೆಗೆ ನನ್ನ ಕೃತಜ್ಞತೆಗಳು.

ಇದೇ ವಿಭಾಗದ ಉಪನ್ಯಾಸಕರಾದ ಡಾ. ಸ.ಚಿ.ರಮೇಶ, ಡಾ.ಮೊಗಳ್ಳಿ ಗಣೇಶ್, ಡಾ. ಹೆಬ್ಬಾಲೆ ಕೆ.ನಾಗೇಶ್, ಡಾ. ಸಿ.ಟಿ. ಗುರುಪ್ರಸಾದ ಮತ್ತು ಡಾ.ಹರಿಶ್ಚಂದ್ರ ದಿಗ್ಸಂಗಿಕರ್ ಇವರಿಗೂ ನನ್ನ ಕೃತಜ್ಞತೆಗಳು.

ನನ್ನ ಬರವಣಿಗೆಯನ್ನು ಪ್ರತಿ ಹಂತದಲ್ಲೂ ಸಲಹೆ ಸೂಚನೆಗಳನ್ನು ನೀಡುತ್ತಾ ನನ್ನ ಎಲ್ಲಾ ತಪ್ಪು ಒಪ್ಪುಗಳನ್ನು ತಿದ್ದಿ ಮಾಹಿತಿಯನ್ನು ಕೊಟ್ಟ ಡಾ.ಶೈಲಜಾ ಹಿರೇಮಠ್, ಪ್ರಭಾಕರ, ಡಾ. ತಾರೀಹಳ್ಳಿ ಹನುಮಂತಪ್ಪ ಮತ್ತು ಈ ವಿಶ್ವವಿದ್ಯಾಲಯದ ಹಿರಿಯ ವಿದ್ಯಾರ್ಥಿಗಳಾದ ಕೆ. ವೀರಮ್ಮ, ಸೋಮೇಶ್ ಉಪ್ಪಾರ್, ಜಾಜಿ ದೇವಿಂದ್ರಪ್ಪ, ಸೋಮೇಶ. ಎಂ, ಮಹೇಶ್.ಕೆ, ಸಣ್ಣ ಪಾಪಯ್ಯ ಹಾಗೂ ನನ್ನ ಸಹ ಸಂಶೋಧಕರಾದ ರವೀಂದ್ರಕುಮಾರ, ಅಂಜನಪ್ಪ,ಚಂದ್ರಶೇಖರ್, ಕೃಷ್ಣಮೂರ್ತಿ,ಹನುಮಂತಪ್ಪ, ವಿಜಯಕುಮಾರ ವಿಶ್ವವಿದ್ಯಾಲಯದ ಎಲ್ಲಾ ವಿದ್ಯಾರ್ಥಿ ಮತ್ತು ವಿದ್ಯಾರ್ಥಿನಿಯರಿಗೆ ನನ್ನ ಕೃತಜ್ಞತೆಗಳು.

ನನ್ನ ವ್ಯಾಸಂಗದುದ್ದಕ್ಕೂ ಸಲಹೆ ಸೂಚನೆಗಳನ್ನು ನೀಡುತ್ತಾ ಬಂದ ಗುರುಗಳಾದ ಡಾ.ಶಾಂತಿನಾಥ ದಿಬ್ಬದ್, ಡಾ.ಮಲ್ಲಿಕಾ ಘಂಟಿ, ಶ್ರೀಮತಿ ಶಾರದ, ಡಾ.ಗಂಗಾಧರ ಮೂರ್ತಿ ಇವರಿಗೆ ನನ್ನ ಕೃತಜ್ಞತೆಗಳು.

ಪ್ರತೀ ಹಂತದಲ್ಲಿ ಪ್ರೋತ್ಸಗಿಸುತ್ತಾ ನನ್ನ ಹೆಚ್ಚಿನ ವ್ಯಾಸಂಗಕ್ಕೆ ಆರ್ಥಿಕವಾಗಿ ಸಹಕರಿಸಿದ ನನ್ನ ಪೂಜ್ಯ ತಂದೆ-ತಾಯಿಗೆ ಮತ್ತು ವಾತ್ಸಲ್ಯಮಯಿಯಾದ ನನ್ನ ತಮ್ಮ ಸಂತೋಷನಿಗೆ ನಾನು ಚಿರಋಣಿಯಾಗಿದ್ದೇನೆ.

ಕ್ಷೇತ್ರಕಾರ್ಯದಲ್ಲಿ ಸಹಾಯ ಮಾಡಿದ ಅಣ್ಣಂದಿರಾದ ನಾಗರಾಜ ಪುಂಡಿಕಾಳ, ವೀರಣ್ಣ ಪುಂಡಿಕಾಳ, ಪ್ರಭು ಸೊಪ್ಪಿನ, ಅಕ್ಕಂದಿರು, ದೊಡ್ಡಪ್ಪ, ದೊಡ್ಡಮ್ಮ, ಮಾವಂದಿರು ಅತ್ತೆಯಂದಿರಿಗೆ ನನ್ನ ಕೃತಜ್ಞತೆಗಳು.

ಪ್ರತೀ ಹಂತದಲ್ಲಿ ಧೈರ್ಯ ತುಂಬಿದ ನನ್ನ ಗೆಳೆಯ-ಗೆಳತಿಯರಾದ ವನಜ, ಅನ್ನಪೂರ್ಣ, ಸುನಂದ, ರಾಜು, ರವಿ, ಮಲಿಯಪ್ಪ, ಅಂಜನಪ್ಪ, ಶಮೀನಾ, ನೇತ್ರಾ, ಸುಮಂಗಲ, ತಾರ, ಸುನಂಧ, ಡಿ.ಬಿ.ಜ್ಯೋತಿ ಎಲ್ಲಾ ಗೆಳೆಯ-ಗೆಳತಿಯರಿಗೆ ನನ್ನ ಕೃತಜ್ಞತೆಗಳು.

ಡಿ.ಟಿ.ಪಿ. ಮಾಡಿಕೊಟ್ಟ ಹೊಸಪೇಟೆ ಶಶಿ ಕಂಪ್ಯೂಟರ್ಸ್‌ನ ಜಂಬುನಾಥ ಹೆಚ್.ಎಂ. ಇವರಿಗೆ, ನನ್ನ ಸಂಶೋಧನೆಯುದ್ದಕ್ಕೂ ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ಸಹಕರಿಸಿದ ಎಲ್ಲಾ ಗುರು ಹಿರಿಯರಿಗೂ, ಸ್ನೇಹಿತರಿಗೂ, ಕಿರಿಯರಿಗೂ ನನ್ನ ಅನಂತ ನಮನಗಳು.

**ಪುಂಡಿಕಾಳು ನೇತ್ರಾವತಿ.**

# ಪರಿವಿಡಿ



- - -

ಅಧ್ಯಾಯ - ೧

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

**ಪ್ರಸ್ತಾವನೆ :**

ಕರ್ನಾಟಕದಲ್ಲಿ ಜಾನಪದ ಅಧ್ಯಯನದ ಚರಿತ್ರೆಯನ್ನು ತಿರುವಿ ಹಾಕಿದಾಗ ನಮಗೆ ಸ್ಪಷ್ಟವಾಗುವುದೇನೆಂದರೆ; ಇದುವರೆಗೆ ಕೇವಲ ಸಂಗ್ರಹ ಮಾತ್ರ ಹೆಚ್ಚಿನ ರೀತಿಯಲ್ಲಾಗಿದೆ. ಈ ಸಂಗ್ರಹವನ್ನು ಕೆಲವೇ ಕೆಲವು ಜನರು ಮಾಡಿರುವುದು ಕಂಡುಬರುತ್ತದೆ. ಅಲ್ಲಲ್ಲಿ ಕೆಲವು ಅಧ್ಯಯನ ವಿಶ್ಲೇಷಣೆಗಳೂ ನಡೆದಿವೆ. ಹೀಗೆ ಆಗಿರುವಂತಹ ಕೆಲವು ಅಧ್ಯಯನಗಳು ಜಾನಪದದ ಬಗೆಗೆ ಸೂಕ್ತವಾದ ವಿಶ್ಲೇಷಣೆಯನ್ನು ನೀಡಲು ಅಸಮರ್ಥವಾಗಿದೆ. ಇತ್ತೀಚಿನ ದಿನಗಳಲ್ಲಿ ಜಾನಪದದ ಬಗೆಗೆ ಬಹಳಷ್ಟು ಜನರು ಆಸಕ್ತಿ ತೋರಿಸುತ್ತಿದ್ದಾರೆ. ಸಮಾಜದ ಪ್ರತಿಯೊಂದು ಸ್ಥರದ ವ್ಯಕ್ತಿಗಳು ಅಧ್ಯಯನದಲ್ಲಿ ತೊಡಗಿದ್ದಾರೆ. ಜೊತೆಗೆ ಸಮಕಾಲೀನ ಜಗತ್ತಿನ ಹಲವಾರು ತೊಂದರೆಗಳಿಗೆ ಜಾನಪದ ಅಧ್ಯಯನದ ಮುಖೇನ ಪರಿಹಾರಗಳನ್ನು ಕಂಡುಕೊಳ್ಳಲು ಪ್ರಯತ್ನಿಸುತ್ತಿದ್ದಾರೆ.

ಕೇವಲ ಕಥೆ, ಗಾದೆ, ಒಗಟು, ಗೀತೆಗಳ ಮೂಲಕ ಸಂಸ್ಕೃತಿಯನ್ನು ಕಟ್ಟಿಕೊಡುವ ಪ್ರಯತ್ನಗಳನ್ನು ಮಾಡುತಿದ್ದರು. ಇತ್ತೀಚಿನ ದಿನಗಳಲ್ಲಿ ಜಾನಪದದ ಪ್ರತಿಯೊಂದು ಅಂಶಗಳನ್ನಿಟ್ಟುಕೊಂಡು ಅಧ್ಯಯನ ಮಾಡುತ್ತಿದ್ದಾರೆ. ಜಾನಪದವನ್ನು ಅನ್ಯಜ್ಞಾನ ಶಿಸ್ತುಗಳ ಮುಖೇನ ಅಧ್ಯಯನಕ್ಕೆ ಒಳಪಡಿಸುತ್ತಿದ್ದಾರೆ. ಅಲಕ್ಷಿತ ವಿಷಯಗಳನ್ನು ಮುನ್ನೆಲೆಗೆ ತರುತ್ತಿದ್ದಾರೆ.

ಇಂಡಿಯಾದ ಈ ನೆಲ ತನ್ನ ಸಾವಿರಾರು ವರ್ಷಗಳ ಚರಿತ್ರೆಗಳಲ್ಲಿ ಹಲವು ಜನಾಂಗಗಳ ಸಂಸ್ಕೃತಿಗಳ ಧರ್ಮ ಪಂಥಗಳ ಉದಯಕ್ಕೆ ಕಾರಣವಾಗಿದೆ. ಹಾಗೆಯೇ ಸಂಘರ್ಷ ಮತ್ತು ಪಥನಗಳ ಪ್ರಕ್ರಿಯೆಯಲ್ಲಿ ಉದಯಿಸಿದ ಹೊಸ ಮಾರ್ಗವೊಂದನ್ನು ಒಪ್ಪಿಕೊಳ್ಳುತ್ತಾ ಬಂದಿದೆ. ಒಪ್ಪಿಕೊಂಡ ಮಾರ್ಗ ಹಲವು ಮಾರ್ಗಗಳನ್ನು ಪೋಷಿಸುತ್ತಾ ಬಂದಿದೆ. ಆ ಮೂಲಕ ಇಡೀ ಇಂಡಿಯಾ ಅತ್ಯಂತ ಸಂಕೀರ್ಣವಾದ ಸಾಂಸ್ಕೃತಿಕ ನಾಡಾಗುವಂತೆ ಹಲವು ಪ್ರಕ್ರಿಯೆಗಳಿಗೆ ಒಳಗಾಗಿದೆ.

ಇಂತಹ ಸಾಂಸ್ಕೃತಿಕ ಸಂದರ್ಭಗಳನ್ನು ಅಧ್ಯಯನ ಮಾಡುವಾಗ ವೀರಭದ್ರನ ಸಂಪ್ರದಾಯ ಬಹು ಮುಖ್ಯವಾದ ಸಂಗತಿಯಾಗಿರುತ್ತದೆ. ವೀರಶೈವ ಸಮುದಾಯದ ಮನದಲ್ಲಿ ನೆಲೆನಿಂತು, ಪೂಜೆಗೊಳ್ಳುತ್ತಿರುವ ವೀರಭದ್ರನ ಮತ್ತು ಆ ಸಮುದಾಯದವರ ಸಂಬಂಧ ಗಾಢವಾದುದು. ಇಂತಹ ಒಂದು ಸಂಸ್ಕೃತಿಯ ವಿಷಯಕ್ಕೆ ಸಂಬಂಧಿಸಿದಂತೆ ಲಭಿಸುವ ಎಲ್ಲಾ ಮಾಹಿತಿಗಳನ್ನು ಕಲೆಹಾಕಿ, ಅಧ್ಯಯನಕ್ಕೆ ಒಳಪಡಿಸಲಾಗಿದೆ.

ವೀರಭದ್ರನ ಸಂಸ್ಕೃತಿಯಲ್ಲಿ ಗುಗ್ಗಳ ಆಚರಣೆಯು ಬಹು ಮುಖ್ಯವಾದುದು. ಈ ಆಚರಣೆಯನ್ನು ಮುಖ್ಯವಾಗಿ ಕರ್ನಾಟಕ, ಮಹಾರಾಷ್ಟ್ರ, ಆಂಧ್ರಪ್ರದೇಶ ಮುಂತಾದ ರಾಜ್ಯಗಳಲ್ಲಿ ನಡೆಸುತ್ತಿದ್ದಾರೆ. ಆದರಲ್ಲೂ ಉತ್ತರ ಕರ್ನಾಟಕದಲ್ಲಿ ಗುಗ್ಗಳ ಆಚರಣೆಯು ತುಂಬಾ ಜನಪ್ರಿಯವಾದುದು. ಆದರಲ್ಲಿ ಬೀದರ್, ಗುಲ್ಬರ್ಗಾ, ಬಿಜಾಪುರ, ಬಳ್ಳಾರಿ, ಧಾರವಾಡ, ಗದಗ ಈ ಜಿಲ್ಲೆಗಳಲ್ಲಿ ಹೆಚ್ಚಾಗಿ ಕಂಡು ಬರುತ್ತದೆ. ಏಕೆಂದರೆ ಇಲ್ಲಿ ವೀರಭದ್ರ ದೇವರನ್ನು ಮನೆಯ ದೇವರನ್ನಾಗಿ ಮಾಡಿಕೊಂಡು ಭಕ್ತರು ಹೆಚ್ಚಾಗಿ ಕಂಡುಬರುತ್ತಾರೆ. ಬಳ್ಳಾರಿ ಜಿಲ್ಲೆಯಲ್ಲಿ ನಡೆಯುವ ಜಾತ್ರಾ, ಉತ್ಸವಗಳಲ್ಲಿ (ವೀರಭದ್ರ ದೇವರಿಗೆ ಸಂಬಂಧಿಸಿ) ಅನೇಕ ಬಗೆಯ ಒಡಬುಗಳು ಹೇಳುವ ಮೂಲಕ ಆತನ ಅವತಾರಗಳನ್ನು ಕೊಂಡಾಡುತ್ತಾರೆ. ಜೊತೆಗೆ ಶಸ್ತ್ರ ಪವಾಡವು ವಿಶೇಷವಾಗಿರುತ್ತದೆ. ಮದುವೆಗಳಲ್ಲಿಯೂ ಒಡಬು ಹಾಗೂ ಶಸ್ತ್ರ ಪವಾಡ ನಡೆಯುತ್ತದೆ. ಇದು ಜಾತ್ರೆಗಿಂತ ಭಿನ್ನವಾಗಿರುತ್ತದೆ ಎಂಬುದನ್ನು ಗಮನಿಸಬೇಕು.

ವೀರಶೈವ ಪರಂಪರೆಗಳಲ್ಲಿ ಇಡೀ ದೇವತೆಗಳಲ್ಲಿ ಅತೀ ಉಗ್ರವಾದ ದೇವರು ಎಂದರೆ ಈ ವೀರಭದ್ರ. ಈ ದೇವರ ಹುಟ್ಟು ಶಿವನ ಸಿಟ್ಟಿನ ಸಂದರ್ಭದಲ್ಲಿ ಆಗುತ್ತದೆ. ಇದರ ಆಧಾರದ ಮೇಲೆ ಹುಟ್ಟಿಕೊಂಡಿರುವುದೇ 'ಗುಗ್ಗಳ' ಆಚರಣೆ ಎಂದು ಹೇಳಬಹುದು. ಗುಗ್ಗಳ ಮದುವೆ ಸಂಪ್ರದಾಯವು ವೀರಶೈವ ಸಮುದಾಯದ ವೈವಾಹಿಕ ಜೀವನದ ಅತ್ಯಂತ ವಿಶೇಷವಾದ ಆಚರಣೆ. ಮದುವೆಯಂತಹ ಮಂಗಳಯುಕ್ತ ಆಚರಣೆಯಲ್ಲಿ ವೀರಭದ್ರನ ರೌದ್ರ, ಭಯಂಕರ ಆಚರಣೆ ಹೇಗೆ ಸಂಲಗ್ನವಾಯಿತು ಎಂಬುದು ಕೂಡ ಮಹತ್ವದ ಸಂಗತಿ. ಇಂತಹ ಮದುವೆಯಲ್ಲಿ ಭಾಗವಹಿಸುವ ಪುರವಂತರು, ಅವರ ವಾದ್ಯಗಳು, ಹೇಳುವ ಒಡಬುಗಳು, ಒಡಬುದಾರರು, ಈ ಆಚರಣೆಯಲ್ಲಿ ಬೆಳಗಿನ ಜಾವ ಹೊರಡುವ ವೀರಭದ್ರ ದೇವರ ಮೆರವಣಿಗೆ ಈ ಆಚರಣೆಯಲ್ಲಿ ಭಾಗವಹಿಸುವ ಬೇರೆ ಬೇರೆ ಜನಪದ ವರ್ಗಗಳ ಪಾತ್ರ, ನಂಬಿಕೆ, ವಿಧಿ-ನಿಷೇಧಗಳು ವಿಶೇಷವಾದ ಮಾಹಿತಿಯನ್ನು ಹೇಳುತ್ತವೆ. ವೀರಶೈವ ಸಮುದಾಯವು ಕಂಡುಕೊಂಡಂತಹ ಈ ರೀತಿಯ ಸಾಂಸ್ಕೃತಿಕ ಆಚರಣೆಗಳು ಆ ಸಮುದಾಯದ ಒಟ್ಟು ಚರಿತ್ರೆಯನ್ನು ನಿರ್ವಚಿಸುವಾಗ ಕೆಲವು ಮುಖ್ಯ ಆಧಾರಗಳಾಗಿ ನಿಲ್ಲುತ್ತವೆ. ಈ ದೃಷ್ಟಿಯಿಂದ ವೀರಶೈವ ಸಮುದಾಯದ ಸಾಂಸ್ಕೃತಿಕ ಬದುಕಿನಲ್ಲಿ ವಿಶೇಷವಾಗಿ ಇರುವ ಗುಗ್ಗಳ ಮದುವೆ ಸಂಪ್ರದಾಯವನ್ನು ದಾಖಲುಗೊಳಿಸುವ ಮೂಲಕ ಆ ಸಮುದಾಯದಲ್ಲಿರುವ ಇನ್ನೂ ಅನೇಕ ಮದುವೆ ಸಂಪ್ರದಾಯಗಳನ್ನು ಕಂಡುಕೊಳ್ಳುವ ದೃಷ್ಟಿಯಿಂದ ಈ ಸಂಶೋಧನೆಯನ್ನು ಕೈಗೊಳ್ಳಲಾಗಿದೆ.

ಪ್ರಸ್ತುತ ಅಧ್ಯಯನದಲ್ಲಿ ಬಳ್ಳಾರಿ ಜಿಲ್ಲೆಯ ಹೂವಿನ ಹಡಗಲಿ ತಾಲೂಕಿನಲ್ಲಿರುವ ಗುಗ್ಗಳ ಆಚರಣೆಯನ್ನು ಗಮನದಲ್ಲಿರಿಸಲಾಗಿದೆ. ಇದಕ್ಕೆ ಮುಖ್ಯ ಕಾರಣ ಸೀಮಿತ ಕಾಲಾವಧಿ. ಇಷ್ಟಿದ್ದರೂ ಬಳ್ಳಾರಿ ಜಿಲ್ಲೆಯ ಬೇರೆ ಬೇರೆ ಕಡೆಗಳಲ್ಲಿಯೂ ಕ್ಷೇತ್ರಕಾರ್ಯ ಮಾಡಿ ವಿವರವನ್ನು ಸಂಗ್ರಹಿಸಲಾಗಿದೆ. ಗುಗ್ಗಳ ಆಚರಣೆಯಲ್ಲಿ ಭಾಗವಹಿಸುವ ಪುರವಂತರು, ವೀರಶೈವ ಸಮುದಾಯದ ಹಿರಿಯರು, ಮುಂತಾದವರೊಂದಿಗೆ ಸಂದರ್ಶಿಸಿ ಮಾಹಿತಿಗಳನ್ನು ಪಡೆದುಕೊಳ್ಳಲಾಗಿದೆ. ಗುಗ್ಗಳ ಆಚರಣೆ ನಡೆಯುವ ರೀತಿ ನೀತಿಗಳು ಭಾಗವಹಿಸುವವರ ಬಗೆಗೆ ಮಾಹಿತಿಗಳನ್ನು ಪಡೆಯಲಾಗಿದೆ.

ಸಂಗ್ರಹಿಸಲಾದ ಮಾಹಿತಿಗಳನ್ನು ವರ್ಗೀಕರಿಸಿಕೊಂಡು ವಿಷಯ ಮಂಡನೆ ಮಾಡುವಾಗ ವಿವರಣಾತ್ಮಕವಾದ ಕ್ರಮವನ್ನು ಅನುಸರಿಸಲಾಗಿದೆ. ವಿವರಗಳನ್ನು ಹೆಚ್ಚು ವ್ಯಾಖ್ಯಾನಗಳಿಗೆ ಒಳಪಡಿಸಿಲ್ಲ. ಏಕೆಂದರೆ; ಗುಗ್ಗಳ ಆಚರಣೆಯ ಬಗೆಗೆ ಸಮರ್ಪಕವಾದ ವಿವರ ನೀಡುವ ಕೃತಿಗಳು ಇನ್ನೂ ಪ್ರಕಟವಾಗಿಲ್ಲ. ಹೀಗಿರುವಾಗ ಸಮಗ್ರ ವಿವರ ನೀಡುವುದೇ ಮುಖ್ಯ ಕೆಲಸವಾಗಿಬಿಡುತ್ತದೆ. ಈ ಅರಿವಿನಲ್ಲಿ ಪ್ರಬಂಧದಲ್ಲಿ ವಿವರಣಾತ್ಮಕವಾದ ವಿಧಾನವನ್ನು ಅನುಸರಿಸಲಾಗಿದೆ.

**ಅಧ್ಯಯನದ ಆಕರಗಳು :**

ಪ್ರಸ್ತುತ ಅಧ್ಯಯನಕ್ಕೆ ಎರಡು ರೀತಿಯ ಆಕರಗಳನ್ನು ಪ್ರಮುಖವಾಗಿ ಬಳಸಿಕೊಳ್ಳಲಾಗಿದೆ.

೧) ಕ್ಷೇತ್ರ ಕಾರ್ಯ ಮಾಹಿತಿಗಳು.

೨) ಲಿಖಿತ ಆಕರಗಳು.

**೧) ಕ್ಷೇತ್ರ ಕಾರ್ಯ ಮಾಹಿತಿಗಳು :**

ಈ ಪ್ರಬಂಧಕ್ಕೆ ಬೇಕಾದ ಪ್ರಾಥಮಿಕ ಮಾಹಿತಿಗಳನ್ನು ವ್ಯಾಪಕವಾದ ಕ್ಷೇತ್ರ ಕಾರ್ಯದಿಂದ ಸಂಗ್ರಹಿಸಿಕೊಳ್ಳಲಾಗಿದೆ. ಪ್ರಬಂಧದ ವ್ಯಾಪ್ತಿಯನ್ನು ಬಳ್ಳಾರಿ ಜಿಲ್ಲೆಯ ಹೂವಿನಹಡಗಲಿ ತಾಲೂಕಿಗೆ ಸೀಮಿತಗೊಳಿಸಲಾಗಿದೆ. ಮಾಹಿತಿಗಳನ್ನು ಸಂಗ್ರಹಿಸುವಾಗ ಆದಷ್ಟು ವಿವರವಾಗಿ ಕ್ಷೇತ್ರಕಾರ್ಯದ ಎಲ್ಲ ವಿಧಿವಿಧಾನಗಳನ್ನು ಅನುಸರಿಸಿ ಸಂಗ್ರಹಿಸಲಾಗಿದೆ. ಮುಖ್ಯವಾಗಿ ಪ್ರಶ್ನಾವಳಿ, ಸಂದರ್ಶನ ಮತ್ತು ಅವಲೋಕನ ವಿಧಾನಗಳನ್ನು ಬಳಸಿ, ಕ್ಷೇತ್ರ ಕಾರ್ಯವನ್ನು ಮಾಡಲಾಗಿದೆ.

ಇತ್ತೀಚಿಗೆ ನಡೆದ ಗುಗ್ಗಳ ಸ್ಥಳಗಳಿಗೆ ಭೇಟಿಕೊಟ್ಟು, ವಿವರಗಳನ್ನು ದಾಖಲಿಸಲಾಗಿದೆ. ಗುಗ್ಗಳ ಆಚರಣೆಯಲ್ಲಿ ಪಾಲ್ಗೊಂಡ ಹಿರಿಯ ವ್ಯಕ್ತಿಗಳನ್ನು ಸಂದರ್ಶಿಸಿ, ಅವರಿಂದ ಮಾಹಿತಿಗಳನ್ನು ಪಡೆಯಲಾಗಿದೆ. ಸಾಮಾನ್ಯವಾಗಿ ಸಂದರ್ಶನಕ್ಕೆ ಹಿರಿಯ ವ್ಯಕ್ತಿಗಳನ್ನೇ ಆಯ್ದುಕೊಳ್ಳಲಾಗಿದೆ. ಆದರೂ ಅಗತ್ಯವಿದ್ದಾಗ ಹೊಸ ತಲೆಮಾರಿನ ಜನಪದರನ್ನು ಸಹ ಸಂದರ್ಶಿಸಲಾಗಿದೆ. ಈ ನಿರೂಪಕರು ವಿವಿಧ ಪ್ರದೇಶಗಳಿಗೆ ಸೇರಿರುವಂತೆ ಎಚ್ಚರವಹಿಸಲಾಗಿದೆ. ಈ ನಿಟ್ಟಿನಲ್ಲಿ ಕ್ಷೇತ್ರ ಕಾರ್ಯವು ಸಮಗ್ರವೂ, ಸಮರ್ಪಕವೂ ಆಗಿರುವಂತೆ ನೋಡಿಕೊಳ್ಳಲಾಗಿದೆ.

**೨) ಲಿಖಿತ ಆಕರಗಳು :**

ಗುಗ್ಗಳ ಆಚರಣೆಗೆ ಸಂಬಂಧಪಟ್ಟಂತೆ ಪೂರಕ ಮಾಹಿತಿಗಳನ್ನು ಈ ಕೆಳಗಿನ ಆಕರಗಳಿಂದ ಸಂಗ್ರಹಿಸಲಾಗಿದೆ.

| | | | |
|---|---|---|---|
| ಅ) | ವೀರಭದ್ರ ದೇವರ ಒಡಬುಗಳು | - | ಕಮಲಾ ಹೆಮ್ಮಿಗೆ |
| ಆ) | ಶ್ರೀ ವೀರಭದ್ರ ದೇವರ ವಡಪುಗಳು | - | ಶಂಕ್ರಪ್ಪ ಬಸಪ್ಪ ತೊಂಡಿಹಾಳ |
| ಇ) | ಶ್ರೀ ವೀರಭದ್ರ ದೇವರ ವಚನಶಾಸ್ತ್ರ(ಖಡ್ಗಗಳು) | | |
| ಈ) | ವೀರಶೈವ ವಿವಾಹ ಪದ್ಧತಿ | - | ಜ್ಯೋತಿರ್ವಿದ್ವಾನ್ ಪುರೋಹಿತ ಮಹಾಕೂಟಯ್ಯಶಾಸ್ತ್ರಿಗಳು ಹಿರೇಮಠ (ವಿರಕ್ತಮಠ) |
| ಉ) | ಗುಗ್ಗಳ ಯಾಗದ ಪಳೆಯುಳಿಕೆ(ಪ್ರಜಾವಾಣಿ-ವಿಶೇಷಾಂಕ) | - | ಡಾ॥ ಹೆಚ್.ಚಂದ್ರಶೇಖರ್ |
| ಊ) | ಕರ್ನಾಟಕ ಜನಪದ ಕಲೆಗಳ ವಿಶ್ವಕೋಶ | - | ಪ್ರೊ. ಹಿ.ಚಿ. ಬೋರಲಿಂಗಯ್ಯ. |
| ಋ) | ವೀರೇಶ ಚರಿತೆ | - | ರಾಘವಾಂಕ |
| ೠ) | ಹರಿಹರನ ರಗಳೆಗಳು | - | (ಓಹಿಲಯ್ಯನ ರಗಳೆ). |

ಈ ಮೇಲಿನ ಆಕರಗಳಲ್ಲಿ ವೀರಭದ್ರನ ಗುಗ್ಗಳ ಆಚರಣೆಯ ಬಗೆಗೆ ಅಲ್ಪಸ್ವಲ್ಪ ಮಾಹಿತಿಗಳು ದೊರೆತಿದ್ದು, ಪ್ರಸ್ತುತ ಪ್ರಬಂಧದ ನಿರೂಪಣೆಗೆ ಅವನ್ನು ಅಗತ್ಯವಿದ್ದಲ್ಲಿ ಬಳಸಿಕೊಳ್ಳಲಾಗಿದೆ.

ಪ್ರಸ್ತುತ ಪ್ರಬಂಧದ ಹರವು ಒಂಭತ್ತು ಅಧ್ಯಾಯಗಳಾಗಿದೆ. ಪ್ರತಿಯೊಂದು ಅಧ್ಯಾಯವು ಹೆಚ್ಚಾಗಿ ಕ್ಷೇತ್ರಕಾರ್ಯದ ಮಾಹಿತಿಗಳನ್ನು ಒಳಗೊಂಡಿದ್ದು, ಅಗತ್ಯವಿದ್ದಲ್ಲಿ ವಿಶ್ಲೇಷಣೆಯನ್ನು ಕೈಗೊಳ್ಳಲಾಗಿದೆ. ಆದಷ್ಟು ಅಧ್ಯಯನವನ್ನು ಸಮಗ್ರವಾದ ರೀತಿಯಲ್ಲಿ ಮಾಡಲು ಪ್ರಯತ್ನಿಸಲಾಗಿದೆ. ಇದೊಂದು ಕ್ಷೇತ್ರ ಕಾರ್ಯ ಆಧಾರಿತ ಅಧ್ಯಯನವಾಗಿದೆ. ಈ ಕ್ಷೇತ್ರದಲ್ಲಿ ಇದೊಂದು ಮೊದಲ ಪ್ರಯತ್ನ ವಾಗಿದ್ದು, ವಿಶ್ಲೇಷಣೆಗಿಂತ ಮಾಹಿತಿಗಳನ್ನು ದಾಖಲಿಸಲು ಹೆಚ್ಚಿನ ಆದ್ಯತೆಯನ್ನು ನೀಡಲಾಗಿದೆ.

ಅಧ್ಯಾಯ - ೨

# ಗುಗ್ಗಳ ಆಚರಣೆ

ವೀರಭದ್ರನನ್ನು ಮನೆಯ ದೇವರನ್ನಾಗಿಸಿಕೊಂಡ ವೀರಶೈವರು ತಮ್ಮ ಮನೆಯಲ್ಲಿ ಮದುವೆ ಕಾರ್ಯ ಏರ್ಪಟ್ಟಾಗ ಆಚರಿಸುವ ಆಚರಣೆಯೇ ಗುಗ್ಗಳ ಆಚರಣೆ. ಈ ಆಚರಣೆಯ ಕೇಂದ್ರ ದೈವ ವೀರಭದ್ರ. ವೀರಭದ್ರ ದೇವರಿಗೆ ವೀರಣ್ಣ, ಈರಣ್ಣ ಇತ್ಯಾದಿಯಾಗಿ ಕರೆಯುವ ವಾಡಿಕೆ ಇದೆ. ಸಾಮಾನ್ಯವಾಗಿ ಒಂದು ಮನೆಯ ವೀರಭದ್ರ ದೇವರು ಮತ್ತೊಂದು ಊರಿನ 'ಮನೆ ದೇವರು' ಆಗಿರುತ್ತಾನೆ. ಗುಗ್ಗಳ ಮಾಡುವ ಕಾಲವೆಂದರೆ; ವೈಶಾಖದ ಉರಿ ಬಿಸಿಲು. ಮೇಲೆ ಸುಡುವ ಸೂರ್ಯ, ಕೆಳಗೆ ಧಗಧಗಿಸುವ ನೆಲ, ಗಾಳಿಯ ಸುಳಿವಿಲ್ಲ, ನಿಸರ್ಗದಲ್ಲಿ ಹಸಿರಿನ ಉಸಿರುಗಟ್ಟಿರುವ ವಾತಾವರಣ, ಬದುಕು ಬರುಡಾಗಿರುವ ದಿನಸ ಇಂತಹ ವಾತಾವರಣದ ಮಧ್ಯಾಹ್ನದ ಸಮಯದಲ್ಲಿ ಹೆಚ್ಚಾಗಿ ಇಂತಹ ಆಚರಣೆಯನ್ನು ಆಚರಿಸಲಾಗುತ್ತದೆ. ಪರಾಕುಗಳು ಶಬ್ಧ, ಆವೇಶ ಭರಿತ 'ಅಹಾ ರುದ್ರ, ಅಹಾ ಭೈರ' ಎಂಬ ಶಬ್ಧಗಳ ಆರ್ಭಟದ ನಡುವೆ ಡೋಲು ಮತ್ತು ಸನಾಯಿಯ ನಿನಾದದೊಂದಿಗೆ ಗುಗ್ಗಳವನ್ನು ಹೊರಡಿಸಲಾಗುತ್ತದೆ. ಆ ಶಬ್ದವು ಹೆಚ್ಚು ಪ್ರದೇಶವನ್ನು ಆವರಿಸುವುದರಿಂದ, ಇಂತಹ ಕಡೆಗೆ ಗುಗ್ಗಳವನ್ನು ಹೊರಡಿಸಲಾಗಿದೆ ಎಂಬು ಸೂಚನೆ ಕಂಡುಬರುತ್ತದೆ. ಆಗ ಭಕ್ತರಲ್ಲಿ ಭಯದ ವಾತಾವರಣ ನಿರ್ಮಾಣವಾಗುತ್ತದೆ. ಲಯಕ್ಕೆ ತಕ್ಕ ತಾಳ, ತಾಳಕ್ಕೆ ತಕ್ಕ ಒಡಬುಗಳನ್ನು ಕೇಳಿದ ಭಕ್ತರು ಮೂಕವಿಸ್ಮಿತರಾಗಿರುತ್ತಾರೆ. ಇಂತಹ ಗುಗ್ಗಳ ಮದುವೆಯ ಸಂದರ್ಭದಲ್ಲಿ ಮಡಿಯಿಂದಿರುವರೆಂಬುದು ತಿಳಿದೊಡನೆ ಸಣ್ಣವರು ದೊಡ್ಡವರೆನ್ನದೇ ಅಸ್ತ್ರವನ್ನು ಹಾಕುವುದುಂಟು. ಅಸ್ತ್ರವನ್ನು ಹಾಕಿಸಿಕೊಂಡವರು ಅಳುವುದಾಗಲಿ, ಕಿರಿಚಾಡುವುದಾಲಿ ಮಾಡಿದರೆ ವೀರಭದ್ರ ದೇವರ ಕೋಪಕ್ಕೆ ಒಳಗಾದಂತೆ ಎಂದು ಭಾವಿಸಲಾಗುತ್ತದೆ.

**ಗುಗ್ಗಳ ಹೊರಡುವುದು :**

ಪೂಜಾ ಸಾಮಗ್ರಿಗಳನ್ನು ವ್ಯವಸ್ಥಿತವಾಗಿ ತಂದು ಗುಡಿಯಲ್ಲಿ ಕೊಡಗಳನ್ನು ಸಿಂಗರಿಸಿ, ನಿಗದಿತ ಸ್ಥಳದಲ್ಲಿ ಅಕ್ಕಿಯನ್ನು ಹಾಕಿ,ಮಡಿ ಬಟ್ಟೆಯನ್ನು ಹಾಸಿ ಕೊಡಗಳನ್ನಿಡುತ್ತಾರೆ. ನಂತರ ಸರ್ವ ಕಾರ್ಯಸ್ಥರು, ಮನೆಯವರು, ಮದುಮಕ್ಕಳಾದಿಯಾಗಿ ಸ್ನಾನ ಮಾಡುತ್ತಾರೆ. ಲಿಂಗಪೂಜೆಯ ನಂತರ ಕೊಡಗಳನ್ನು ಶಾಂತವಾಗಿ ಸರ್ವೋಪಚಾರಗಳಿಂದ ಪೂಜಿಸುತ್ತಾರೆ. ಮಗ್ಗಲು ಪರಡಿಗಳನ್ನಿಡುವರು. ಶ್ರೀ ಗುರುಪಾದ ತೀರ್ಥವನ್ನು ಸರ್ವರು ತೆಗೆದುಕೊಳ್ಳುವರು. ಮಡಿಯಿಂದ ತಯಾರಿಸಿದ ಪಂಚ ಪಕ್ವಾನ್ನಗಳನ್ನು ನೈವೇದ್ಯ ಮಾಡುತ್ತಾರೆ.

ಅಷ್ಟರಲ್ಲಿ ಹೊರಗಿನಿಂದ ಅಂದರೆ ಬೇರೆಯವರ ಮನೆಯಿಂದ ನಾಲ್ಕೈದು 'ವೀರಭದ್ರನ ದೇವನ' ಮೂರ್ತಿ (ಹಲಗೆ)ಗಳನ್ನು ತರಸಿದ್ದು, ಆ ಮೂರ್ತಿಗಳೂ ಸಹ ಪೂಜೆಯ ಕಾಲಕ್ಕೆ ಇರಬೇಕು. ಹೊರಗಿನ ಮೂರ್ತಿಗಳನ್ನು ತರುವಾಗ ಮೊದಲು ಅವರಿಗೆ ಉಲುಪಿ, ಕಾಯಿ, ವಗೈರ ಕೊಟ್ಟು ಆಹ್ವಾನಕ್ಕೆ ಭಿನ್ನವಿಸಿಕೊಂಡಿರುತ್ತಾರೆ. ಹೀಗೆ ಪೂಜೆ ನೈವೇದ್ಯಾಧಿ ಸರ್ವ ಕಾರ್ಯಗಳ ನಂತರ ಪುರೋಹಿತನು ಅಥವಾ ಪುರವಂತನು ಗುಗ್ಗಳ ಕೊಡಗಳಿಗೆ ಅಗ್ನಿಪುಟ ಮಾಡುತ್ತಾನೆ.

**ಅಗ್ನಿ ಪುಟ ಮಾಡುವ ಮುನ್ನ ಹೇಳುವ ಮಂತ್ರ :**

"ಹರಃ ಓಂ ಭೂರ್ಭುವಸ್ವಃ । ಏಷಾ ಮಜ್ಞಾನ ಜಂತೂನಾಂ ಸಮಸ್ತಾರಿಷ್ಟ ಶಾಂತಯೇ । ಯದ್ ಯದ್ ಭೋಧವ್ಯಮಖಿಲಂ ತದಾ ಶಂತ್ಯಾ ಬ್ರವೀಮ್ಯಹಂ । ಕ್ರಿ ಬ್ರಹಃ । ಕಾ ಈಶ್ವರಾಯ । ಕೋ ಜೀವಃ । ಕಂ ಪ್ರಕೃತಿಃ । ಕಃ ಪರಮಾತ್ಮಃ । ಕಶ್ಯಮನಃ ಕ ಸ್ಸೂರ್ಯಃ । ಕಶ್ವಂದ್ರ । ಕೇ ಸುರಾಃ । ಕೇ ಅಸುರಃ ಕೇ ಪಿಶಾಚಃ । ಕೇ ಮನುಷ್ಯಃ। ಕಿಂ ಬ್ರಹ್ಮೇತಿ ಹೋವಾಚಃ ಮಹದಾಂಕಾರ । ಪೃಥ್ವಿವ್ಯಾಪ ತೇಜೋ ವಾಯುರಾಕಾಶತ್ಮತ್ತಿದ ಬೃಹದ್ಯುಪೇಣ । ಅಂಡ ಕೋಸೇನ ಕರ್ಮಜ್ಞಾನಾರ್ಥರೂಪ। ಭಾಸ ಮಾನ ಮಧ್ವಿಯ। ಮಖಿಲೋಪಾದಿ । ವಿನುರ್ಮುಕ್ತಂ ತಯಾ ತತ್ ಸುಕಲಶಕ್ತುಪ । ಬೃಂಹಿತಮನಾದ್ಯಂತಂ । ಶುದ್ದಂ ಶಿವಂ । ಶಾಂತ ನಿರ್ಗುಣಮಿತ್ಯಾದಿ ಮನಿದ್ವಾಚ್ಚಂ । ಚೈತನ್ಯಂ ಬ್ರಾಹ್ಮ."

ಈ ಮಂತ್ರವನ್ನು ಹೇಳಿ ಗುರುಗಳ ಅಪ್ಪಣೆ ಪಡೆದು ಕೊಂಡು ಅಗ್ನಿ ಪುಟ ಮಾಡಬೇಕು (ಜ್ಯೋತಿಯಿಂದ ಜ್ಯೋತಿಯನ್ನು ಬೆಳಗಿಸಬೇಕು) ಈ ಸಮಯದಲ್ಲಿ ಸರ್ವರು ಜೈ ಘೋಷಣೆಯನ್ನು ಮಾಡುತ್ತಿರಬೇಕು. ಆಮೇಲೆ " ಹರಃ ಓಂ ಯಕ್ಷದ್ಯೂತಾಃ । ಪವಗವ । ನಗ ಪವ ಗಮಮಾಂ । ಪವಮದ್। ಗವಮನ । ಪವಮಾಂ ನಗಪವ । ಪವಮಾಂ ಧೂತಃ ॥

ಹರಃ ಓಂ ಯಕ್ಷದ್ಯೂತಾಃ ॥ ಪಿವಿಗಿವಿ । ನಿಗಿಪಿವಿ ಪಿವಿಮಾಂ । ಗಿವಿಮಾಂ ಪಿವಿಮದ್ । ಗಿವಿಮನ್ । ನಿಗಿಪಿವಿ ।ಪಿವಿದೂಂ ಧೂತಾಃ ।ಹರಃ ಓಂ ಯಕ್ಷದ್ಯೂತಾಃ । ಪುವುಗುವು । ನಂಗುಪುವು । ಪುವುಮಾಂ ಗುವುಮಾಂ ।ಪುವುಮದ್।ಗುವುಮನ್। ನುಗುಪುವು । ಪುವುಮಾಂ । ಧೂತರಃ ಹರಃ ಓಂ ಯಕ್ಷದ್ಯೂತಾಃ ॥" ಜಯನಮಃ ಪಾರ್ವತಿ ಪತೆ ಹರ ಹರ ಮಹಾದೇವ.

ಹೀಗೆಂದು ಧ್ಯಾನ ಮಾಡಿ ಜೈ ಘೋಷಣೆಯೊಂದಿಗೆ ಗುಗ್ಗಳ ಕೊಡಗಳನ್ನು ಹೊರಗೆ ತರುತ್ತಾರೆ. ಗುರು ಪಾದೋದಕವನ್ನು ಸಿಂಪಡಿಸುತ್ತಾರೆ. ಕಂಬಳಿಯನ್ನು ಹಾಸಿ ಅಥವಾ ಮಣಿಯ ಮೇಲೆ ಕೊಡಗಳನ್ನು ಇಡುತ್ತಾರೆ. ಸಮಯಕ್ಕೆ ತಕ್ಕಂತೆ ಒಡಬುಗಳನ್ನು ಹೇಳುತ್ತಾ ಪವಾಡಗಳನ್ನು ಮಾಡುವರು. ಮೇಲಿಂದ ಮೇಲೆ ಗುರು ಪಾದೋದಕವನ್ನು ಮೆರವಣಿಗೆ ಹೊರಟ ಸುತ್ತ ಸಿಂಪಡಿಸುತ್ತಿರುತ್ತಾರೆ. ಮತ್ತು ಜೈ ಘೋಷಣೆ ಮಾಡುತ್ತಾ ಗುಗ್ಗುಳದ ಮೆರವಣಿಗೆ ಮಾಡುವರು.

ಕಾರ್ಯಸ್ಥರಾದವರು, ಬೇಡಿಕೊಂಡವರು ಇಲ್ಲವೆ ಇಷ್ಟ ಉಳ್ಳುವರು ಇಚ್ಛಾನುಸಾರವಾದ ಶಸ್ತ್ರಧಾರಣೆ ಮಾಡಿಕೊಳ್ಳಬಹುದು. ಗ್ರಾಮದಲ್ಲಿ ಬೀದಿಗುಂಟ ಹೋಗುವಾಗ ಮಧ್ಯ ಮಧ್ಯ ನಿಗದಿತ ಸ್ಥಾನದಲ್ಲಿ ಗುಗ್ಗಳವನ್ನು ಕೆಳಗಡೆ ಇಡುತ್ತಾರೆ. ಆ ಸ್ಥಳದಲ್ಲಿ ಮೊದಲು ಪಾದೋದಕವನ್ನು ಸಿಂಪಡಿಸಿ ಕಂಬಳಿ (ಮಣಿ) ಮೇಲೆ ಗುಗ್ಗಳ ಕೊಡಗಳನ್ನು ಇಡುತ್ತಾರೆ. ಆ ಸ್ಥಳದಲ್ಲಿ ಅನೇಕ ಬಗೆಯ ವೀರಭದ್ರ ಒಡಬುಗಳನ್ನು ಹೇಳುತ್ತಾ ಪವಾಡಗಳನ್ನು ಮಾಡುತ್ತಾ, ವಿರವೇಶದಿಂದ ಕುಣಿದಾಡುತ್ತಾರೆ. ಆದರೆ ಗುಗ್ಗಳ ಆರದಂತೆ ಮಾತ್ರ ಬಹು ಜಾಗ್ರತೆ ವಹಿಸುವರು. ಗ್ರಾಮ ದೊಳಗೆ ಹೋಗುವಾಗ ವೀರಶೈವ ಧರ್ಮದ ಬಿರುದಾವಳಿಗಳಿಂದಲೂ, ನಂದಿಕೋಲು, ನಂದಿಧ್ವಜ ಇತ್ಯಾದಿ ಮಂಗಲ ವಾದ್ಯದೊಡನೆ ಸಂಭ್ರಮ ದಿಂದಲೂ ಜೈಘೋಷಣೆ ಮಾಡುತ್ತ ಶದ್ಧಾ ಭಕ್ತಿಯಿಂದ ಹೋಗುತ್ತಿರುತ್ತಾರೆ.

ಆಯಾ ಗ್ರಾಮ ಪದ್ಧತಿಯಂತೆ ನಿರ್ಧಿಷ್ಟ ಪಡಿಸಿದ ಸ್ಥಳಕ್ಕೆ ಹೋಗುತ್ತಾರೆ, ಅಲ್ಲಿ ಗುಗ್ಗುಳವನ್ನು ಇಟ್ಟು, ಒಡಬುಗಳನ್ನು ಹೇಳುತ್ತಾರೆ. ಕೊಡಗಳನ್ನು ಪೂಜಿಸಿ ಶಸ್ತ್ರಗಳನ್ನು ದೇಹದಿಂದ ವಿಸರ್ಜನೆ ಮಾಡುತ್ತಾರೆ. ಗುರು ಜಂಗಮಾದಿಗಳಿಗೆ ದಕ್ಷಿಣೆಯನ್ನು ಕೊಡುವರು. ನಂತರ ಅಗ್ನಿ ಪುಟವನ್ನು ಪಂಚಾಮೃತದಿಂದ ಶಾಂತ ಗೊಳಿಸುವರು. ಕೆಲವು ಕಡೆ ಈ ಶಾಂತಿ ಮಂತ್ರವನ್ನು ಹಾಡಿದ ಮೇಲೆ ಪಂಚಾಮೃತವನ್ನು ಸ್ವಲ್ಪ ಸ್ವಲ್ಪ ಹಾಕುತ್ತಾ ಶಾಂತಗೊಳಿಸುತ್ತಾರೆ. ನಂತರ ಗುರುಗಳ ಅಪ್ಪಣೆ ಪಡೆದುಕೊಂಡು ಗುಗ್ಗಳ ಕೊಡಗಳನ್ನು ಮದು ಮಕ್ಕಳ ತಲೆಯ ಮೇಲೆ ಇಡುತ್ತಾರೆ. ಶಸ್ತ್ರಧರಿಸಿದವರ ಹಾಗು ಹಿರಿಯರ ಗ್ರಾಮಪದ್ಧತಿಯಂತೆ ವಿಸರ್ಜನೆ ಮಾಡಿತ್ತಾರೆ. ಆ ಮೇಲೆ ಮನೆಗೆ ಬಂದು ಕೈಕಾಲು ಮುಖವನ್ನು ತೊಳೆದುಕೊಂಡು, ಭಸ್ಮಧಾರಣೆ ಮಾಡಿ ಕೊಂಡು ದೇವರಿಗೆ, ಗುರುಜಂಗಮರಿಗೆ, ಹಿರಿಯರಾದಿ ಆಪ್ತ ಜನರಿಗೆ ನಮಸ್ಕಾರ ಮಾಡುತ್ತಾರೆ.

ಆಮೇಲೆ ಬಂದಿರುವಂತ ಪುರವಂತರು, ಕಳಸ ಹಿಡಿದವರು, ನೆರಮನೆಯ ವೀರಭದ್ರ ದೇವರನ್ನು ತೆಗೆದು ಕೊಂಡು ಬಂದವರು, ಜಂಗಮರನ್ನು, ಎಲ್ಲ ದೈವದವರನ್ನು ಕೂಡಿಸಿ ಕೊಂಡು ರುದ್ರೂಟವನ್ನು ಮಾಡುವರು. ಈ ರುದ್ರೂಟದಲ್ಲಿ ಸವತಿ ಬೀಜದ ಹುಗ್ಗಿಯನ್ನು ಕಡ್ಡಾಯವಾಗಿ ಮಾಡಿರುತ್ತಾರೆ. ಈ ರುದ್ರೂಟವನ್ನು ಉಂಡ ಮೇಲೆ ಕಳಸ ಹಿಡಿದವರಿಗೆ ವೀರಭದ್ರ ದೇವರನ್ನು ತಂದವರಿಗೆ ಒಂದಕ್ಕೊಂದು ಪರಡಿಗಳನ್ನು ಕೊಡುತ್ತಾರೆ. ಊಟವಾದ ಮೇಲೆ ಅವರು ತೆಗೆದುಕೊಂಡು ಅವರ ಮನೆಗೆ ಹೋಗುತ್ತಾರೆ.

ಕೆಲವು ಗ್ರಾಮಗಳಲ್ಲಿ ಗುಗ್ಗಳದ ಕೊಡಗಳನ್ನು ವೀರಭದ್ರ ದೇವಸ್ಥಾನ ಹತ್ತಿರ ತೆಗೆದುಕೊಂಡು ಹೋಗುತ್ತಾರೆ. ಆ ದೇವಸ್ಥಾನವನ್ನು ಪೂಜೆ ಮಾಡುವಂತಹ ಪೂಜಾರಿಯಿಂದ ವೀರಭದ್ರನಿಗೆ ತೆಗೆದು ಕೊಂಡು ಹೋಗಿರುವ ಎಲ್ಲಾ ಪೂಜಾ ಸಾಮಾಗ್ರಿಗಳನ್ನು ಕೊಡುತ್ತಾರೆ. ಪೂಜೆ ಮಾಡಿಸಿ ಮಂಗಳಾರತಿಯನ್ನು ಮಾಡಿಸುತ್ತಾರೆ. ಗುಗ್ಗಳ ಕೊಡಗಳನ್ನು ವೀರಭದ್ರ ದೇವರಿಗೆ ಬೆಳಗಿ, ಅವುಗಳನ್ನು ಮದುಮಕ್ಕಳ ಜೊತೆಯಲ್ಲಿ ಬೆಳಗಿಸಿ, ಅಲ್ಲಿ ದಕ್ಷ ಬ್ರಹ್ಮನ ಜ್ಞಾಪಕಾರ್ಥವಾಗಿ ಬಾಳೆಗಿಡವನ್ನು ಕಡಿಯುವರು. ಈ ಗಿಡವನ್ನು ಕಡಿಯುವುದಕ್ಕೆ ಮುಂಚಿತವಾಗಿ ಒಂದು ಒಡಪನ್ನು ಹೇಳುತ್ತಾರೆ ಬಾಳೆಗಿಡ

ಕಡಿದು ಶಸ್ತ್ರದಿಂದ ಗಿಡದ ತಲೆಯನ್ನು ಚುಚ್ಚುವ ಪದ್ಧತಿಯನ್ನು ಮಾಡುವರು. ಕಾರಣ ವೀರಭದ್ರ ದೇವರು ದಕ್ಷ ಬ್ರಹ್ಮನಿಗೆ ಹರಿದಲೆಯನ್ನು ತೆಗೆದು ಕುರಿತಲೆಯನ್ನು ಇಟ್ಟ ಎನ್ನುವಂತೆ ಈಗಿನ ಕಾಲದಲ್ಲಿ ಬಾಳೆಗಿಡವನ್ನು ಕಡಿಯುವ ಪದ್ಧತಿ ಇದೆ. ಈ ಗುಗ್ಗಳ ಕೊಡಗಳನ್ನು ಎಲ್ಲಾ ಕಾರ್ಯಗಳು ಮುಗಿದ ಮೇಲೆ ಆ ದೇವಸ್ಥಾನದ ಕುಂಬಿಗಳ ಮೇಲೆ ಇಡುವರು. ಇದನ್ನು ಇಡುವುದಕ್ಕಿಂತ ಮುಂಚೆ ಮೊದಲು ಈ ಕೆಳಗಿನ ಶಾಂತಿ ಮಂತ್ರವನ್ನು ಜಪಿಸುವರು.

''ಹರಃ ಓಂ ಡ್ಯೌಃ ಶಾಂತಿ ರಂತ ರಿಕ್ಷಗಂ ಶಾಂತಿಃ ಪೃಥೀವಿ ಶಾಂತಿರೂಪಾಃ । ಶಾಂತಿ ರೋಕ್ಷಧಯಃ ಶಾಂತಿಃ । ವನಸ್ಪತಿಯಃ ಶಾಂತಿ ವ್ವಿಶ್ವೇದೇವಾಃ । ಶಾಂತಿರ್ಬ್ರಹ್ಮ ಶಾಂತಿಃ ಸರ್ವಗಂ ಶಾಂತಿಃ। ಶಾಂತಿ ರೇವ ಶಾಂತಿಃ ಸಮಾ ಶಾಂತಿ ರೇಧಿ ॥ ಓಂ ಸರ್ವೆಪಾ ಮೇ ಮೈನಮೇ ತದ್ವೇದಾನಾಗಂ ರಸೇನಾ ಭಿಷಂಚಲೆ ॥ ಓಂ ಶಾಂತಿಃ ಶಾಂತಿಃ ಸುಶಾಂತಿರ್ಭವತು । ಸರ್ವಾರಿಷ್ಟ ಶಾಂತಿ ಭರ್ವತು । ಅನೇಕ ಶ್ರೀರುದ್ರ ಕಾರ್ಯ ಕರ್ಮಣಾ ಕಖಿತೇನ ಶ್ರೀ ಭವಾನೀ ಶಂಕರ ಮಹಾರುದ್ರಪ್ರಿಯತಾಂ ನಮಮ । ಓಂ ಸದಾಶಿವ ರ್ಪಣಮಸ್ತು ॥ ಜಯನಮಃ ಪಾರ್ವತಿಪತೇ ಹರಹರ ಮಾಹಾದೇವ. ಇಲ್ಲವೇ ವೀರಶೈವ ಪಂಚ ಪೀಠಗಳಲ್ಲೊಂದಾದ ರಂಬಾಪುರಿ (ಬಾಳೆಹೊನ್ನುರು) ಪೀಠದ ಮೂಲಗೋತ್ರ ಪುರುಕ್ಷನು ವೀರಭದ್ರನಾಗಿರುವುದರಿಂದ ಆ ವೀರ ಗೋತ್ರಕ್ಕೆ ಸಂಬಂಧಿಸಿದವರ ಮನೆಯಲ್ಲಿ ಗುಗ್ಗಳ ಕಾರ್ಯವನ್ನು ಆಚರಿಸುತ್ತಾರೆ.

**ಗುಗ್ಗಳ ಪದದ ಅರ್ಥ :**

೧) ಗುಗ್ಗಳ :-ಗುಗ್ಗಿಳ' ನೋ ಗುಗ್ಗಿಳ,

ಗುಗ್ಗಳ ಗುರ್ಗಳ (ನಾ) ಗುಗ್ಗುಲ

''ಕುಂಭಉವಾಖಲಿಕಂ, ಕೌಶಿಕಃ ಗುಗ್ಗುಲುಃ

ಪುರ:- ಗುಗ್ಗಳ ಗಿಡ, ಯರ್ಾಳದ ಗಿಡ, ಧೂಪದ ಗಿಡ'' (ಸಿದ್ದಾಂತ೧೦೫)

ಗುಗ್ಗಳ :- ಗುಗ್ಗಳವನ್ನು ಸುದ್ಧಿ ಮಾಡಿ ಕ್ಕೊಂಡು ಪೂಟ್ಟವಂ ಮಾಡಿ ತುಪ್ಪದ ಅನುಪಾನದಲಿ ಕೂಡಲು ಗುದು ವಾತ ಮಾಣ್ಗು (ವಾತಾಚಿ೮.೯)

ಗುರ್ಗಳ :- ಗುರ್ಗುಳ ಹಾಲ ಮಡ್ಡಿಯ ಮಹಿಸಾಕ್ಷಯ ವೆಗ್ಗಳ ಲೋಬಾನಕ ಪ್ರರಾಳ (ದೇವಾಂಪು ೬-೬೦) ಚಂದನರಿ ಗುರ್ಗು (ಪಾಠಂಗ್ಗು) ಳ ಮಾಚಲ್ ಬನ್ನಿಪನಗಳೂಪ್ಪಿ ಕುರ್ಮಾ ಕಾಡೊಳತ್ತಂ (ಶಬಶಂ ೩-೩೩ ) ಶಿವಲಿಂಗಮಂ ತೈಲ ಗುಡ ಸಿಕ್ಥ ಗುರ್ಗುಳ ಸರ್ಜರಸಗಳಿಂದಷ್ಟೆ ಬಂಧನವನಸಗತೆ ( ಮಾಹಾರ್ವಿ -೧೮ ) (ಕನ್ನಡ ನಿಘಂಟು೧೯೭೭ )

೩. ಗುಗ್ಗಳ :- ಗುಗ್ಗಳ (ಸಂ) ನಾ ಗುಗ್ಗಲ, ಒಂದು ಬಗೆಯ ಸುಗಂಧ ಧೂಪ ದ್ರವ್ಯ ಲೋಭಾನ ಕೌಶಕ ವೃಕ್ಷ (ಸಚಿತ್ರ ಕನ್ನಡ ಕನ್ನಡ ಕಸ್ತೂರಿ ಕೋಶ)

ಈ ಮೇಲಿನ ಪದ ಕೋಶಗಳ ಪ್ರಕಾರ ಗುಗ್ಗಳ ಎಂದರೆ ವೀರಶೈವ ಜನಾಂಗದವರು ತಮ್ಮ ಮನೆದೇವರಾದ ವೀರ ಭದ್ರನು ಹಿಂದೆ ಅರವತ್ತ್ಮೂರುಮಂದಿ ರಾಕ್ಷಸರನ್ನು ಕೊಂದು ಅವರಲ್ಲಿ ಕೆಲವು ರಾಕ್ಷಸರ ತಲೆಗಳನ್ನು ಗುಗ್ಗುಳದ ಕೊಡ ಮಾಡಿ ದೇಹದ ಕೆಲ ಭಾಗಗಳನ್ನು ಗುಗ್ಗುಳದ ಸಾಮಾನುಗಳನ್ನಾಗಿ ಮಾಡಿರುವಂತಹ ಸಂದರ್ಭವನ್ನು, ವೀರಭದ್ರನ ಭಕ್ತರು ತಮ್ಮ ಮನೆದೇವರ ಜ್ಞಾಪಕಾರ್ಥವಾಗಿ ದೇವರನ್ನು ಸಂತೃಪ್ತಿಡಿಸುವ ಸಲುವಾಗಿ ಈ ಗುಗ್ಗಳ ಕಾರ್ಯವನ್ನು ಮಾಡುತ್ತಾರೆ. ಗುಗ್ಗುಳವನ್ನು ರಚನೆ ಮಾಡಲು ಮೊದಲು ಕುಂಬಾರನಿಗೆ ಕೊಡಗಳನ್ನು ತಯಾರಿಸಲು ಹೇಳುತ್ತಾರೆ. ಅಗ್ನಿಗಾಗಿ ಬೇಕಾಗಿರುವ ಎರಡು ಕಟ್ಟಿಗೆಗಳನ್ನು ತರಲಾಗುತ್ತೆ. ಈ ಕಟ್ಟಿಗೆಗಳೂ ಗಂಧದವು ಇಲ್ಲವಾದರೆ ಇಂಗಳ ಅಥವಾ ಬಸರೀ ಮರದ ಕಟ್ಟಿಗೆಗಳಾದರೂ ಆಗಬಹುದು. ಬಡಿಗೆಯವನು ಸುಮಾರು ಒಂದುವರೆ ಮೊಳ ಉದ್ದ ಹಾಗೂ ಮೂರು ಇಂಚು ದಪ್ಪನೆಯ ಈ ಕಟ್ಟಿಗೆಗಳನ್ನು ಕತ್ತರಿಸುತ್ತಾನೆ. ನಂತರ ಕೊಡದೊಳಗೆ ಇಟ್ಟು ಅದಕ್ಕೆ ಕಣಕವನ್ನು ಮತ್ತು ನೆನೆ ಹಾಕಿದ ಹತ್ತಿ ಕಾಳನ್ನು ಕೊಡಕೊಳಗೆ ತುಂಬುವರು. ಕಾಕುರುಳಿನ ಬೂದಿಯನ್ನು ಹಾಕುವರು. ತುಪ್ಪದಲ್ಲಿ ನೆನೆಹಾಕಿದ ಬಟ್ಟೆಯಿಂದ ಸಿಂಬೆ ಮಾಡಿ ಕಟ್ಟಿಗೆ ಮೇಲೆ ಇಟ್ಟಿರುವರು. ಆ ಸಿಂಬೆಗಳಿಗೆ ಕರ್ಪೂರದ ಮೂಲಕ ಜ್ಯೋತಿ ಬೆಳಗಿಸುವುದಕ್ಕೆ ಗುಗ್ಗಳ ಎಂದು ಕರೆಯುವರು

**ಗುಗ್ಗಳದ ರಚನೆ :**

ಮಣ್ಣಿನ ಕೊಡಗಳು ಎರಡು ಅಥವಾ ನಾಲ್ಕು, ಉಲುಪಿ (ಅಕ್ಕಿ,ಬೆಲ್ಲ, ಕಡಲೆ ಬೇಳೆ, ಗೋಧಿಹಿಟ್ಟು, ಎಲೆ ಅಡಿಕೆ, ಉತ್ತುತ್ತಿ, ಕೊಬ್ರಿಬಟ್ಟಲು, ಅರುಶಿನ, ಕುಂಕುಮ). ಕೊಡಗಳನ್ನು ಇಡುವ ಜಾಗಕ್ಕೆ ಜೋಳ ಇಲ್ಲವೆ ಅಕ್ಕಿಯನ್ನು ಹಾಸುವರು. ಹಸನಾದ ಗೋಧಿಹಿಟ್ಟು ನಾಲ್ಕರಿಂದ ಐದು ಸೇರು. ಕರ್ಪೂರದ ಬಂಡನೆಗಳು, ಹೊಸಬಟ್ಟೆ ಮೂರುಗಜ, ಬಿಳೀಕಂಬಳಿ, ಕಾಕುರುಳು, ಬೂದಿ, ಕುಸುಬೆ ಎಣ್ಣೆ, ಅಥವಾ ಗುರಾಳೂ ಎಣ್ಣೆ, ವಸ್ತ್ರಗಳೂ (ಕೊಡಗಳನ್ನು ಹಿಡಿಯಲಿಕ್ಕೆ), ನಿಂಬೆಹಣ್ಣುಗಳು, ತೆಂಗಿನ ಕಾಯಿಗಳೂ, ಪಂಚಪಕ್ವಾನ, (ಹುಗ್ಗಿ, ಹೋಳಿಗೆ, ಎಣ್ಣೆಹೋಳಿಗೆ, ಪಾಯಸ, ಉಂಡೆ)ಚಕ್ಕಿಗಳು :- ಶ್ರೀಗಂಧ, ಕವಳಿ, ದೇವದಾರಗಳಲ್ಲೊಂದು) ಪರಡಿಗಳು (ಪರಡಿ ಅಂದರೆ ವಸ್ತ್ರ ಇದರಲ್ಲಿ ಕೊಬ್ರಿ ಬಟ್ಟಲು, ಅಡಿಕೆ, ಉತ್ತುತ್ತಿ ಅರಿಶಿನ, ನಿಂಬೆಹಣ್ಣು, ವಾಲಿಪತ್ರ, ದಕ್ಷಿಣೆ ಇವಿಷ್ಟನ್ನು ವಸ್ತ್ರದಲ್ಲಿ ಇಟ್ಟು ಕಟ್ಟಬೇಕು.) ಪಂಚಾಮೃತ (ಬಾಳೆಹಣ್ಣು, ಹಾಲು, ತುಪ್ಪ, ಮೊಸರು, ಗೋಮೂತ್ರ ) ಗುರು ಪಾದೋದಕ ಮತ್ತು ಬಸ್ಮ ಗಂದಾದಿ ಪೂಜೆಯ ಸಾಮಾಗ್ರಿಗಳು. ಈ ಎಲ್ಲಾ ಸಾಮಾಗ್ರಿಗಳೂ ಗುಗ್ಗಳ ರಚಿಸಲುಬೇಕು.

**ಗುಗ್ಗಳ ತಯಾರಿಸುವ ಕ್ರಮ :-**

ಮದುವೆ ಇನ್ನು ಎರಡು ತಿಂಗಳು ಇದೇ ಎಂದಾಗ ಮನೆ ಹಿರಿಯರಾದವರು ಕುಂಬಾರನ ಮನೆಗೆ ಹೋಗಿ ನಮ್ಮ ಮನೆಯಲ್ಲಿ ಗುಗ್ಗುಳ ಹೊರಡಿಸುತ್ತೇವೆ. ನೀವು ನಮಗೆ ಗುಗ್ಗಳ ಕೊಡವನ್ನು ತಯಾರಿಸಿ ಕೊಡಬೇಕು ಎಂದು ಹೇಳಿ ಬರುತ್ತಾರೆ. ಗುಗ್ಗಳದ ಕಾರ್ಯ ಮೂರುದಿನ ಇದೆ ಎಂದಾಗ ಕೊಡಗಳನ್ನು ವಾದ್ಯಗಳೊಂದಿಗೆ ಉಲುಪಿ ಸಮೇತ ಒಂದುನೂರು ಒಂದು ರೂಪಾಯಿ ದಕ್ಷಿಣೆಯನ್ನು ಅದರಲ್ಲಿ ಇಟ್ಟು ತರುವರು. ಗುಗ್ಗಳದ ಕೊಡದ ಜೊತೆಗೆ ಮದುವೆಯಲ್ಲಿ ಸುರುಗಿ ಎರೆಯಲು ಕೇಲುಗಳನ್ನು ಸಹ ತರುವರು. ಅವುಗಳಿಗೆ ಶಾಸಕ್ಕಿ ಹಾಕಿ ಪೂಜೆಯನ್ನು ಮಾಡಿ ಮದುವೆಯ ಮನೆಗೆ ತೆಗೆದು ಕೊಂಡು ಬರುತ್ತಾರೆ.

ಮೂಹೂರ್ತ ನಾಳೆ ಇದೆ ಎನ್ನುವಂತೆ ಇಂದಿನ ರಾತ್ರಿ ಪುರವಂತರು ಮದುವೆ ಮನೆಗೆ ಬರುತ್ತಾರೆ. ಅವರಿಗೂ ಸಹ ಹಣ ಮತ್ತು ಸಂಪ್ರದಾಯದ ಪ್ರಕಾರ ಉಲುಪಿಯನ್ನು ಕೊಟ್ಟು ಇಂತಹ ದಿನದಂದು ನಮ್ಮ ಮನೆಗೆ ಗುಗ್ಗಳ ಕಾರ್ಯವನ್ನು ಮಾಡಿಕೊಡಲು ಬರಬೇಕು ಎಂದು ಹೇಳುತ್ತಾರೆ. ಅವರು ಒಪ್ಪಿ ಹೇಳಿದ ಆ ದಿನವೇ ಪುರವಂತರು ಬರುತ್ತಾರೆ. ಆ ರಾತ್ರಿ ದೇವರ ಮನೆಯನ್ನು ಮೊದಲು ಸಾರಿಸುತ್ತಾರೆ. ಪುರವಂತರು ಗುಗ್ಗಳದ ಕೊಡಗಳನ್ನು ಕಟ್ಟಲು ಅಣಿಮಾಡುತ್ತಾರೆ. ಆ ದಿನದಂದು ಪುರವಂತರು ಉಪವಾಸ ಮಾಡುವ ರೂಢಿ ಇದೆ.

ಅದೇ ರಾತ್ರಿ ಸುಮಾರು ಹನ್ನೆರಡು ಗಂಟೆಯಿಂದ ಈ ಕಾರ್ಯಕ್ರಮ ಪ್ರಾರಂಭವಾಗುತ್ತದೆ. ನಾಲ್ಕು ಮಂದಿ ಯಜಮಾನ ಪುರವಂತರು ಕೊಡಗಳನ್ನು ಮೊದಲು ಪೂಜೆಮಾಡಿ ಕೊಡದ ತಳ ಭಾಗವನ್ನು ಮೊದಲು ತೆಗೆದು ಕೊಳ್ಳುವರು. ಮೊದಲೇ ಗಂಧದ ಕಟ್ಟಿಗೆಯನ್ನು ಕಮ್ಮಾರನ ಕೈಯಲ್ಲಿ ಗುಗ್ಗುಳಕ್ಕೆ ಬರುವಂತಹ ರೀತಿಯಲ್ಲಿ ಕೆತ್ತಿಕೂಡಲು ಕೊಟ್ಟಿರುವರು. ಇದಕ್ಕೆ ಕಮ್ಮಾರನಿಗೆ ಉಲುಪಿಯನ್ನು ಕೊಡಬೇಕು. ಅದೇ ರೀತಿ ಮೊದಲೇ ಬಟ್ಟೆಯಿಂದ ನಾಲ್ಕು ನಾಲ್ಕು ಗಾತ್ರದಲ್ಲಿ ಅದನ್ನು ಕತ್ತರಿಸಿ ಒಂದು ಕೊಡಕ್ಕೆ ಮೂರು ಮೂರು ಸಿಂಬೆಗಳನ್ನು ಮಾಡುತ್ತಾರೆ. ಅದರಂತೆ ಆರು ಸಿಂಬೆಗಳು ತಯಾರಾದ ಮೇಲೆ ಅವುಗಳನ್ನು ಎರಡು ಅಥವಾ ನಾಲ್ಕು ಕೆ.ಜಿ. ಆಕಳ ತುಪ್ಪದಲ್ಲಿ ನೆನೆಸಿ ಇಡುತ್ತಾರೆ. ಇದೆಲ್ಲವನ್ನು ಅದೇ ದಿನದಂದು ಮಡಿಯಿಂದ ಮಾಡಿರುತ್ತಾರೆ. ಕೊಡದ ತಳಭಾಗ ಒಡೆದಿರುತ್ತಾರೆ. ಕೊಡದ ಬಾಯಿಯನ್ನು ಕೊಳಗಡೆ ಇಟ್ಟು ಅದಕ್ಕೆ ಒಂದು ಕೊಬ್ಬರಿ ಬಟ್ಟಲನ್ನು ಇಡುವರು. ಅದಕ್ಕೆ ಮೊದಲು ಗಂಧದ ಕಟ್ಟಿಗೆಯನ್ನು ಇಟ್ಟು ಒಂದು ಕೊಡಕ್ಕೆ ಎರಡು ಕೇ.ಜಿ ಹಾಗೆ ಗೋದಿ ಬೀಸಿ ಸೋಸಿ ತೆಗೆದ ಹಿಟ್ಟನ್ನು ಕಣಕದ ರೂಪದಲ್ಲಿ ನಾದಿ ಕೊಡಕ್ಕೆ ತುಂಬುವರು. ಎರಡುವರೆ ಕೇ.ಜಿ. ನೆನೆಸಿದ ಹತ್ತಿಕಾಳು ತುಂಬುವರು. ಆಕಳು ಸಗಣಿಯಿಂದ ಮಾಡಿದ ಕುಳ್ಳುಗಳನ್ನು ಸುಟ್ಟಾಗ ಬರುವಂತಹ ಬೂದಿಯನ್ನು ತುಂಬಿ ಅಲ್ಲಿಂದ ಮೇಲಕ್ಕೆ ಬಂದಿರುವ ಕಟ್ಟಿಗೆಗೆ ತುಪ್ಪದಲ್ಲಿ ನೆನೆಸಿದ ಬಟ್ಟೆಗಳನ್ನು ಸುತ್ತಿ ಸಿಂಬೆಗಳನ್ನು ಹಂತ ಹಂತವಾಗಿ ಇಡುತ್ತಾರೆ.

**ಇನ್ನು ಕೆಲವು ಕಡೆ ಗುಗ್ಗಳವನ್ನು ಈ ಕೆಳಗೆ ಹೇಳಿದ ರೀತಿಯಲ್ಲಿ ರಚಿಸುವರು:**

ಮೊದಲು ಕುಂಬಾರನಿಗೆ ಕೊಡಗಳನ್ನು ಮಾಡಲಿಕ್ಕೆ ಹೇಳುತ್ತಾರೆ. ಕಾರ್ಯ ಕರ್ತನ ಇಚ್ಛೆಯ ಮೇರೆಗೆ ೨-೪ ಹೇಳವದು ( ಒಂದು ಲಗ್ನಕ್ಕೆ ಎರಡು ಕೊಡ). ಗ್ರಾಮದಲ್ಲಿಯೇ ಕುಂಬಾರರಿದ್ದರೆ ಉಲುಪಿ ಕೊಟ್ಟು ತರಬಹುದು. ಪರಸ್ಥಳದವರಿದ್ದರೆ ಕೊಡಗಳನ್ನು ತಂದನಂತರ ಉಲುಪಿ ಕೊಡಬಹುದು.

ತಂದ ಕೊಡಗಳನ್ನು ಒಂದು ಸ್ಥಳದಲ್ಲಿ ಮಡಿಯಿಂದ ಸಾರಣೆಮಾಡಿ ರಂಗವಲ್ಲಿಯನ್ನು ಹಾಕುವರು. ಜೋಳ ಇಲ್ಲವೆ ಅಕ್ಕಿಯನ್ನು ಒಂದೊಂದು ಸೇರಿನಂತೆ ಗುಡ್ಡೆಗಳನ್ನು ಮಾಡುವರು. ನಂತರ ಗುಗ್ಗಳಕ್ಕೆ ಸಿದ್ಧ ಮಾಡಿದ ಕೊಡಗಳನ್ನಿಟ್ಟು ಗುರುಪಾದೋದಕವನ್ನು ಸಿಂಪಡಿಸಿ ಪೂಜೆಯನ್ನು ಮಾಡುವರು. ಪದ್ಧತಿಯ ಪ್ರಕಾರ ಕೊಡಗಳ ತಳದ ಭಾಗವನ್ನು ಒಡಯಲಿಕ್ಕೆ ಪ್ರಾರಂಭಿಸುವರು. ಬಲ್ಲವರು ಒಡೆಯುತ್ತಾರೆ. ತಯಾರು ಮಾಡಿದ ಕೊಡಗಳಲ್ಲಿ ಮೊದಲು ಕಣಕವನ್ನು ೩-೪ ಇಂಚಿನಷ್ಟು ದಪ್ಪಹಾಕಿ, ಮಧ್ಯದಲ್ಲಿ

ಚಕ್ಕಿಗಳನ್ನು ಒಂದಕ್ಕೊಂದು ಹತ್ತಿ ದುಂಡಗೆ ಸರಿಯಾಗಿ ನೆಡುತ್ತಾರೆ. ಚಕ್ಕಿಗಳ ೧೧ ಇಂಚಿನಿಂದ ೨೧ ಇಂಚಿನವರೆಗೆ ಉದ್ದವಿದ್ದು ೧ ಇಂಚು ದಪ್ಪವಾದ ಮೂರು ಏಣಿನ ಚಕ್ಕೆಗಳಿರಬೇಕು. ನಂತರ ಕಣಕದ ಮೇಲೆ ಕಾಕುರುಳನ್ನು ( ಆಕಳ, ಇಲ್ಲವೆ ಎತ್ತಿನ ) ೩-೪ ಇಂಚಿನಷ್ಟು ದಪ್ಪವಾಗಿ ಹಾಕಿ (ಬಟ್ಟಿನ ಮೇಲೆ ಸರಿಯಾಗುವಂತೆ), ಸುತ್ತಲೂ ಸರಿಯಾಗಿ ಘಟ್ಟಿಯಾಗುವಂತೆ ಮಾಡುತ್ತಾರೆ. ಎಣ್ಣೆಯಲ್ಲಿ ನೆನೆ ಹಾಕಿ ಹದಮಾಡಿದ ಅರಿವೆಯಲ್ಲಿ ಕಟ್ಟ ಚಕ್ಕೆಯ ಮಧ್ಯದಲ್ಲಿಡಬೇಕು. ಹಸನಾದ ಹತ್ತಿಕಾಳನ್ನೂ ಇಡಬೇಕು. ಮಡಿಯ ಬಟ್ಟೆಯಿಂದ ಸರಿಯಾಗಿ ಹುರಿಮಾಡಿ ತಯಾರಿಸಿದ ಶಿಂಬೆಗಳನ್ನು ಎಣ್ಣೆಯಲ್ಲಿ ನೆನೆಯಿಟ್ಟಿರುತ್ತಾರೆ. ಅದನ್ನು ಹಿಂಡಿ ಚಕ್ಕೆಯ ಸುತ್ತಲೂ ಬಿಗಿಯಾಗುವಂತೆ ತಳಕ್ಕೆ, ಮಧ್ಯಭಾಗಕ್ಕೆ ಮೇಲಿನ ಭಾಗಕ್ಕೆ (ತುದಿಗೆ ಸ್ವಲ್ಪ ಬಿಟ್ಟು), ಹೀಗೆ ೩-೪-೫ ಶಿಂಬೆಗಳನ್ನು ಹಾಕಬೇಕು. ಈ ಶಿಂಬೆಗಳ ಮೇಲೆ ಕರ್ಪೂರ ಇಟ್ಟು ಚಕ್ಕೆಯ ತುದಿಗೆ ಕೊಬ್ಬರಿ ಬಟ್ಟಲನ್ನು ಬೋರಲು ಹಾಕಬೇಕು.

ಗುಗ್ಗಳ ಕೊಡಗಳನ್ನು ತಯಾರಿಸಿದ ಮೇಲೆ ಒಂದು ಸ್ಥಳದಲ್ಲಿ ಅಕ್ಕಿಯನ್ನು ಹಾಕಿ, ಮಡಿ ಬಟ್ಟೆಯನ್ನು ಹಾಸಿ(ಅಡ್ಡಣಿಗೆಗಳ ಮೇಲೆ)ಕೊಡಗಳನ್ನಿಡುವರು. ನಂತರ ಸರ್ವ ಕಾರ್ಯಸ್ಥರು, ಮನೆಯವರು, ಮದು ಮಕ್ಕಳಾದಿಯಾಗಿ, ಸ್ನಾನಮಾಡಿ ಲಿಂಗಪೂಜೆಯ ನಂತರ ಕೊಡಗಳನ್ನು ಶಾಂತವಾಗಿ ಸರ್ವಪೂಜೋ ಪಚಾರಗಳಿಂದ ಪೂಜಿಸುವರು. ಕೊಡಗಳ ಪಕ್ಕದಲ್ಲಿ ಪರಡಿಗಳನ್ನಿಡುವರು. ಶ್ರೀಗುರುಪಾದ ತೀರ್ಥವನ್ನು ಸರ್ವರು ತೆಗೆದು ಕೊಳ್ಳುವರು. ಮಡಿಯಿಂದ ತಯಾರಿಸಿದ ಪಂಚ ಪಕ್ವಾನ್ನಗಳನ್ನು ನೈವೇದ್ಯ ಮಾಡ ಬೇಕು.

**ಗುಗ್ಗುಳದ ಪ್ರಕಾರಗಳು :**

ಗುಗ್ಗಳ ಮಾಡುವುದರಲ್ಲಿ ಮೂರು ಪ್ರಕಾರಗಳಿವೆ.

೧) ಶರಬಿ ಗುಗ್ಗಳ

೨) ಪಟದ ಗುಗ್ಗಳ

೩) ಪಾದ ಗುಗ್ಗಳ ಅಥವಾ ಬೋಡುಗುಗ್ಗಳ ಎಂದು ಮೂರು ಪ್ರಕಾರಗಳಿವೆ.

**೧) ಶರಬಿ ಗುಗ್ಗಳ :** ''ಶರಬಿ'' ಗುಗ್ಗಳವನ್ನು ತಯಾರಿಸಲು ಮೊದಲು ಮಡಿಕೆಯನ್ನು ಕುಂಬಾರನ ಮನೆಯಿಂದ ತರುವರು. ಹಿಂದಿನ ದಿನ ನೆಲ್ಲುಹುಲ್ಲನ್ನು ನೀರಿನಲ್ಲಿ ನೆನೆ ಇಟ್ಟಿರುತ್ತಾರೆ. ಆ ಕೊಡದ ಸುತ್ತಲು ಹುಲ್ಲನ್ನು ಇಡುವರು. ಅದಕ್ಕೆ ನಿಂಬೆಹಣ್ಣನ್ನು ನಿಲ್ಲಿಸುತ್ತಾರೆ. ಅದರ ಮಧ್ಯ ಒಂದು ಕೊಬ್ರಿ ಬಟ್ಟಲಿನ ಗಾತ್ರದಷ್ಟು ಜಾಗ ಬಿಟ್ಟಿರುತ್ತಾರೆ. ಅದರ ಮಧ್ಯದಲ್ಲಿ ಗಂಧದ ಕಟ್ಟಿಗೆ ಯನ್ನು ಇಡುವರು. ಅದಕ್ಕೆ ತುಪ್ಪದಲ್ಲಿ ನೆನೆ ಹಾಕಿದ ಬಟ್ಟೆಯನ್ನು ಸುತ್ತಿ ದೀಪವನ್ನು ಬೆಳಗಿಸುವದಕ್ಕೆ ಶರಬಿಗುಗ್ಗಳವೆಂದು ಕರೆಯುವರು. ಈ ಗುಗ್ಗಳದ ಆಚರಣೆ ಹೆಚ್ಚಾಗಿ ರಾಣೇಬೆನ್ನೂರು,ಧಾರವಾಡ,ಗದಗ ಮುಂತಾದ ಕಡೆಗಳಲ್ಲಿ ಹೆಚ್ಚಾಗಿ ಕಂಡು ಬರುತ್ತದೆ. ಆದರೆ ಈ ಪ್ರಕಾರದ ಗುಗ್ಗಳವು ಹೂವಿನಹಡಗಲಿ ತಾಲೂಕಿನಲ್ಲಿ ಆಚರಣೆಯಲ್ಲಿ ಕಾಣುವುದಿಲ್ಲ.

**೨) ಪಟದ ಗುಗ್ಗಳ:** 'ಪಟದ ಗುಗ್ಗಳ'ವೆಂದರೆ ಮಡಿಕೆಯ ತಳಭಾಗವನ್ನು ಒಡೆಯುವರು. ನಂತರ ಮೇಲಿನ ಭಾಗಕ್ಕೆ ಮತ್ತು ಕೆಳಗಿನ ಭಾಗಕ್ಕೆ ಸರಿಯಾಗಿ ಹೊಂದುವಂತೆ ಬಿದಿರಿನಿಂದ ತ್ರಿಕೋನಾಕಾರವಾಗಿ ಮಾಡಿದ ಚಟ್ಟನ್ನು ಕೊಡಗಳ ಹೊರ ಭಾಗದಲ್ಲಿ ಕಟ್ಟುವರು. ಅದಕ್ಕೆ ಗೋದಿಹಿಟ್ಟು, ಹತ್ತಿಕಾಳು, ಬೂದಿ, ಗಂಧದಕಟ್ಟಿಗೆ ಎಲ್ಲವನ್ನು ಇಡುತ್ತಾರೆ. ಹೊರಗಡೆ ಬಣ್ಣ ಬಣ್ಣದ ಹಾಳೆಗಳಿಂದ ಅಲಂಕಾರಗೊಳಿಸುವರು. ಈ ಆಚರಣೆ ಬಳ್ಳಾರಿ ಜಿಲ್ಲೆಯ ಹಗರಿ ಬೊಮ್ಮನಹಳ್ಳಿ ತಾಲೂಕಿನ ಹೊಸಕೇರಿ ಎಂಬ ಗ್ರಾಮದಲ್ಲಿ ಆಚರಣೆಯಲ್ಲಿದೆ.

**೩) ಸಾದಾ ಗುಗ್ಗಳ ಅಥವಾ ಬೋಡುಗುಗ್ಗಳ :** ಈ ಪ್ರಕಾರದ ಗುಗ್ಗಳವು ಬಳ್ಳಾರಿ ಜಿಲ್ಲೆಯ ಹೂವಿನಗಡಗಲಿ ತಾಲೂಕಿನಲ್ಲಿ ಹೆಚ್ಚಾಗಿ ಕಂಡುಬರುತ್ತದೆ. ಕೊಡದ ತಳ ಭಾಗವನ್ನು ತೆಗೆದು ಕಣಕ, ಹತ್ತಿಕಾಳು, ಬೂದಿ ಗಂಧದ ಕಟ್ಟಿಗೆ ಅದಕ್ಕೆ ಸುತ್ತಿದ ಕಾಟನ್ ಬಟ್ಟೆ ಮತ್ತು ಕರ್ಪೂರಗಳಿಂದ ತಯಾರಿಸುತ್ತಾರೆ. ಇದಕ್ಕೆ ಹೊರಗಡೆ ವಿಭೂತಿಯಿಂದ ಪೂಜೆಯನ್ನು ಮಾಡುವರು ಹೂವುಗಳಿಂದ ಅಲಂಕಾರವನ್ನು ಮಾಡಿರುತ್ತಾರೆ. ಹೀಗೆ ಸಾದಾ ಗುಗ್ಗಳವನ್ನು ತಯಾರಿಸುತ್ತಾರೆ.

**ಗುಗ್ಗಳ ಆಚರಣೆಯ ಮಹತ್ವದ ಹಿನ್ನೆಲೆ :**

ಗುಗ್ಗಳ ಆಚರಣೆಯು ವರ್ಷಾನು ವರ್ಷಗಳಿಂದ ನಡೆದು ಕೊಂಡು ಬಂದಿರುವಂತಹದ್ದು. ಎಲ್ಲಾ ಆಚರಣೆಗಳನ್ನು ಜನಪದರು ಮುಂದುವರೆಸಿಕೊಂಡು ಬಂದಿರುವರು. ದೇವರ ಮೇಲಿನ ಅಪಾರ ಭಕ್ತಿ ನಂಬಿಕೆಯಿಂದ ಈ ಆಚರಣೆಗಳನ್ನು ಶ್ರದ್ಧಾ ಪೂರ್ವಕವಾಗಿ ಆಚರಿಸಿಕೊಂಡು ಬಂದಿರುವರು. ಈ ಸಂಪ್ರದಾಯವನ್ನು ಕೈಬಿಟ್ಟರೆ ಎಲ್ಲಿ ನಮ್ಮ ವಂಶ ನಾಶವಾಗುತ್ತದೋ ಎನ್ನುವ ನಂಬಿಕೆಯಿಂದ ಈ ಆಚರಣೆಯನ್ನು ಇಂದಿಗೂ ಆಚರಿಸುವರು. ಅದೇ ರೀತಿ ವೀರಭದ್ರನ ಕುಲದೈವದವರು ತಮ್ಮ ಮನೆಯಲ್ಲಿ ಮೊದಲನೆಯ ಗಂಡುಮಗನ ಮದುವೆಯ ಸಂದರ್ಭದಲ್ಲಿ ಗುಗ್ಗಳವನ್ನು ಹೊರಡಿಸಿ ಮದುವೆ ಮಾಡುವರು. ಈ ರೀತಿಯಿಂದ ಮದುವೆಯನ್ನು ಮಾಡುವ ಮಹತ್ವವೆಂದರೆ ವೀರಭದ್ರನು ಅನೇಕ ರಾಕ್ಷಸರ ತಲೆಯನ್ನು ಕಡೆದಿರುತ್ತಾನೆ. ಇದರ ಜ್ಞಾಪಾಕರ್ಥವಾಗಿ ಆ ತಲೆಯ ಬುರುಡೆಯನ್ನು ಗುಗ್ಗಳ ಕೊಡವನ್ನಾಗಿ ಮಾಡಿರುತ್ತಾನೆ. ಅದರ ನೆನಪಿಗಾಗಿ ಗುಗ್ಗಳ ಆಚರಣೆಯನ್ನು ಮಾಡುತ್ತ ಬಂದಿರುವರು.

ಗುಗ್ಗಳವನ್ನು ವೀರಭದ್ರನ ವಿಜಯದ ಜ್ಞಾಪಕಾರ್ಥವಾಗಿಯೂ, ಮತ್ತು ವೀರಭದ್ರನು ವೀರಶೈವ ಧರ್ಮದ ಗೋತ್ರ ಪುರುಷನಾಗಿರುವದರಿಂದಲೂ, ಇಂದ ಮೂಲ ಗುರುವಿನ ಸ್ಮರಣಾರ್ಥವಾಗಿ ವೀರಶೈವರು ವಿವಾಹದಂದೆ ಶುಭಕಾರ್ಯವನ್ನು "ಶ್ರೀರುದ್ರ" ಕಾರ್ಯವೆಂದು, ಒಳ್ಳೇ ಶ್ರದ್ಧೆಯಿಂದಲೂ ಭಕ್ತಿಯಿಂದಲೂ ಮಾಡುವರು. ಕಾಲಕ್ರಮದಲ್ಲಿ ಮಾಡುತ್ತಲೂ ಬಂದವರಾಗಿದ್ದಾರೆ. ಹೀಗೆ ವಂಶಪರಂಪರ್ಯವಾಗಿ ಮಾಡುತ್ತಾರೆ. ಕಾರಣವೇನೆಂದರೆ ಆಮನೆಯಲ್ಲಿ ಶಾಂತಿ ನೆಮ್ಮದಿಯಿಂದ ಇರಲಿ, ಆ ಮನೆಯ ವಂಶ ವೃದ್ಧಿಯಾಗಲಿ, ಮತ್ತು ಆ ಮನೆಯಲ್ಲಿ ಇರುವಂತ ಅನೇಕ ಬಗೆಯ ಕಾಟಗಳಿಂದ ಆ ವಂಶ ಋಣ ಮುಕ್ತ ವಾಗುತ್ತದೆ. ಈ ಉದ್ದೇಶದಿಂದಲೂ ಮತ್ತು ಸುಖ ಸಂಪತ್ತು ವೃದ್ಧಿಸಲಿ ಎನ್ನುವಂತಹ ಕಾರಣದಿಂದಲೂ ಈ ಗುಗ್ಗಳ ಆಚರಣೆಯನ್ನು ಮಾಡುವರು.

ಈ ಗುಗ್ಗಳವನ್ನು ಆಚರಿಸುವುದಕ್ಕೆ ನಮ್ಮ ಜನಪದರು ಹಿನ್ನೆಲೆಯಾಗಿ ಈ ಕಥೆಯನ್ನು ಹೇಳುತ್ತಾರೆ; ಹಿಂದೆ ಪಂಚ ಮುಂಡಾಸುರ ಎಂಬ ರಾಕ್ಷಸ ಜನಗಳಿಗೆ ಮತ್ತು ದೇವತೆಗಳಿಗೆ ತುಂಬಾ ತೊಂದರೆಯನ್ನು ಕೊಡುತ್ತಿದ್ದನು. ಶಿವನು ಆ ರಾಕ್ಷಸನನ್ನು ಕೈಲಾಸಕ್ಕೆ ಕರೆದುಕೊಂಡು ಬಾ ಎಂದು ವೀರಭದ್ರನಿಗೆ ಹೇಳುತ್ತಾನೆ. ಅವನು ಬಾರದೆ ಇದ್ದರೆ ಅವನ ತಲೆಯನ್ನು ಕತ್ತರಿಸಿ ಕೈಲಾಸಕ್ಕೆ ತೆಗೆದುಕೊಂಡು ಬಾ ಎಂದು ಹೇಳುತ್ತಾನೆ. ಹೀಗೆ ಶಿವನು ಮಗನಿಗೆ ಅಪ್ಪಣೆಯನ್ನು ಕೊಡುವನು. ಆಗ ವೀರಭದ್ರನು ಹಾಗೆ ಆಗಲಿ ಎಂದು ಮುಂಡಾಸುರನ ಹತ್ತಿರ ಹೋಗುತ್ತಾನೆ. ಅಲ್ಲಿ ಮೊದಲು ನಯವಿನಯದಿಂದ ಹೇಳುತ್ತಾನೆ. ಅವನು ಕೇಳದೇ ಇದ್ದಂತಹ ಸಂದರ್ಭದಲ್ಲಿ ಅವನ ರುಂಡವನ್ನು ಚಂಡಾಡುತ್ತಾನೆ. ಅಲ್ಲಿಗೆ ರಾಕ್ಷಸನ ಹೆಂಡತಿ ಬಂದು ನನ್ನ ಗಂಡನ ದೇಹವನ್ನು ಸುಗಂಧ ದ್ರವ್ಯವನ್ನಾಗಿ ಮಾಡು ಎಂದು ಕೇಳುತ್ತಾಳೆ. ಆಗ ವೀರಭದ್ರನು ಗುಗ್ಗುಳದ ಸಾಮಾನುಗಳನ್ನು ಮಾಡುತ್ತಾನೆ. ಅವನ ತಲೆ ಬುರುಡೆಯನ್ನು ತೆಗೆದು ಗುಗ್ಗಳ ಕೊಡವನ್ನು ಮಾಡುವನು. ಅವನ ಮಾಂಸಖಂಡಗಳನ್ನು ಕಣಕವನ್ನಾಗಿ ಮಾಡುವನು. ಬಲಗೈಯನ್ನು ಕಟ್ಟಿಗೆಯಾಗಿ ಕೊಡದಲ್ಲಿ ಇಡುವನು. ಅವನ ಕರುಳುಗಳನ್ನು ಕಟ್ಟಿಗೆಯ ಸಿಂಬೆಯನ್ನಾಗಿ ಸುತ್ತುವನು. ರಕ್ತವನ್ನು ಎಣ್ಣೆಯನ್ನಾಗಿ ಮಾಡಿ ಹೆಬ್ಬೆರಳನ್ನು ತೆಗೆದು ಶಸ್ತ್ರವನ್ನು ಮಾಡುತ್ತಾನೆ. ಆ ರಾಕ್ಷಸನ ದೇಹದ ಆತ್ಮದಿಂದ ಇದನ್ನು ಹತ್ತಿಸಿ ಪ್ರಜ್ವಲ ಮಾನವಾಗಿ ಬೆಳಗಿಸುತ್ತಾನೆ.

ಈಗಲೂ ಗುಗ್ಗಳ ಹೊರಡಿಸಿ ಮದುವೆ ಮಾಡುವವರು ಹೀಗೆ ವೀರಭದ್ರನ ಜ್ಞಾಪಕಾರ್ಥವಾಗಿ ಮತ್ತು ವೀರಭದ್ರನನ್ನು ತಮ್ಮ ಕುಲ ದೇವರನ್ನಾಗಿ ಮಾಡಿಕೊಂಡಿರುವ ಭಕ್ತರು ತಮ್ಮ ಕುಟುಂಬದಲ್ಲಿ ಮೊದಲನೆಯ ಗಂಡು ಮಗನಿಗೂ, ಹಾಗೂ ಕೊನೆಯ ಗಂಡು ಮಗನಿಗೂ, ಮದುವೆಯಲ್ಲಿ ಶ್ರೀ ವೀರಭದ್ರನ ರುದ್ರ ಕಾರ್ಯವನ್ನು ಮಾಡುವರು. ಆ ಗಂಡು ಮಕ್ಕಳಿಗೆ ಮುಂದಿನ ಜೀವನ ಸುಖಮಯದಿಂದ ಕೂಡಿರುತ್ತದೆ ಎನ್ನುವಂತಹ ನಂಬಿಕೆ.

**ಗುಗ್ಗಳ ಆಚರಣೆ: ಪುರವಂತರು**

ಉತ್ತರ ಕರ್ನಾಟಕವು ಪುರವಂತರ ಕುಣಿತಕ್ಕೆ ತುಂಬಾ ಪ್ರಸಿದ್ಧಿಯನ್ನು ಪಡೆದಿದೆ. ಈ ವೀರಭದ್ರನ ಕಥೆ ವೀರಗಾಸೆ ಕುಣಿತಕ್ಕೂ ಪುರವಂತರ ಕುಣಿತಕ್ಕೂ ಹಲವಾರು ವ್ಯತ್ಯಾಸಗಳಿದ್ದರೂ ಮೆರಲು ಪ್ರೇರಣೆ ಪೌರಾಣಿಕ ಕಥೆಯೇ ಆದರೆ ವೀರಗಾಸೆಯ ಕುಣಿತಲಿಂಗಾಯತರಲ್ಲಿ ಧಾರ್ಮಿಕ ಆಚರಣೆಯ ಮಹತ್ವವನ್ನು ಪಡೆದಿಲ್ಲ. ನಮ್ಮ ಎಲ್ಲಾ ಜಾನಪದ ಗೀತೆ ಮತ್ತು ಕುಣಿತಗಳಿಗೆ ಪೌರಾಣಿಕ ಕಥೆಗಳೇ ಪ್ರೇರಣೆಯಾಗಿದ್ದಂತೆ ವೀರಗಾಸೆಗೂ ಪ್ರೇರಣೆ ನೀಡಿರುವದು ಪೌರಾಣಿಕ ಕಥೆಯೆ.

ವೀರಭದ್ರನನ್ನೇ ಕುಲದೈವವೆಂದು ಆರಾಧಿಸುವವರು ನಮ್ಮನಾಡಿನಬಹುಭಾಗದಲ್ಲಿದ್ದಾರೆ. ಇವರದೇ ಆದ ನಂಬಿಕೆಗಳು,ಪ್ರಸಂಗಗಳು ಮತ್ತು ಆಚರಣೆಗಳಿವೆ. ಈ ಕ್ರಿಯಾ ವಿಧಾನಗಳನ್ನೇ 'ಪುರವಂತಿಕೆ' ಎನ್ನಲಾಗಿದೆ. ಇತರ ನಮ್ಮ ದೈವೀ ಆರಾಧನೋದ್ದೇಶಗಳಂತೆ ಇದೂ ಕೂಡಾ ಕುಲದೈವತ್ವವನ್ನು ಒಲಿಸಿ ಕೊಂಡು ಸಂಕಷ್ಟಗಳಿಂದ ರಕ್ಷಣೆ ಪಡೆದು, ತಮ್ಮ ಆಶೋತ್ತರಗಳನ್ನು ಪೂರೈಸಿಕೊಳ್ಳುವ ಭಾವವೇಶದ

ಒಂದು ವಿಶಿಷ್ಟ ಆಚರಣೆ. ವೀರಭದ್ರದೇವರ ಒಡಬುಗಳು ಇದಕ್ಕೆ ಸಂಬಂಧಿ ಸಿದಂಥವು. ಇದನ್ನು ಆರಾಧನಾ ಬದ್ಧವಾಗಿ ಹೇಳುವವರೇ ಪುರವಂತರು. ಇವರು ಸಾಂದರ್ಭಿಕ ವೇಷಭೂಷಣ ವೈಭವ ತೊಟ್ಟು ವೀರರಸವನ್ನು ಮೆರೆಯುತ್ತಾರೆ. ಈ ವೇಷ ಧರಿಸಿದಾಗ ಶ್ರೀಸಾಮಾನ್ಯ ಭಕ್ತನು ಅಸಾಮಾನ್ಯ ಶಕ್ತಿ ಆವೇಶಗಳನ್ನು ಮೈದುಂಬಿಸಿ ಕೊಂಡವನಾಗುತ್ತಾನೆ.

ಪುರವಂತಿಕೆ ಒಂದು ವೃತ್ತಿಯಲ್ಲ, ಅದೊಂದು ಅನುವಂಶಿಕ ಆಚರಣೆಯಾದರೂ ವೀರಭದ್ರ ದೇವರ ಒಕ್ಕಲಿನವರು,ತಮ್ಮ ದೇವರಿಗೆಮಾತ್ರ ನಿಗದಿಯಾದ ಆಚರಣೆಗಳಲ್ಲಿ ವಿಧ್ಯುಕ್ತವಾಗಿ ಆಮಂತ್ರಿತ ರಾಗಿ ಪಾಲ್ಗೊಳುತ್ತಾರೆ. ಪುರವಂತಿಕೆಯಲ್ಲಿ ಆವೇಶದ ಕುಣಿತವಿರುತ್ತದೆ. ಅಭಿನಯವಿರುತ್ತದೆ. ವೀರಭದ್ರ ದೇವರ ಮಹಿಮೆಯನ್ನು ಸಾರುವ ಒಡಬುಗಳಿರುತ್ತವೆ.

ಒಡಬುಗಳನ್ನುಹೇಳುವ ಪುರವಂತರಿಗೆ ತೆರೆಗೊರಳು, ಅಬ್ಬರದ ಲಯಬದ್ಧ ಕುಣಿತದ ಹೆಜ್ಜೆ ಹಾಕುವ ಶಕ್ತಿ, ವೇಷಕ್ಕೊಪ್ಪುವ ಮೈಕಟ್ಟು ಬೇಕೇ ಬೇಕು. ವೀರಭದ್ರದೇವರ ಕಾರ್ತಿಕ ಅಗ್ನಿ ಕುಂಡೋತ್ಸವ, ಶ್ರಾವಣೋತ್ಸವ, ಭಕ್ತ ಮನೆತನದವರ ಮನೆಯಲ್ಲಿ ಗುಗ್ಗಳ ಕಾರ್ಯ ಮುಂತಾದವಕ್ಕೆಲ್ಲ ಇವರೇ ಪ್ರಥಮರು.

ಪುರವಂತರು ಸಾಮಾನ್ಯವಾಗಿ ಕುರುಹಿನ ಶೆಟ್ಟಿ ಹಾಗೂ ಪತ್ತಾರ ಸಮುದಾಯದವರು. ಕುಲಗುರುಗಳ ಮೂಲಕ ದೀಕ್ಷೆ ಪಡೆದ ಶಸ್ತ್ರ ಪ್ರಯೋಗಕ್ಕೆ ತೊಡಗುವುದು ಪದ್ಧತಿ. ಆಗ ಪುರವಂತರೆಂಬ ಅಭಿದಾನ ಅವರಿಗೆ ಪ್ರಾಪ್ತಿ 'ಪವಾಡ' ವೂ ಕೂಡ ಇವರೊಂದಿಗೆ ತಳುಕು ಹಾಕಿ ಕೊಂಡಿದೆ. ಶುಭಕಾರ್ಯಗಳಲ್ಲಿ ದೇವರ ಜಾಗವನ್ನು ಸ್ವಚ್ಛಗೊಳಿಸಿ 'ಪುರವಂತರ'ನ್ನು ಕರೆಸಿ ಗುಗ್ಗಳವನ್ನೋ ಹಲಗೆ ಮೆರವಣಿಗೆಯನ್ನೊ ಹೊರಡಿಸುವುದು ಪದ್ಧತಿ.

ಮನೆದೇವರು ವೀರಭದ್ರ ಇದ್ದವರು ಕೂಡ ಪುರವಂತರಾಗಿರುವುದು ಕಂಡುಬಂದಿದೆ. ಪಂಚಮ ಸಾಲಿಯವರು ಬಣಜಿಗರಲ್ಲಿ ಪುರವಂತರಿರುವುದನ್ನು ಕಾಣುತ್ತೇವೆ. ದಕ್ಷಿಣ ಕರ್ನಾಟಕದಲ್ಲಿ ವೀರಗಾಸೆ ಕಲೆ ಇರುವುದು. ವೀರಭದ್ರ ಪವಾಡ ಎಂದು ಉತ್ತರ ಭಾಗದಲ್ಲಿ ಪ್ರಚಲಿತವಿದೆ. ಪುರವಂತರು ಉಡುಗೆ-ತೊಡುಗೆಯ ಬಗ್ಗೆ ಹೇಳಬೇಕೆಂದರೆ ಹಸ್ತದಲ್ಲಿ ಹಲಗೆ, ಕರದಲ್ಲಿ ಖಡ್ಗ, ಅರಿದೆಲೆ ರುಂಡ, ಮೇಲೆ ನೇತ್ರದಲ್ಲಿ ಪಾವಕ ಜ್ವಾಲೆ, ಶಿಖರದಲ್ಲಿ ಶಿವಲಿಂಗ, ಮುಖದಲ್ಲಿ ವೇದಾಶಾಂತಿ ಪಾದದಲ್ಲಿ ಗೆಜ್ಜೆ ಸರಪಳಿಗಳು (ಗೆಜ್ಜೆಗಳು), ತಲೆಗೆ ಕೆಂಪು ರುಮಾಲು, ಕರಿಯ ಚೌರಿ ಕೂದಲು, ರುದ್ರಾಕ್ಷಿ ಕೊರಳಿಗೆ ಹಾಗೂ ಕೈಗಳಿಗೆ, ಈ ರೀತಿಯಾಗಿ ಭಯಂಕರವಾಗಿ ಕಾಣುತ್ತಾರೆ. ಪುರವಂತರು ಉಡುಪನ್ನು ಧರಿಸುವ ಮೊದಲು ಜಂಗಮರಿಂದ ಪಾದೋದಕವನ್ನು ತೆಗೆದುಕೊಂಡು ಧರಿಸಬೇಕು. ಈ ಉಡುಪನ್ನು ಧರಿಸಿದ ನಂತರ ಅವರಿಗೆ ಯಾವ ರೀತಿಯ ಮಲಮೂತ್ರದ ಭಾದೆ ಕಂಡು ಬರುವುದಿಲ್ಲ ಪುರವಂತರು ಸಮಾಳಕ್ಕೆ ತಕ್ಕ ನಾಟ್ಯವನ್ನು ಮಾಡುತ್ತಾರೆ ಅತೀವ ಹರ್ಷ ಭರಿತರಾಗಿ ಜನರಿಗೆ ತಿಳಿಯುವಂತೆ ತಮ್ಮದೇ ಆದ ಕಾದ್ರ

ಭಾಷೆಯಲ್ಲಿ ಹೇಳಿದರೂ ಕೂಡ ಜನ ಸಮೂಹವು ಮೈಯಲ್ಲಾ ಕಣ್ಣಾಗಿ ನೋಡುತ್ತ
ವರ್ಣಿಸಲಸದಳ. ಪುರವಂತರು ವೀರಭದ್ರದೇವರ ಒಡಬುಗಳನ್ನು ಹೇಳುವರು. ಗುಗ್ಗಳ ಕೊಡವನ್ನು ಹೊತ್ತು ನಾಟ್ಯ ಮಾಡುವರು. ಊರಿನ ಮುಖ್ಯ ಬೀದಿಗಳಲ್ಲಿ ಕೊಡದ ದರ್ಶನ ಮಾಡಿಸಿ ಕೊಡದ ರಕ್ಷಣೆಯಲ್ಲಿ ತೊಡಗಿರುತ್ತಾರೆ.

**ಪುರವಂತರ ಈಗಿನ ಸ್ಥಿತಿ :**

ವೃತ್ತಿನಿರತರಲ್ಲದ್ದರಿಂದ ಪುರವಂತರು ಲಗ್ನ, ಹಬ್ಬಹರಿದಿನಗಳನ್ನು ನೋಡಬೇಕಾಗುವುದು. ಅದನ್ನು ಬಿಟ್ಟರೆ ಒಕ್ಕಲುತನ, ಮಳೆ ಕೈಕೊಟ್ಟರೆ ಮನೆಯ ಹೆಂಗಸರು ಮನೆಗೆಲಸ ಮಾಡಿ ಹೊಟ್ಟೆಪಾಡು ನೋಡಬೇಕು. ಬರಗಾಲದ ಬೀಕರ ಪರಿಸ್ಥಿತಿಯಲ್ಲಿ ಅವರಿಗೆ ಪುರವಂತಿಕೆಯೇ ಅನ್ನ ಕೊಡುವ ದಾರಿ, ದೈವ.

ಜನವರಿ, ಫೆಬ್ರುವರಿ, ಮಾರ್ಚ್, ಏಪ್ರಿಲ್, ಮೇ, ಅಕ್ಟೋಬರ್ ಈ ತಿಂಗಳುಗಳಲ್ಲಿ ನಡೆವ ವೀರಭದ್ರ ದೇವರ ಜಾತ್ರೆ ಉತ್ಸವ ದಿನಗಳು ಇಡೀ ವರ್ಷದ ಹೊಟ್ಟೆನೆತ್ತಿ ನೋಡಬೇಕು. ಕುಣಿತದ ಆವೇಶದಲ್ಲಿರುವಾಗ ಇರುವ ಉತ್ಸಾಹ, ಸಂಭ್ರಮ ಕಳೆಗಳು ಬಿಡುವಿನ ವೇಳೆಯ ನಿಟ್ಟುಸಿರು, ಹತಾಶಭಾವಗಳಾಗಿ ಪರಿವರ್ತನೆ ಹೊಂದಿರುತ್ತವೆ. ಈಚೆಗೆ ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಕರ್ನಾಟಕ ಜಾನಪದ ಹಾಗೂ ಯಕ್ಷಗಾನ ಅಕಾಡಮಿಗಳು ವೀರಗಾಸೆ ಪ್ರದರ್ಶನ ಮಾಡಿಸಿರುವುದು ಅಭಿನಂದನೀಯ. ಅಲ್ಲದೆ ವಿಶ್ವವಿದ್ಯಾಲಯಗಳ 'ಜಾನಪದ ಮೇಳ'ಗಳಲ್ಲಿ ಪ್ರದರ್ಶನ ಕೊಡುತ್ತಿದ್ದಾರೆ. ವೀರಭದ್ರ ದೇವರ ಒಡಬು, ಗುಗ್ಗಳದಂತಹ ಸಂದರ್ಭದಲ್ಲಿ ಪುರವಂತರ ಪಾತ್ರ ತುಂಬಾ ಮಹತ್ವದ್ದಾಗಿರುತ್ತದೆ. ಏಕೆಂದರೆ ಈ ಕಾರ್ಯದಲ್ಲಿ ಸ್ವಲ್ಪ ಏನಾದರೂ ದೋಷ ಕಂಡು ಬಂದರೆ ಈ ಗುಗ್ಗಳ ಆರುವಂತಹ ಸಂದರ್ಭಗಳಿರುತ್ತವೆ. ಈ ಪುರವಂತರು, ಗುಗ್ಗಳವನ್ನು ತಯಾರುಮಾಡುವಾಗ ತುಂಬಾ ಮಡಿಯಿಂದ ಇರಬೇಕಾಗುತ್ತದೆ. ಇಂತಿಷ್ಟೇ ವೇಳೆಗೆ ನಾವು ಗುಗ್ಗಳ ಕಟ್ಟಲು ಪ್ರಾರಂಭಿಸುತ್ತೇವೆ ಎಂದು ಕೊಂಡಾಗ ಪುರವಂತರು ಸ್ನಾನ ಮಾಡುತ್ತಾರೆ. ಆ ಮನೆಯ ದೇವರ ಕೋಣೆಯನ್ನು ಸ್ವಚ್ಛಗೊಳಿಸಿಕೊಳ್ಳುತ್ತಾರೆ. ಇಡೀ ರಾತ್ರಿ ಕುಳಿತು ಗುಗ್ಗಳವನ್ನು ತಯಾರಿಸುವುದು ಇವರ ಕರ್ತವ್ಯ. ಹಿಂದಿನ ದಿನದಂದೇ ಮದುವೆಯ ಮನೆಯವರು ಆ ಊರಿನಲ್ಲಿ ವೀರಭದ್ರ ದೇವರ ಹಲಗಿಯವರಿಗೆ ಉಲ್ಪಿಯನ್ನು ಕೊಟ್ಟಿರುತ್ತಾರೆ. ಮರುದಿನ ಬೆಳಿಗ್ಗೆ ಅವರನ್ನು ಪುರವಂತರು ವಾದ್ಯಗಳೊಂದಿಗೆ ಕರೆದುಕೊಂಡು ವೀರಭದ್ರ ದೇವರ ಮನೆ ಮನೆಗೆ ಎಲ್ಲರೂ ಹೋಗಿ ದೇವರ ಪೂಜೆ ಮಾಡಿಸಿ ಆ ಮನೆಯವರ ಅನುಮತಿ ಪಡೆದು ಅಲ್ಲಿ ವೀರಭದ್ರ ದೇವರ ಒಡಬುಗಳನ್ನು ಹೇಳಿ ಅವರ ಮನೆಯಿಂದ ದೇವರನ್ನು ತರುತ್ತಾರೆ.

ಹೀಗೆ ಐದು ಅಥವಾ ಒಂಭತ್ತು ಮನೆಗಳಿಗೆ ಹೋಗಿ ಕರೆದುಕೊಂಡು ಬರುವಂತಹದ್ದು, ಪುರವಂತರದ್ದಾಗಿರುತ್ತದೆ. ನಂತರ ಈ ದೇವರುಗಳನ್ನು ತೆಗೆದುಕೊಂಡು ಹೋದ ಮೇಲೆ ಗಂಗೆ ಪೂಜೆಗೆ ಹೋಗುವರು. ಅಲ್ಲಿ ಎಲ್ಲಾ ದೇವರುಗಳನ್ನು ಅಭಿಷೇಕ ಮಾಡಿಸುತ್ತಾರೆ. ಇದನ್ನು ಕೂಡ ಪುರವಂತರೇ ಮಾಡುವರು. ನಂತರ ಎಲ್ಲರ ಅನುಮತಿ ಪಡೆದುಕೊಂಡ ನಂತರ ಈ ಗುಗ್ಗಳವನ್ನು ಒಡಬುಗಳನ್ನು ಹಳೇ

ಪುಟವನ್ನು ಮಾಡುತ್ತಾರೆ. ಗುಗ್ಗಳವನ್ನು ಪುರವಂತರೇ ಹಿಡಿದುಕೊಂಡಿರುತ್ತಾರೆ. ದಾರಿಯಲ್ಲಿ ಶ್ರೀ ವೀರಭದ್ರನ ಅವತಾರಗಳನ್ನು ಒಡಬುಗಳ ಮೂಲಕ ಹೇಳುತ್ತಾ ಮುಂದಕ್ಕೆ ಹೋಗುತ್ತಾರೆ. ಶ್ರೀ ವೀರಭದ್ರ ದೇವಸ್ಥಾನದ ತನಕ ಈ ಗುಗ್ಗಳವನ್ನು ತೆಗೆದುಕೊಂಡು ಹೋಗುವರು. ಅಲ್ಲಿಗೆ ಹೋದ ಮೇಲೆ ದೇವರಿಗೆ ಐದು ಸುತ್ತು ಅದನ್ನು ಬೆಳಗಿಸುತ್ತಾರೆ. ನಂತರ ಮಂಗಳಾರತಿ ಮಾಡಿಸುತ್ತಾರೆ. ಇದೆಲ್ಲಾ ಕಾರ್ಯಕ್ರಮವಾದ ಮೇಲೆ ಆ ಗುಗ್ಗಳದ ಕೊಡಗಳನ್ನು ದೇವಸ್ಥಾನದ ಮೇಲಕ್ಕೆ ಇಟ್ಟು ಬರುವಂತಹ ಕೆಲಸ ಪುರವಂತರೇ ವಹಿಸಿಕೊಂಡಿರುತ್ತಾರೆ. ನಂತರ ಒಂದು ವೇಳೆ ಈ ಗುಗ್ಗಳ ಶಾಂತಿಯಾಯಿತು ಎಂದರೆ ಅಲ್ಲಿ ಪುರವಂತರ ದೇಹದ ಬಲಭಾಗದ ತೊಡೆ ಅಥವಾ ಕೈಗಳ ರಕ್ತವನ್ನು ತೆಗೆದು ಆ ಗುಗ್ಗಳ ಕೊಡಕ್ಕೆ ಹಾಕುತ್ತಾರೆ. ಅದು ಮತ್ತೆ ಹತ್ತುವಂತಹ ಸಂದರ್ಭವನ್ನು ಕಾಣಬಹುದು. ಶಸ್ತ್ರ ಹಾಕುವುದು ಮತ್ತು ಪವಾಡಗಳನ್ನು ಪುರವಂತರೇ ಮಾಡುತ್ತಾರೆ.

ಗುಗ್ಗಳ ಮದುವೆಯನ್ನು ನೆರವೇರಿಸುವ ಪುರವಂತರು ಸಾಮಾನ್ಯವಾಗಿ ಅನುಭವಿಗಳಾಗಿರುತ್ತಾರೆ. ಅವರು ಯಾವುದೇ ವಿಘ್ನ ಬರದಂತೆ ಅತೀ ಚಾಣಾಕ್ಷತನದಿಂದ ನಡೆಸಿಕೊಂಡು ಹೋಗುತ್ತಾರೆ. ಒಡಬುಗಳನ್ನು ಪುರವಂತರೇ ಹೇಳುವುದು ಮತ್ತೊಂದು ವೈಶಿಷ್ಟ್ಯ. ಒಡಬು ಹೇಳಲು ಮತ್ತೊಬ್ಬರು ಇರುವುದಿಲ್ಲ.

### ಗುಗ್ಗಳ ಆಚರಣೆ: ನೈವೇದ್ಯ

ಜನಪದರು ಎಲ್ಲಾ ದೇವರುಗಳಿಗೆ ಮುಕ್ತ ಮನಸ್ಸಿನಿಂದ ಪೂಜಿಸುತ್ತಾರೆ. ಆ ದೇವರುಗಳಿಗೆ ಪ್ರಿಯವಾದ ಅಡುಗೆಯನ್ನು ಮಾಡಿ, ಅದಕ್ಕೆ ನೈವೇದ್ಯ ಮಾಡುವ ಪದ್ಧತಿ ಜನಪದರಲ್ಲಿ ರೂಢಿಯಲ್ಲಿದೆ. ಅದೇ ರೀತಿ ಗುಗ್ಗಳ ಕಾರ್ಯ ಅಥವಾ ಆಚರಣೆಯ ಸಂದರ್ಭದಲ್ಲಿ ವೀರಭದ್ರ ದೇವರಿಗೆ ಮತ್ತು ಅಲ್ಲಿನ ರುದ್ರೂಟಕ್ಕೆ ಬಂದಿರುವ ಪುರವಂತರಿಗೆ ಮತ್ತು ನೈವೇದ್ಯಕ್ಕೆ ಎಂದು ಸವತಿಬೀಜದ ಹುಗ್ಗಿಯನ್ನು ಮಾಡಿ, ಎಡೆ ಹಿಡಿಯುತ್ತಾರೆ. ಈ ನೈವೇದ್ಯವನ್ನು ಮೊದಲು ಗುಗ್ಗಳಕ್ಕೆ ಎಲ್ಲ ಸಂಪ್ರದಾಯಗಳ ಪ್ರಕಾರ ಮಾಡುವರು. ಪೂಜೆ, ದೀಪ-ಧೂಪದಿಂದ ಮಂತ್ರವನ್ನು ಜಪಿಸಿ, ನಂತರ ಈ ನೈವೇದ್ಯವನ್ನು ಮಾಡುವರು. ಹೀಗೆ ನೈವೇದ್ಯಕ್ಕಾಗಿ ಅಡುಗೆ ಮಾಡುವ ಹೆಂಗಸರು ಅಥವಾ ಗಂಡಸರು ತುಂಬಾ ಮಡಿಯಿಂದ ಇರಬೇಕಾಗುತ್ತದೆ.

### ಗುಗ್ಗಳ ಆಚರಣೆ : ನಂಬಿಕೆಗಳು

ವೀರಭದ್ರ ದೇವರು ಮನೆಯ ದೇವರನ್ನಾಗಿ ಮಾಡಿಕೊಂಡಿರುವವರು ತಮ್ಮ ಚೊಚ್ಚಲ ಮಗನಿಗೆ ಅಥವಾ ಅವನ ವಂಶದಲ್ಲಿ ಹುಟ್ಟಿದ ಗಂಡು ಮಕ್ಕಳಿಗೆ ಮದುವೆ ಮಾಡುವ ಸಂದರ್ಭದಲ್ಲಿ ವೀರಭದ್ರನಿಗೆ ಪ್ರಿಯವಾದ ಗುಗ್ಗಳ ಸಂಪ್ರದಾಯದ ಕಾರ್ಯವನ್ನು ಮಾಡುವರು. ಜನಪದರಲ್ಲಿ ನಂಬಿಕೆ ಏನೆಂದರೆ; ಈ ಗುಗ್ಗಳ ಮದುವೆ ಮಾಡಿದರೆ ಆ ಮನೆಯಲ್ಲಿ ವಂಶವೃದ್ಧಿಯಾಗುತ್ತದೆ. ಆ ಮನೆಯಲ್ಲಿ ಇರುವ ದೆವ್ವಗಳು, ಗ್ರಹಗತಿಗಳ ದೋಷ, ಎಲ್ಲಾ ಪರಿಹಾರವಾಗುತ್ತದೆ. ಒಬ್ಬ ಪುರವಂತನು ಗದಗ ಜಿಲ್ಲೆಯ ಒಂದು ಹಳ್ಳಿಗೆ

ಪುರವಂತಿಕೆಯನ್ನು ಮಾಡಲು ಹೋಗಿದ್ದನು. ಆ ಮನೆಯಲ್ಲಿ ದೆವ್ವಗಳ ಕಾಟ ತುಂಬಾ ಪ್ರಸಿದ್ಧಿ ಪಡೆದಿತ್ತು. ಆ ಪುರವಂತರು ದೆವ್ವ ಬರುವಂತಹ ವ್ಯಕ್ತಿಯ ಮೇಲೆ ಗುಗ್ಗಳ ಕೊಡವನ್ನು ಹೊರಿಸಿದರು. ತಕ್ಷಣ ಆ ದೆವ್ವಗಳು ಹೊರಗಡೆ ಬಂದು ತುಂಬಾ ಕಷ್ಟದಿಂದ ಇನ್ನೊಂದು ಸಾರಿ ನಾನು ಈ ಮನೆಗೆ ಬರುವುದಿಲ್ಲ ಎಂದವು. ಅವು ಸುದ್ಧಿ ಇಲ್ಲದೇ ಹೋದವಂತೆ. ಇದು ಪುರುವಂತರ ಅನುಭವಗಳು. ಗುಗ್ಗಳ ಮದುವೆ ಮಾಡಿಕೊಂಡವರಿಗೆ ಆರೋಗ್ಯವಾಗಿ ಮಕ್ಕಳು ಹುಟ್ಟುವರು. ಗುಗ್ಗಳ ಮದುವೆ ಮಾಡದಿದ್ದರೆ ಅಥವಾ ಆ ಮದುವೆಯಲ್ಲಿ ಏನಾದರೂ ಮೈಲಿಗೆಯಾಗಿ ಗುಗ್ಗಳ ಆರಿದರೆ ಆ ವಂಶವೇ ನಿರ್ವಂಶವಾಗುತ್ತದೆ ಎನ್ನುವ ನಂಬಿಕೆ ಇದೆ.

**ಗುಗ್ಗಳ ಆಚರಣೆ : ವಿಧಿ ನಿಷೇಧಗಳು**

ವೀರಭದ್ರನ ಕಾರ್ಯಮಾಡುವಂತಹ ಸಂದರ್ಭದಲ್ಲಿ ತುಂಬಾ ಮಡಿ- ಉಡಿಯಿಂದ ಇರಬೇಕು. ಯಾಕೆಂದರೆ ವೀರಭದ್ರ ದೇವರು ತುಂಬಾ ಸಿಟ್ಟಿನ ದೇವರು ಎಂಬ ಭಾವನೆ ಎಲ್ಲರಿಗೂ ಬಂದಿರುತ್ತದೆ. ಈ ಕಾರ್ಯಕ್ಕೆ ಬರುವಾಗ ಯಾವುದೇ ತರಹದ ಮಾಂಸ ಮದ್ದುಗಳನ್ನು ಸೇವಿಸಬಾರದು. ತಂಬಾಕು, ಇತರೆ ಬೀಡಿ, ಸಿಗರೇಟು, ಮಧ್ಯಸೇವನೆಯಿಂದ ದೂರವಿರಬೇಕಾಗುತ್ತದೆ. ಆ ಮನೆಯಲ್ಲಿ ಬಂದಿರುವ ಹೆಣ್ಣು ಮಕ್ಕಳು ಕೂಡ ಇಲ್ಲಿ ತುಂಬಾ ಮಡಿ ಉಡಿಯಿಂದ ಇರಬೇಕಾಗುತ್ತದೆ. ಯಾಕೆಂದರೆ ಹೆಣ್ಣು ಮಕ್ಕಳು ಮುಟ್ಟಾದ (ಹೊರಗಾದ ದಿನ) ದಿನದಲ್ಲಿ ಇದ್ದಂತ ಸಮಯದಲ್ಲಿ ಈ ಕಾರ್ಯಕ್ಕೆ ಬರಬಾರದು. ಒಂದು ವೇಳೆ ಮದು ಮಗಳಿಗೆ ಮೊದಲೇ ಸೂಚನೆಯನ್ನು ಕೊಟ್ಟಿರುತ್ತಾರೆ. ಏನೆಂದರೆ ನಿನಗೆ ಏನಾದರೂ ಒಂದು ಪಕ್ಷ ಮದುವೆಯ ಸಮಯದಲ್ಲಿ ತಿಂಗಳ ರಜೆ ಏನಾದರೂ ಇದ್ದರೆ ಅದಕ್ಕೆ ಔಷಧಿ ಇದ್ದರೆ ತೆಗೆದು ಕೊಳ್ಳು ಎನ್ನುವರು. ಒಂದು ಪಕ್ಷ ಮದುವೆ ದಿನ ಏನಾದರೂ ಆದರೆ ಆ ಗುಗ್ಗಳವನ್ನು ಹೊರಡಿಸುವುದನ್ನು ನಿಲ್ಲಿಸುತ್ತಾರೆ. ನಂತರ ಒಂದು ಒಳ್ಳೆಯ ದಿನ ನೋಡಿ ಮತ್ತೆ ಗುಗ್ಗಳವನ್ನು ಹೊರಡಿಸುತ್ತಾರೆ. ಆಮೇಲೆ ಒಂದು ವೇಳೆ ಆ ಮನೆಯಲ್ಲಿ ಮನೆ ಸೊಸೆ, ಅಥವಾ ಮನೆಯ ಮಗಳು ಯಾರೇ ಆಗಲಿ ಗುಗ್ಗಳ ಆಚರಣೆಯ ಸಮಯದಲ್ಲಿ, ಹೆರಿಗೆ ಆದಂತಹ ಸಂದರ್ಭದಲ್ಲಿ ಮತ್ತು ಇದ್ದಕ್ಕಿದಂತೆ ಯಾರಾದರೂ ಮರಣ ಹೊಂದಿದರೆ ತಕ್ಷಣವೇ ಆ ಮದುವೆಯನ್ನು ಅಲ್ಲಿಗೆ ನಿಲ್ಲಿಸುತ್ತಾರೆ. ಯಾಕೆಂದರೆ ಆ ಮದುವೆ ಮನೆ ಹೊಲಿ ಮನಿಯಾಗಿದೆ ಎಂದು ಮತ್ತೆ ಮನೆಯಲ್ಲವನ್ನು ಬಳಿದು ಕೊಂಡು ಜಂಗಮರ ಮನೆಯಲ್ಲಿ ಬಂದು ಪಾದೋದಕವನ್ನು ತೆಗೆದುಕೊಂಡು ಹೋಗುವರು. ಮನೆಯಲ್ಲಿ ಎಲ್ಲಾ ಕಡೆಗೆ ಪೂಜೆ ಮಾಡಿ ಪಾದೋದಕವನ್ನು ಸಿಂಪಡಿಸಿ ಮುಂದಿನ ಕಾರ್ಯವನ್ನು ಮಾಡುವರು. ಈ ಕಾರ್ಯವು ಗುಗ್ಗಳ ಮಾಡುವುದು ಇನ್ನು ಐದು ಅಥವಾ ಆರುದಿನ ಮುಂಚಿತವಾಗಿ ಆಗಿದ್ದರೆ ಹೀಗೆ ಮಾಡುವರು. ಇದೇ ತರಹ ಗುಗ್ಗಳ ಆಚರಣೆಯ ಹಿಂದಿನ ದಿನವೇನಾದರೂ ಆದರೆ ತಕ್ಷಣ ನಿಲ್ಲಿಸುತ್ತಾರೆ. ಮತ್ತು ಇಂತಹ ಘಟನೆಗಳು ಮದುವೆ ಆಗುವಂತಹ ಮನೆಯಲ್ಲಿ ಆದರೆ ಮಾತ್ರ ಅದು ಹೊಲಿಯಾಗುತ್ತದೆ. ತಮ್ಮ ಸಂಬಂಧಿಕರಲ್ಲಿ ಯಾರಾದರೂ ಹೊರಗಡೆ ಅಥವಾ ಬೇರೆ ಊರಿನಲ್ಲಿ ಯಾರಾದರೂ ಸತ್ತಿದ್ದರೆ ಅಥವಾ ಯಾರಿಗಾದರೂ ಹರಿಗೆಯಾದರೆ ಈ ಮನೆಗೆ ಅದು ಅನ್ವಯಿಸುವುದಿಲ್ಲ. ಮತ್ತು ಈ ಮದುವೆಯಲ್ಲಿ ತೊನ್ನು ರೋಗ ಇದ್ದವರು ಕೂಡ ಭಾಗವಹಿಸಲು ಬರುವುದಿಲ್ಲ. ಇಂತವರಿಗೂ ನಿಷೇಧಗಳು ಇವೆ ಎಂದು

ಹೇಳ ಬಹುದು. ಈ ಮದುವೆ ಮಾಡುವಾಗ ಮತ್ತು ಗುಗ್ಗಳ ಕಟ್ಟುವಂತಹ ಸಮಯದಲ್ಲಿ ಬೆಕ್ಕು ಬರದಂತೆ ಮತ್ತು ಇತರ ಅಪಶಕುನ ವಾಗದಂತೆ ನೋಡಿಕೊಳ್ಳುವುದು ಆ ಮನೆಯಲ್ಲಿಯ ಹಿರಿಯರ ಕರ್ತವ್ಯ. ನಂತರ ಹಾಗೇನಾದರು ಕೆಟ್ಟದ್ದು ಆಗುವಂತಹ ಸಮಯದಲ್ಲಿ ಯಾರಾದರೂ ಒಬ್ಬರ ಮೈಯಲ್ಲಿ ದೇವರು ಬಂದು ಅಲ್ಲಿ ಆಗಿರುವ ಅಚಾತುರ್ಯವನ್ನು ಹೇಳುತ್ತದೆ. ಪುರವಂತರು ಹಿಂದಿನ ದಿನದಿಂದ ಉಪವಾಸ ವ್ರತ ಕೈಗೊಂಡಿರುತ್ತಾರೆ. ಶಸ್ತ್ರ ಹಾಕಿಸಿಕೊಳ್ಳುವವರೂ, ಆ ವಿಧಿ ನಡೆಯುವವರೆಗೂ ಉಪವಾಸವಿರಬೇಕು.

**ಗುಗ್ಗಳ ಆಚರಣೆ : ಪವಾಡಗಳು**

ಗುಗ್ಗಳ ಆಚರಣೆಗಳಲ್ಲಿ ಪವಾಡಗಳೆಂದರೆ ಬರಿ ಶಸ್ತ್ರವನ್ನು ಹಾಕಿಸುವುದು. ಇವುಗಳಲ್ಲಿ ಎರಡು ವಿಧಗಳು : ೧) ಸೂಜಿ ಶಸ್ತ್ರ, ೨) ದಬ್ಬಣದ ಶಸ್ತ್ರ.

ಈ ಶಸ್ತ್ರವನ್ನು ಪುರವಂತರೇ ಹಾಕುತ್ತಾರೆ. ಮತ್ತು ಅವರೂ ಹಾಕಿ ಕೊಂಡು ಪವಾಡಗಳನ್ನು ಮಾಡುವರು. ಈ ಶಸ್ತ್ರವನ್ನುಕಡ್ಡಾಯವಾಗಿ ಮದು ಮಕ್ಕಳಿಗೆ ಮತ್ತು ಆ ಮನೆಯಲ್ಲಿಯ ತಂದೆ ತಾಯಿಗಳಿಗೆ ಹಾಕಲೇ ಬೇಕು.

ಪುರವಂತರು ಪವಾಡವನ್ನು ಒಂದು ನೂರಾ ಒಂದು ಗಂಟುಗಳನ್ನು ದಾಟಿಸುತ್ತಾರೆ. ಗುಗ್ಗಳ ಮಾಡುವಾಗ ಇಲ್ಲವೇ ವೀರಭದ್ರನ ಜಾತ್ರೆಯ ಸಂದರ್ಭದಲ್ಲಿ ಈ ಪವಾಡಗಳನ್ನು ಮಾಡುತ್ತಾರೆ. ಒಂದು ನೂರಾ ಒಂದು ಗಂಟುಗಳನ್ನು ಅಥವಾ ಅರವತ್ಮೂರು ಗಂಟುಗಳನ್ನು ದಾಟಿಸುತ್ತಾರೆ. ಕಾರಣವೆಂದರೆ ವೀರಭದ್ರನು ಒಂದುನೂರಾ ಒಂದು ರಾಕ್ಷಸರ ತಲೆಯನ್ನು, ಕಡಿದುದರ ಜ್ಞಾಪಕಾರ್ಥವಾಗಿ ವೀರಭದ್ರನ ಆಚರಣೆಯಲ್ಲಿ ಈ ಪವಾಡವನ್ನು ಮಾಡುವರು. ವೀರಭದ್ರನ ಮೇಲೆ ಜನಪದರು ಕಟ್ಟಿರುವ ಒಡಪುಗಳನ್ನು ಹೇಳುತ್ತಾರೆ. ನಂತರ ಒಂದೊಂದು ಗಂಟುಗಳನ್ನು ದಾಟಿಸುತ್ತಾರೆ. ಈ ಗಂಟುಗಳನ್ನು ಪುರವಂತರೇ ಮೊದಲು ಶಸ್ತ್ರವನ್ನು ನಾಲಿಗೆಗೆ ಕುತ್ತಿಗೆಯ ಹತ್ತಿರ, ತುಟಿಗೆ, ಗಲ್ಲಕ್ಕೆ, ಗಂಟಲಿಗೆ, ಮತ್ತು ಹೊಕ್ಕಳಕ್ಕೆ , ಶಸ್ತ್ರವನ್ನು ಹಾಕಿಕೊಂಡು ಪವಾಡವನ್ನು ಮಾಡುತ್ತಾರೆ.

ಪುರವಂತರು ಶಸ್ತ್ರ ಹಾಕುವಾಗ ಅವರ ಹತ್ತಿರ ಹಾಗೇ ಹಾಕಿಸಿಕೊಳ್ಳಬಾರದು. ದಕ್ಷಿಣೆಯನ್ನು ಕೊಡಬೇಕು. ಪುರವಂತರು ಈ ದಾರದ ಪವಾಡ ಮಾಡುವಾಗಲೂ ಇಂತಿಷ್ಟೇ ಎಂದು ದಕ್ಷಿಣೆ ಕೊಡಬೇಕು. ಭಕ್ತರು ಕೊಟ್ಟ ದಕ್ಷಿಣೆಯನ್ನು ಆ ಊರಿನ ವೀರಭದ್ರನ ಹುಂಡಿಗೆ ಹಾಕುತ್ತಾರೆ. ಇಲ್ಲವೇ ಬಂದ ದಕ್ಷಿಣೆಯಿಂದ ವೀರಭದ್ರ ದೇವಸ್ಥಾನಕ್ಕೆ ಏನಾದರೂ ಒಂದು ಉಪಯೋಗಕ್ಕೆ ಬರುವಂತಹ ವಸ್ತುವನ್ನು ಕೊಡುತ್ತಾರೆ.

ದೇವರ ಬಗ್ಗೆ ನಂಬಿಕೆ ಇಲ್ಲದವರು ಶಸ್ತ್ರ ಹಾಕಿಸಿಕೊಳ್ಳುವುದಿಲ್ಲ. ಕೆಲವರು ಅಂಟು ರೋಗಗಳಿಂದ ಏನಾದರೂ ಅನಾಹುತವಾದೀತು ಎಂದುಕೊಂಡು ಶಸ್ತ್ರವನ್ನು ಹಾಕಿಸಿಕೊಳ್ಳುವುದಿಲ್ಲ.ಕೆಲ ಜನರು ಶಸ್ತ್ರವನ್ನು ಹಾಕಿಸಿಕೊಳ್ಳಲು ಹೆದರುತ್ತಿರುತ್ತಾರೆ. ಸಂಪ್ರದಾಯದ ಪ್ರಕಾರ ಸೂಜಿ ಶಸ್ತ್ರ ಎಂದು ಹೆಬ್ಬರಳ ಹತ್ತಿರ ಹಾಕುತ್ತಾರೆ.

**ಗುಗ್ಗಳ ಆಚರಣೆಯಲ್ಲಿ ಉಪಯೋಗಿಸುವ ವಾದ್ಯಗಳು :**

ಈ ಗುಗ್ಗಳ ಮದುವೆಯ ಮೆರವಣಿಗೆಯ ಸಂದರ್ಭದಲ್ಲಿ ವಾದ್ಯಗಳನ್ನು ಉಪಯೋಗಿಸುತ್ತಾರೆ. ಈ ವಾದ್ಯಗಳ ಹೆಸರುಗಳೆಂದರೆ ಸಮಾಳ. ಇದು ವೀರಭದ್ರನಿಗೆ ಪ್ರಿಯವಾದ ವಾದ್ಯ. ನಂದಿಕೋಲು, ಸೊನಾಯಿ, ಡೋಲು, ಬುರುಗು ಇವುಗಳೆಲ್ಲವನ್ನು ಈ ಆಚರಣೆಯಲ್ಲಿ ಉಪಯೋಗಿಸುತ್ತಾರೆ.

**ಸಮಾಳ :** ಇದನ್ನು ಎರಡು ಕಬ್ಬಿಣದ ಅಥವಾ ಹಿತ್ತಾಳೆಯ ಬಕೇಟುಗಳನ್ನು ತೆಗೆದುಕೊಂಡು ಅವುಗಳಿಗೆ ಒಂದು ಕಡೆ ಹೋತಿನ (ಆಡು) ಚರ್ಮ ಇನ್ನೊಂದು ಕಡೆಗೆ ಪ್ಲಾಸ್ಟಿಕ್‌ನ ಹಾಳೆಗಳನ್ನು ಹಾಕಿ ಮಳೆಗಳನ್ನು ಬಡಿದಿರುತ್ತಾರೆ. ಹೀಗೆ ಮಾಡುವುದರಿಂದ ಒಂದು ತರದಲ್ಲಿ ಇದರ ನಾದ ತುಂಬಾ ಸೊಗಸಾಗಿ ಕೇಳಲು ಹಿತವೆನಿಸುತ್ತದೆ. ಪುರವಂತರು ಒಡಬು ಹೇಳಿ ಕೊನೆಗೆ ಕಡೆ, ಕಡೆ ಎಂದು ಹೇಳುತ್ತಲೇ, ಅಲ್ಲಿ ಸಮಾಳದ ಶಬ್ದ ಕೇಳಿಸುತ್ತದೆ. ಈ ಸಮಾಳವಿಲ್ಲದಿದ್ದರೆ ವೀರಭದ್ರ ದೇವರ ಯಾವ ಕಾರ್ಯವು ನಡೆಯುವುದಿಲ್ಲ. ಇದು ಇಲ್ಲ ಎಂದರೆ ಗುಗ್ಗಳದ ಆಚರಣೆ ಎಂದು ಯಾರು ಅಂದು ಕೊಂಡಿರುವುದಿಲ್ಲ.

**ಗುಗ್ಗಳ ಆಚರಣೆಯಲ್ಲಿ ವೀರಶೈವ ಮತ್ತು ಇತರ ಸಮುದಾಯಗಳ ಪಾತ್ರ :**

ಈ ಆಚರಣೆಯಲ್ಲಿ ವೀರಶೈವರ ಪಾತ್ರವೇನೆಂದರೆ; ಗುಗ್ಗಳ ಆಚರಣೆಯಲ್ಲಿ ತುಂಬಾ ಮಡಿಯಿಂದ ಇರುತ್ತಾರೆ. ಅವರೇ ಹೆಚ್ಚಾಗಿ ಗುಗ್ಗಳವನ್ನು ಹೊರಡಿಸುತ್ತಾರೆ. ನಂತರ ಯಾರ ಯಾರ ಮನೆಯಲ್ಲಿ ವೀರಭದ್ರ ಹಲಗಿ ಇದೆ ಎಂದು ತಿಳಿದಿರುತ್ತಾರೆ. ಅವರ ಮನೆಗೆ ಹೋಗಿ ಶಾಸ್ತ್ರೋಕ್ತವಾಗಿ ಕರೆದುಕೊಂಡು ಬರುವುದು, ವೀರಶೈವ ಜನಾಂಗದವರ ಕರ್ತವ್ಯವಾಗಿರುತ್ತದೆ.

**ಜಂಗಮರು :** ಇವರು ಮೊದಲೇ ಮನೆಯ ಗುರುಗಳು ಎಂದು ಹಿರಿಯರು ಮಾಡಿಕೊಂಡಿರುತ್ತಾರೆ. ಯಾವುದೇ ಹಬ್ಬಹರಿದಿನಗಳು, ಮದುವೆಯಂತಹ ಕಾರ್ಯಕ್ರಮಗಳಿಗೆ ಜಂಗಮರನ್ನು ಮೊದಲೇ ಕರೆಯುತ್ತಾರೆ. ಯಾಕೆಂದರೆ ಈ ಜಂಗಮರ ಪಾದ ತೊಳೆದು 'ಪಾದೋದಕ'ವನ್ನು ಮನೆಯಲೆಲ್ಲಾ ಚುಮುಕಿಸಿದರೆ ಮನೆ ಶುದ್ಧವಾದಂತೆ ಎಂದು ಭಾವಿಸಲಾಗುತ್ತದೆ. ಈ ಗುಗ್ಗಳ ಆಚರಣೆಯಲ್ಲಿಯೂ ಕೂಡ ಹಿಂದುಳಿದ ಜಾತಿಯವರು ಕಾರ್ಯನಿರ್ವಹಿಸುತ್ತಾರೆ. ಮದುವೆಯ ಕಾರ್ಯದಲ್ಲಿ ಅಥವಾ ದಾರಿಯಲ್ಲಿ ಬೇರೆ ಬೇರೆ ಜಾತಿಗಳ ಜನಗಳು ಇಲ್ಲಿ ಬರುತ್ತಾರೆ. ಅವರಿಂದ ಗುಗ್ಗಳ ಆಚರಣೆಗೆ ಯಾವುದೇ ತೊಂದರೆಯಾಗಬಾರದು ಎಂದು ಜಂಗಮರ ಪಾದೋದಕವನ್ನು ಚುಮುಕಿಸಿ ಪವಿತ್ರಗೊಳಿಸಬೇಕೆಂಬ ನಂಬಿಕೆ ಇದೆ. ಜನಪದರಲ್ಲಿ ಜಂಗಮರ ಕಾಲಿನ ಹೆಬ್ಬೆರಳಲ್ಲಿ ಪಾರ್ವತಿ ಪರಮೇಶ್ವರಿಯರು ಇರುತ್ತಾರೆ ಎಂಬು ನಂಬಿಕೆ ಇದೆ. ಗುಗ್ಗಳ ಅಗ್ನಿ ಪುಟ ಮಾಡುವಾಗ ಮೊದಲು ಪಾದೋದಕವನ್ನು ಎಲ್ಲೆಡೆ ಸಿಂಪಡಿಸಿದ ಮೇಲೆ ಅದಕ್ಕೊಂದು ಮಂತ್ರವನ್ನು ಹೇಳುತ್ತಾರೆ. ಈ ಎಲ್ಲಾ ಕರ್ಯ ಆದ ಮೇಲೆ ಗುಗ್ಗಳವನ್ನು ಪುಟ ಮಾಡುವರು. ನಂತರ ಗುರುಗಳನ್ನು ದಾರಿಯಲ್ಲಿ ಮುಂದಕ್ಕೆ ಅವರನ್ನು ಬಿಟ್ಟು ಗುಗ್ಗಳವನ್ನು ಹಿಂದೆ ತೆಗೆದುಕೊಂಡು ಹೋಗುತ್ತಾರೆ. ದಾರಿಯಲ್ಲಿ ಯಾರಿಗಾದರೂ ದೇವರು ಬಂದರೆ ಅಥವಾ ತಲೆಸುತ್ತು ಬಂದರೆ ಅವರಿಗೆ ಪಾದೋದಕವನ್ನು ಮುಖಕ್ಕೆ ಎರಚಿದೊಡನೆ ನಿಚ್ಚಳವಾಗುತ್ತಾರೆ. ಗುಗ್ಗಳ ಆಚರಣೆಯಲ್ಲಿ ಹೀಗೆ ಇವರ ಪಾತ್ರ ಕಂಡುಬರುತ್ತದೆ.

**ತಳವಾರನ ಪಾತ್ರ :** ತಳವಾರನ ಪಾತ್ರವೆಂದರೆ ಮನೆ ಮನೆಗೆ ಹೋಗಿ ಜನರನ್ನು ಕರೆದುಕೊಂಡು ಬರುವುದು. ಜೊತೆಯಲ್ಲಿ ಕಾರ್ಯ ನಡೆಯುವಂತವರ ಮನೆಯಲ್ಲಿರುವ ಒಬ್ಬ ವ್ಯಕ್ತಿಯನ್ನು ಕರೆದುಕೊಂಡು ಜೊತೆಗೆ ಹೋಗಿ, ಜನರನ್ನು ಕರೆದುಕೊಂಡು ಹೋಗುತ್ತಾರೆ. ಇವರ ಮನೆಯಲ್ಲಿ ಈ ಕಾರ್ಯವಿದೆ, ನೀವು ಬರಬೇಕು ಎಂದು ಹೇಳಿ ಬರುತ್ತಾರೆ. ಮತ್ತು ದೀವಟಿಗೆಯನ್ನು ಕೂಡ ಹಿಡಿಯುವುದು ತಳವಾರನ ಕರ್ತವ್ಯ ಅಥವಾ ಪಾತ್ರವಾಗಿದೆ.

**ಕುಂಬಾರ :** ಇವನು ಗುಗ್ಗಳದ ಕೊಡಗಳನ್ನು ತಯಾರುಮಾಡಿ ಕೊಡುವುದು ಮತ್ತು ಸುರುಗಿ ಎರೆಯಲು ಕೇಲುಗಳನ್ನು ಮಾಡಿಕೊಡುವುದು ಮುಂತಾದವು ಕುಂಬಾರನ ಕರ್ತವ್ಯವಾಗಿರುತ್ತದೆ. ಒಂದೊಂದು ಸಾರಿ ಒಂದೊಂದು ಊರಿನಲ್ಲಿ ಮದು ಮಕ್ಕಳಿಗೆ ಬಾಸಿಂಗವನ್ನು ಇವರ ಹತ್ತಿರವೇ ತೆಗೆದುಕೊಳ್ಳುವರು.

**ಅಗಸ (ಮಡಿವಾಳರ ಪಾತ್ರ) :** ಗುಗ್ಗಳ ನಡೆಯುವವರ ಮನೆಯಲ್ಲಿನ ಎಲ್ಲಾ ಬಟ್ಟೆಗಳನ್ನು ಒಗೆಯುವುದು, ಗುಗ್ಗಳ ಆಚರಣೆಯು ನಡೆಯುವ ಸಂದರ್ಭದಲ್ಲಿ ಜಂಗಮರಿಗೆ ಮಡಿಯನ್ನು ಹಾಸುವುದು ಇವರ ಕೆಲಸ.

**ಭಜಂತ್ರಿಯರು :** ಗುಗ್ಗಳ ಆಚರಣೆಯಲ್ಲಿ ಲಯಬದ್ಧವಾಗಿ ಡೋಲು ಬಾರಿಸುವುದು, ಪೂಜಾ ಮುಂತಾದ ಕಾರ್ಯಗಳಲ್ಲಿ ಭಾಗವಹಿಸುವುದು ಇವರ ಕರ್ತವ್ಯವಾಗಿದೆ.

**ಚಲವಾದಿಯರು :** ಈ ಆಚರಣೆಯಲ್ಲಿ ಸನಾಯಿ ಊದುವುದು ಮತ್ತು ಬುರುಗು ಬಾರಿಸುವುದು ಇವರ ಕಾರ್ಯವಾಗಿರುತ್ತದೆ.

ಒಟ್ಟಾರೆ ಹೇಳಬೇಕೆಂದರೆ ಜನಗಳು ಈ ಕಾರ್ಯಕ್ಕೆ ಬರಬೇಕಾದರೆ, ಅವರು ಮೊದಲು ಮಡಿಯುಡಿಯಿಂದ ಬರಬೇಕು. ಮತ್ತು ಯಾವುದೇ ಮಾಂಸ ತಿಂದು, ಮಧ್ಯ ಸೇವಿಸಿ ಪಾಲ್ಗೊಳ್ಳಬಾರದು. ಯಾವುದೇ ದುಶ್ಚಟಗಳಿಂದ ಈ ಆಚರಣೆಯಲ್ಲಿ ಭಾಗವಹಿಸಬಾರದು. ಒಂದು ವೇಳೆ ಹಾಗೇನಾದರು ಅಸಭ್ಯತೆಯಿಂದ ನಡೆದುಕೊಂಡರೆ, ಮುಂದೆ ಅವರಿಗೆ ತುಂಬಾ ಅಪಾಯವಾಗುತ್ತದೆ ಎಂಬುದು ಜನಪದ ನಂಬಿಕೆ. ಇವರನ್ನು ಕರೆಯಲು ಹೋದಾಗ ಇವರಿಗೂ ಕೂಡ ಎಲ್ಲರಿಗೂ ಕೊಡುವಂತೆ ಎಲ್ಪಿಯನ್ನು ಕೊಟ್ಟು ಬರಬೇಕಾಗುತ್ತದೆ. ನಂತರ ಅವರು ಕೇಳಿದಷ್ಟು ಹಣವನ್ನು ಕೊಡಬೇಕಾಗುತ್ತದೆ. ಹೀಗೆ ಆಚರಣೆಯಲ್ಲಿ ಮೇಲಿನ ಜನಾಂಗದವರ ಪಾತ್ರಗಳು ಬಹು ಮುಖ್ಯವಾಗಿದೆ.

**ಗುಗ್ಗಳ ಆಚರಣೆ : ಗಂಗೆ ಪೂಜೆ**

ಗಂಗೆಯು ಪವಿತ್ರವಾದುದು ಹೇಗೆ ಎಂಬುದಕ್ಕೆ ಒಂದು ಪೌರಾಣಿಕ ಕತೆ ಹೀಗಿದೆ. ಒಂದು ದಿನ ಪರಮೇಶ್ವರನು ಒಡ್ಡೋಲಗದಲ್ಲಿ ಕುಳಿತಂಥಾ ಸಮಯದಲ್ಲಿ ಆಗ ದೇವಿಯು ಅಲ್ಲಿಗೆ ಬಂದು, ಹೇ ದೇವಾ ಇಡೀ ಭೂಮಂಡಲದ ಜನರು ಉಳವಿ, ಗೋಕರ್ಣ, ಕಾಶಿ, ರಾಮೇಶ್ವರ ಮುಂತಾದ ಪುಣ್ಯಕ್ಷೇತ್ರಗಳೆಂದು

ಭಾಗೀರಥಿ ನದಿಗಳ ಮತ್ತು ಪುಣ್ಯತೀರ್ಥಗಳೆಂದು ತಿಳಿದು ಇಲ್ಲಿ ಸ್ನಾನ ಮಾಡಿ ದೋಷಗಳನ್ನು ಬಿಟ್ಟು ಹೋಗುವರು. ಆದರೆ ಭೂಲೋಕದಲ್ಲಿಯ ಜನರು ಬಿಟ್ಟಂಥಾ ದೋಷವು ನನ್ನಲ್ಲಿಯೇ ಉಳಿಯಿತು. ಅಂದ ಮೇಲೆ ನಾನು ಆ ದೋಷವನ್ನು ಯಾವ ನದಿ, ಯಾವ ತೀರ್ಥಗಳಲ್ಲಿ ಮುಳುಗಿ ದೋಷ ಪರಿಹಾರ ಮಾಡಿಕೊಳ್ಳಲಿ ಎಂದು ಕೇಳುವಳು. ಪರಮಾತ್ಮನು ನೀನು ಪವಿತ್ರ ಗಂಗೆ ನಿನಗೆ ದೋಷವು ಹೇಗೆ ಬರುವುದು?. ಒಂದು ವೇಳೆ ನಿನಗೆ ಸಂಶಯವಿದ್ದರೆ ಮಹಾಮಹಾ ಶರಣ ಪಾದ ಸೋಂಕಿದ ಮೇಲೆ ನಿನ್ನ ದೋಷ ಹಸೆಗಟ್ಟು ಹೋಗುತ್ತದೆ. ಗಂಗೆಯು ಪರಮೇಶ್ವರನಿಗೆ ನೀನು ಜಂಗಮ ರೂಪವನ್ನು ಧರಿಸಿ ಭೂಲೋಕಕ್ಕೆ ಬಂದು, 'ಪಂಚಾಕ್ಷರಿ ಷಡಾಕ್ಷರಿ'ಮಂತ್ರದಿಂದ ನೀನೆ ನನ್ನ ದೋಷವನ್ನು ಪರಿಹರಿಸ ಬೇಕೆಂದು ಬೇಡಿಕೊಳ್ಳುವಳು. ಪರಮೇಶ್ವರನು ಹಾಗೆ ಆಗಲೆಂದು ಭೂಲೋಕಕ್ಕೆ ಬಂದು, ಜಂಗಮ ರೂಪವನ್ನು ಧರಿಸಿ, ಭಕ್ತರಿಗೆ ಲಿಂಗಪೂಜೆ, ಶಿವಪೂಜೆ ಎಂದು ಅನೇಕ ರೀತಿಯಿಂದ ಅರ್ಜಿಸುತ್ತಾನೆ. ಭಕ್ತರನ್ನು ಉದ್ದಾರ ಮಾಡುವನು. ಗಂಗಾ ದೇವಿಗೆ ಸಂಶಯ ನಿಮಿತ್ಯದಿಂದ ಬಂದ ದೋಷ ದಶೆಗಟ್ಟು ಹೋಗಲಿಕ್ಕೆ, ಲಿಂಗಪೂಜೆ, ಪಾದಪೂಜೆ, ಶಿವ ಪೂಜೆಯೆಂದು ನಿರ್ಮಾಣ ಮಾಡಿದ್ದರಿಂದ ಮತ್ತು ಶಿವನ ಪಾದ ಗಂಗೆಯ ಮೇಲೆ ಸೋಂಕಿದ್ದರಿಂದ ಅವಳು ಪಾವನ ಅಥವಾ ಪವಿತ್ರವಾಗುತ್ತಾಳೆ.

ಗಂಗಮ್ಮನ ಪೂಜೆಯನ್ನು ಮನೆಯಲ್ಲಿ ಯಾವುದೇ ಕಾರ್ಯ ಅಥವಾ ಹಬ್ಬ ಹರಿದಿನಗಳಲ್ಲಿ ಮಾಡುತ್ತಾರೆ. ಗಂಗಮ್ಮ ಎಂದರೆ ತುಂಬಾ ಪ್ರಸಿದ್ಧಳು. ಗಂಗೆ ಇಲ್ಲದಿದ್ದರೆ ಯಾವ ಕೆಲಸವು ಆಗುವುದಿಲ್ಲ. ಜನಪದ ನಂಬಿಕೆಯಲ್ಲಿ ಇದು ಒಂದು ಎಂದು ಹೇಳಬಹುದು. ಜನಪದರ ಬಾಯಿಯಲ್ಲಿ ಗಂಗೆ ಮತ್ತು ಗೌರಿಯರ ಬಗ್ಗೆ ಒಂದು ಕತೆಯನ್ನು ಹೇಳುತ್ತಾರೆ. ಏನೆಂದರೆ ಗೌರಿಯು ನಾನು ಹೆಚ್ಚು ಗಂಗೆ ನಾನು ಹೆಚ್ಚು ಎಂದು ಜಗಳ ಮಾಡುತ್ತಿರುತ್ತಾರೆ. ಗೌರಿಯು ನೀನು ಇಲ್ಲದೆ ನಾನು ಇರಬಲ್ಲೆ ಎಂದು ಸೊಕ್ಕಿನಿಂದ ಹೇಳುತ್ತಾಳೆ. ಗೌರಿಯು ಸ್ನಾನ ಮಾಡಲು ಗಂಗೆ (ನೀರು) ಬೇಕು, ಕುಡಿಯಲು ಗಂಗೆಬೇಕು. ಆದರೆ ಇವಕ್ಕೆ ಯಾವುದಕ್ಕೂ ಗಂಗೆಯನ್ನು ಉಪಯೋಗಿಸದೆ, ಗೌರಿಯು ತುಪ್ಪವನ್ನು ಕುಡಿದು, ಹಾಲಿನಿಂದ ಸ್ನಾನ ಮಾಡುತ್ತಿದ್ದಳಂತೆ. ಆಗ ಒಂದು ದಿನ ಗೌರಮ್ಮ ಹೊರಗಾದಂತಹ (ಮುಟ್ಟು) ಸಂದರ್ಭದಲ್ಲಿ ತುಂಬಾ ಕಷ್ಟಪಟ್ಟಳಂತೆ. ಅವಳ ಮೈಯೆಲ್ಲಾ ದುರ್ಗಂದದಿಂದ ತುಂಬಾ ನಾರತೊಡಗಿತ್ತು. ಆಗ ಗೌರಿಯು ಗಂಗೆಯ ಹತ್ತಿರ ಹೋಗಿ ನನ್ನನ್ನು ಕ್ಷಮಿಸು. ನೀನೇ ಹೆಚ್ಚು ಎಂದು ಗೌರಿಯು ಗಂಗೆಯನ್ನು ಬೇಡಿಕೊಂಡಳಂತೆ. ಆಗ ಶಿವನು ಗೌರಿಯನ್ನು ತನ್ನ ತೊಡೆಯ ಮೇಲೆ ಕುಳಿಸಿಕೊಂಡರೆ ಗಂಗೆಯನ್ನು ತನ್ನ ತಲೆಯ ಮೇಲೆ ಇಟ್ಟುಕೊಂಡ ಎಂದು ಜನಪದರ ಕಟ್ಟಿದ ನಂಬಿಕೆ.

ಈ ಗುಗ್ಗಳದ ಆಚರಣೆಯಂತ ಸಂದರ್ಭದಲ್ಲಿ ಎರಡು ಸಾರಿ ಗಂಗಮ್ಮನ ಪೂಜೆಗೆ ಹೋಗುವಂತಹ ರೂಢಿ ಇದೆ. ಹೇಗೆಂದರೆ ಮೊದಲು ಮದು ಮಕ್ಕಳಿಗೆ ಸ್ನಾನ ಮಾಡಿಸಲು ಗಂಗೆಯಿಂದ ತಂದ ನೀರಿನಿಂದಲೇ ಸ್ನಾನ ಮಾಡಿಸುತ್ತಾರೆ. ಆದಕ್ಕೆ ಈ ಪೂಜೆಗೆ ಹೆಣ್ಣು ಮಕ್ಕಳು ಮಾತ್ರ ಹೋಗಿ ಬರುತ್ತಾರೆ. ಜನಪದರ ನಂಬಿಕೆ ಎಂದರೆ ಗಂಗೆಯಿಂದ ತಂದಿರುವ ನೀರು ಶುದ್ಧವಾದದು ಎನ್ನುವ ನಂಬಿಕೆ.

**ಈ ಪೂಜೆಯನ್ನು ಮಾಡುವ ವಿಧಾನ :**

ಮೊದಲು ಕುಂಬಾರನ ಮನೆಯಿಂದ ನಾಲ್ಕು ಸಣ್ಣ ಮಡಿಕೆಯನ್ನು ತರುವರು. ಜೊತೆಗೆ ಒಂದು ದೊಡ್ಡ ಮಡಿಕೆಯನ್ನು ತೆಗೆದುಕೊಂಡು ಬರುತ್ತಾರೆ. ಅವುಗಳನ್ನು ಕೇಲು ಎಂದು ಕರೆಯುತ್ತಾರೆ. ನಂತರ ಅವುಗಳನ್ನು ತೆಗೆದುಕೊಂಡು ಗಂಗೆಯ ಪೂಜೆಗೆ ಹೋಗುತ್ತಾರೆ. ಅಲ್ಲಿ ಐದು ಮರಳು ಗೌರಿಯನ್ನು ಮಾಡಿ ಅದರ ಹಿಂದೆ ಈ ಐದು ಬಿಂದಿಗೆ ಅಥವಾ ಮಡಿಕೆಯಲ್ಲಿ ನೀರನ್ನು ತುಂಬುತ್ತಾರೆ. ಅದಕ್ಕೆ ವಿಭೂತಿ, ಕುಂಕುಮ, ಅರಿಶಿಣ ಮತ್ತು ಹಗನೂಲಿನ ದಾರವನ್ನು ಹಾಕುತ್ತಾರೆ. ಹೂವು ಪತ್ರಿಗಳಿಂದ ಅಲಂಕರಿಸಿ, ದೀಪಧೂಪದಿಂದ ಪೂಜಿಸುವರು. ನಂತರ ಕಾಯಿ ಒಡೆದು ನೈವೇದ್ಯವನ್ನು ಮಾಡುವರು. ಹೆಣ್ಣು ಮಕ್ಕಳಿಗೆ ಅರಿಶಿಣ, ಕುಂಕುಮ, ಹೂವು, ಕಂಕಣ ಕಟ್ಟಿ ಉಡಿಯನ್ನು ತುಂಬುತ್ತಾರೆ ( ಉಡಿ ಎಂದರೆ ಎರಡು ಎಲೆ, ಎರಡು ಅಡಿಕೆ, ಎರಡು ಉತ್ತುತ್ತಿ ಮತ್ತು ನೆನೆ ಹಾಕಿದ ಕಡ್ಲಿಬೀಜ ಹೀಗೆ ಇಟ್ಟಿರುವಂತದ್ದಕ್ಕೆ ಉಡಿ ಎನ್ನುವರು). ಇದನ್ನು ಮುತ್ತೈದೆಯರು ಶ್ರೇಷ್ಠ ಎನ್ನುವ ನಂಬಿಕೆ. ಮತ್ತು ವೀರಶೈವರ ಪಂಚ ಪೀಠಗಳೇ ಇವರ ಹತ್ತಿರ ಇದೇ ಎಂದು ಹೇಳುವರು. ಏನೆಂದರೆ ಕಾಶಿಯನ್ನು ಕುಂಕುಮ, ಕೇದಾರವನ್ನು ಕಾಲುಂಗುರಕ್ಕೆ, ಶ್ರೀಶೈಲವನ್ನು ಮೂಗುತಿಗೆ, ಉಜ್ಜಯನಿಯನ್ನು ಹೂವಿಗೆ, ತಾಳಿಯನ್ನು ರಂಬಾಪುರಿ ಪೀಠಕ್ಕೆ ಹೀಗೆ ಐದು ಪೀಠಗಳು ಹೆಣ್ಣು ಮಕ್ಕಳು ಅಂದರೆ ಮುತ್ತೈದೆಯರು ಹೊತ್ತಿರುತ್ತಾರೆ. ಅದಕ್ಕಾಗಿ ಯಾವ ಕಾರ್ಯಕ್ಕಾದರೂ ಇವರು ಮುಂದೆ ಇರಬೇಕಾಗುತ್ತದೆ.

ನಂತರ ಈ ಮೇಲಿನದೆಲ್ಲಾ ಸಂಪ್ರದಾಯಗಳನ್ನು ಮುಗಿಸಿಕೊಂಡು ಬರುತ್ತಾರೆ. ನಂತರ ಅಲ್ಲಿಂದ ತಂದಿರುವಂತಹ ಎಲ್ಲಾ ಸಣ್ಣ ಮಡಿಕೆಯನ್ನು ನಾಲ್ಕು ಮೂಲೆಗೆ ಇಟ್ಟು, ದೊಡ್ಡ ಬಿಂದಿಗೆಯ ನೀರನ್ನು ಸುರುಗಿ ಎರೆಯುವ ನೀರಿಗೆ ಬೆರೆಸುತ್ತಾರೆ. ನಂತರ ಮದುಮಕ್ಕಳಿಗೆ ಸ್ನಾನ ಮಾಡಿಸುತ್ತಾರೆ. ಎಲ್ಲರೂ ಮಡಿಯುಡಿಯಿಂದ ಸಿದ್ಧರಾದ ಮೇಲೆ ಪುರವಂತರು ಮತ್ತು ಜಂಗಮರು ಸೇರಿ ಮತ್ತೊಮ್ಮೆ ಗಂಗೆಯ ಪೂಜೆಗೆ ಹೋಗುವರು. ಆಗ ಐದು ಅಥವಾ ಒಂಭತ್ತು ಮಂದಿ ಮನೆಯಿಂದ ತಂದಿರುವ ಎಲ್ಲಾ ವೀರಭದ್ರನ ಹಲಗಿ ತೆಗೆದುಕೊಂಡು ಹೋಗುವರು. ಜೊತೆಗೆ ಶಸ್ತ್ರಗಳನ್ನು ತೆಗೆದುಕೊಂಡು ನಂತರ ಮತ್ತೊಮ್ಮೆ ಗಂಗೆಯ ಹತ್ತಿರ ಹೋಗುತ್ತಾರೆ. ಅಲ್ಲಿ ಜಂಗಮರ ಪಾದೋದಕದಿಂದ ಅವುಗಳನ್ನು ಶುದ್ಧ ಮಾಡಿಸುತ್ತಾರೆ. ಮತ್ತೊಮ್ಮೆ ಗಂಗೆಯ ಪೂಜೆಯನ್ನು ಮಾಡುತ್ತಾರೆ. ವೀರಭದ್ರನ ಮೂರ್ತಿಯನ್ನು ಪಂಚಾಮೃತದಿಂದ ಅಭಿಷೇಕವನ್ನು ಮಾಡುತ್ತಾರೆ. ಅವುಗಳಲ್ಲಿ ಒಂದನ್ನು ಮದುಮಗನ ಕೈಯಲ್ಲಿ ಪ್ರತಿಜ್ಞೆ ಮಾಡಿಸಿಕೊಂಡು ವೀರಭದ್ರನ ಹಲಗೆ ಕೊಡುತ್ತಾರೆ. ಹೆಣ್ಣು ಮಗಳಿಗೆ ಆರತಿಯನ್ನು ಕೊಡುತ್ತಾರೆ. ಅಲ್ಲಿ ಮದು ಮಕ್ಕಳಿಗೆ ಶಸ್ತ್ರ ಹಾಕುತ್ತಾರೆ (ಬಾಯಿಗೆ ಇಲ್ಲವೆ ಗಲ್ಲಕ್ಕೆ) ಹೆಣ್ಣು ಮಕ್ಕಳಿಗೂ ಗಲ್ಲಕ್ಕೆ ಇಲ್ಲವೆ ಹೆಬ್ಬರಳಿಗೆ ಆಸಕ್ತಿ ಇದ್ದವರಿಗೆ ಮಾತ್ರ ಶಸ್ತ್ರ ಹಾಕುತ್ತಾರೆ. ಶಸ್ತ್ರವನ್ನು ಹಾಕಿ ಮನೆಗೆ ಕರೆದುಕೊಂಡು ಬರುತ್ತಾರೆ. ನಂತರ ಗುಗ್ಗಳವನ್ನು ಹೊರಡಿಸಲು ಅಣಿ ಮಾಡುತ್ತಾರೆ.

ಅಧ್ಯಾಯ : ೩

# ಗುಗ್ಗಳ ಮದುವೆಯ ಆಚರಣೆ

ಮಾನವ ಜೀವನದಲ್ಲಿ ಮದುವೆ ಒಂದು ಮಹತ್ವದ ಘಟ್ಟ. ಅಪರಿಚಿತವಾದ ಗಂಡು ಹೆಣ್ಣನ್ನು ಒಂದು ಗೂಡಿಸಿ ಜೀವನ ಸಂಗಾತಿಗಳನ್ನಾಗಿ ಮಾಡುವ ವಿಶಿಷ್ಟ ಸಂದರ್ಭ. ಮದುವೆ ಬದುಕಿಗೆ ಒಂದು ಭದ್ರತೆಯನ್ನು, ಜವಾಬ್ದಾರಿಯನ್ನು ತಂದು ಕೊಟ್ಟು ಜೀವನದಲ್ಲಿ ಉತ್ಸಾಹವನ್ನೂ ಆನಂದವನ್ನು ತುಂಬುತ್ತದೆ. ಎರಡು ಕುಟುಂಬಗಳು ಎರಡು ಊರುಗಳಲ್ಲಿ ಹಂಚಿಕೊಂಡಿದ್ದರೆ, ಆ ಎರಡು ಊರುಗಳ ನಡುವೆ ಮಧುರ ಬಾಂಧವ್ಯವನ್ನು ಏರ್ಪಡಿಸುತ್ತದೆ. ಊರು ಊರುಗಳ ನಡುವೆ ಸಾಮರಸ್ಯ ಕುದುರುತ್ತದೆ. ಒಟ್ಟಿನಲ್ಲಿ ಮದುವೆ ಸಾಮಾಜಿಕವಾಗಿ ಸಾಂಸ್ಕೃತಿಕವಾಗಿ ಮಹತ್ವದ ಪಾತ್ರವಹಿಸುತ್ತದೆ (ಡಾ. ಅಂಬಳಿಕೆ ಹಿರಿಯಣ್ಣ, ೧೯೯೮:೨೬೫).

ಹೊಸದಾಗಿ ಮದುವೆ ಸಂಬಂಧ ಬೆಳೆಸುವ ಎರಡು ಕುಟುಂಬಗಳು ಪರಸ್ಪರ ಗಂಡು ಹೆಣ್ಣು ಕೊಟ್ಟುಕೊಳ್ಳಬಹುದು. ಈ ಪದ್ಧತಿಗೆ ''ಹೆಣ್ಣು ಕೊಟ್ಟು ಹೆಣ್ಣು ತರುವುದು'' ಎನ್ನುವರು. ಮೊದಲನೆ ಹೆಂಡತಿ ಮರಣ ಹೊಂದಿದರೆ, ಅವಳ ತಂಗಿಯನ್ನು 'ವಿವಾಹ' ಆಗಬಹುದು. ಹೆಣ್ಣು ಮಕ್ಕಳನ್ನು ಋತುಮತಿಯಾಗುವ ಸ್ವಲ್ಪ ಮೊದಲು ಅಥವಾ ನಂತರ ಮದುವೆ ಮಾಡುವರು. ಬಹು ಪತ್ನಿತ್ವಕ್ಕೆ ಅವಕಾಶವಿರುವುದಿಲ್ಲ. ವರನಾದವನು ತನ್ನ ಅಕ್ಕನ ಮಗಳನ್ನು ಮದುವೆಯಾಗಬಹುದು. ಹಿರಿಯ ಅಣ್ಣನ ಹೆಂಡತಿಯನ್ನು ತಾಯಿಯ ಸಮಾನ ಎಂದು ಗೌರವಿಸುತ್ತಾರೆ. ಮದುವೆ ಮಾತುಕತೆ ಗಂಡಿನ ಮನೆಯಲ್ಲಿ ನಡೆಯುತ್ತದೆ. ಈ ಪೂರ್ವದಲ್ಲಿ ಪ್ರಸಿದ್ಧ ಜ್ಯೋತಿಷಿಗಳು ಇಲ್ಲವೆ ಜಂಗಮರಲ್ಲಿಗೆ ಹೋಗಿ ವಧುವರನ ಜಾತಕವನ್ನು ತೋರಿಸಿ ಇವರಿಬ್ಬರಿಗೂ ಜಾತಕ ಕೂಡಿ ಬಂದರೆ ಮಾತುಕತೆಗೆಂದು ಊರಿನ ಹಿರಿಯರು ಮತ್ತು ಹುಡುಗಿಯ ತಂದೆ ಮತ್ತು ಬಂಧುಗಳು ಗಂಡಿನ ಮನೆಗೆ ಹೋಗುತ್ತಾರೆ. ಗಂಡನ ಮನೆಯವರು ಎಲ್ಲಾ ಸಿದ್ಧತೆಯನ್ನು ಮಾಡಿಕೊಂಡಿರುತ್ತಾರೆ. ಅಂದರೆ ಅವರೂ ಕೂಡ ಆ ಊರಿನ ಹಿರಿಯರನ್ನು ಬಂಧುಗಳನ್ನು ಕರೆದಿರುತ್ತಾರೆ. ನಂತರ ಅವರು ಕೊಡುವುದು ತೆಗೆದುಕೊಳ್ಳುವುದನ್ನು ಮಾತನಾಡಿ ಎಲ್ಲಾ ಸರಿ ಎಂದ ಮೇಲೆ ಬಂದ ಬೀಗರು ಊಟ ಮಾಡಿಕೊಂಡು ಹೋಗುವರು. ಅವರಿಗೆ ಸರಿ ಬರಲಿಲ್ಲವೆಂದರೆ ಹಾಗೆ ತಿಂಡಿತಿಂದು ಹೋಗುವಂತಹ ಸಂಪ್ರದಾಯವಿದೆ. ಹಾಗೆಯೇ ಮನೆಯ ಹಿರಿಯ ಮಗನಿಗೆ ಮೊದಲು ಮದುವೆ ಮಾಡುವ ಪರಂಪರೆಯನ್ನು ನಾವು ಈ ಸಮಾಜದಲ್ಲಿ ಹೆಚ್ಚಾಗಿ ನೋಡಬಹುದು. ಒಂದು ವೇಳೆ ಕಿರಿಯ ಮಗನು ಇದ್ದಾಗ ಅವನನ್ನು ಹಾಗೆಯೇ ಬಿಟ್ಟು ಹಿರಿಯ ಮಗನ ಮದುವೆ ಮಾಡುವಂತಿಲ್ಲ. ಸುರುಗಿಯಲ್ಲಿ ಕಿರಿಯ ಮಗನನ್ನು ಕೂಡಿಸಿ, ಅರಿಶಿನ ಹಚ್ಚಿ ಇತ್ಯಾದಿ ಸಂಪ್ರದಾಯದ ಪ್ರಕಾರ ಸುರಗಿ ನೀರನ್ನು ಮೈಗೆ ಹಾಕಿದ ನಂತರ ಹಿರಿಯ ಮಗನ ಉಳಿದ ಮದುವೆ ಕಾರ್ಯಗಳನ್ನು ನೆರವೇರಿಸುತ್ತಾರೆ. ಏಕೆಂದರೆ ಕಿರಿಯ ಮಗ 'ಕೊನೆ' ಆದಂತೆ ಎಂಬ ನಂಬಿಕೆ ಇದೆ.

**ನಿಶ್ಚಿತಾರ್ಥ ಪದ್ಧತಿ:** ಮಾತುಕತೆ ಮಾಡಿಕೊಂಡು ಬಂದ ವಧುವಿನ ತಂದೆ ಬಂಧು ಬಳಗದವರು ಇನ್ನೊಂದು ಸಾರಿ ಹೋಗಿ ನಾವು ಇಂತಹ ದಿನದಂದು ನಿಶ್ಚಿತಾರ್ಥವನ್ನು ಮಾಡುತ್ತೇವೆ ನೀವು ನಮ್ಮ ಹೆಣ್ಣು ಅನ್ನುವ ಹಾಗೆ ನಿಶ್ಚಿತಾರ್ಥವನ್ನು ಮಾಡಿಕೊಂಡು ಹೋಗಬೇಕು ಎಂದು ಕರೆಯಲು ಹೋಗುತ್ತಾರೆ. ಗಂಡಿನವರು ಆಯಿತು ನಾವು ಈ ದಿನದಂದು ಬರುತ್ತೇವೆ ಎಂದು, ಜಂಗಮರು ನಿರ್ದಿಷ್ಟಪಡಿಸಿದ ದಿನ ಮತ್ತು ಸಮಯವನ್ನು ಹೇಳಿಕಳುಹಿಸುತ್ತಾರೆ. ಗಂಡಿನಕಡೆಯವರು ಎಲೆ,ಅಡಿಕೆ, ಸಕ್ಕರೆ ,ಸೀರೆ, ಕುಬ್ಬುಸ, ಮತ್ತು ಹುಡುಗಿಗೆ ಕೈಬೆರಳಿಗೆ ಉಂಗುರ ಮತ್ತು ಹುಡುಗಿಗೆ ಇನ್ನು ಏನಾದರು ಬಂಗಾರದ ಸಾಮಾನುಗಳನ್ನು ಹಾಕಬೇಕು ಅಂದು ಕೊಂಡಿದ್ದರೆ ಇವುಗಳೆಲ್ಲವನ್ನು ಸಂಪ್ರದಾಯದ ಪ್ರಕಾರ ಹಾಕುತ್ತಾರೆ. ತಮ್ಮ ಬಂಧು - ಮಿತ್ರರನ್ನು ಕರೆದುಕೊಂಡು ಬಂದ ಗಂಡಿನ ಮನೆಯವರಿಗೆ ಹೆಣ್ಣಿನ ಮನೆಯರು ಉಳಿದುಕೊಳ್ಳಲು ಮತ್ತು ತಯಾರಿ ಮಾಡಿಕೊಳ್ಳಲು ಆ ಊರಿನ ಶಾಲೆ ಅಥವಾ ಮಠದಂತಹ ಪ್ರದೇಶದಲ್ಲಿ ಛತ್ರವನ್ನು ವಸತಿಗಾಗಿ ಸಿದ್ಧ ಮಾಡಿರುತ್ತಾರೆ. ಅಲ್ಲಿಗೆ ಬೀಗರು ಬಂದು ಕುಳಿತು ಕೊಳ್ಳುವಷ್ಟರಲ್ಲಿ, ಅವರಿಗೆ ತಿಂಡಿ ಮತ್ತು ಚಾ (ಟೀ) ಕಳುಹಿಸಿಕೊಡುತ್ತಾರೆ. ನಂತರ ಬಂದಿರುವ ಹೆಣ್ಣುಮಕ್ಕಳು ರೇಷ್ಮೆ ಸೀರೆಗಳನ್ನು ಉಟ್ಟುಕೊಂಡು ಸಿದ್ಧಮಾಡಿಕೊಂಡು ಕುಳಿತಿರುತ್ತಾರೆ. ಬೀಗರು ಹುಡುಗನನ್ನು ಹುಡುಗಿ ಮನೆಗೆ ಕರೆದು ಕೊಂಡು ಹೋಗಲು ಒಳ್ಳೆಯ ವಿಜೃಂಭಣೆಯಿಂದ ಬ್ಯಾಂಡು, ಸೋನಾಯಿ, ಭಜಂತ್ರಿಗಳ ಜೊತೆಗೆ ಮೆರವಣಿಗೆ ಮಾಡಿಕೊಂಡು ಹುಡಿಗಿಯ ಮನೆಗೆ ಕರೆದುಕೊಂಡು ಹೋಗುವರು. ಹುಡುಗಿಯ ಮನೆಯ ಹೊರಗೆ ಹುಡುಗನಿಗೆ ಹುಡುಗಿಯ ಅಣ್ಣ ಇಲ್ಲವೆ ತಮ್ಮ ಅಥವಾ ಚಿಕ್ಕಪ್ಪಂದಿರು ಇವರಲ್ಲಿ ಒಬ್ಬರು ಹುಡುಗನನ್ನು ಪೂಜೆ ಮಾಡಿ ಅವನಿಗೆ '' ಹೊಕ್ಕಮನಿಗ ಹೊನ್ನ ಉಂಗುರ'' ಎನ್ನುವ ಸಂಪ್ರದಾಯದ ಹಾಗೆ ಒಂದು ಉಂಗುರವನ್ನು ಬೆರಳಿಗೆ ಇಟ್ಟು ಒಳಗಡೆಗೆ ಕರೆದುಕೊಂಡು ಬರುವರು. ಎಲ್ಲಾ ದೈವದವರು (ಗೌಡರು, ಶ್ಯಾನುಭೋಗರು, ಊರಿನ ಹಿರಿಯ ವ್ಯಕ್ತಿಗಳು) ಸೇರಿ ಸಂಪ್ರದಾಯದ ಪ್ರಕಾರ ಹುಡುಗಿಗೆ ತಂದಿರುವ ಸ್ವಾಮಾನುಗಳು ಮತ್ತು ಹುಡುಗನಿಗೆ ತಂದಿರುವ ಸಾಮಾನುಗಳನ್ನು ದೈವದವರ ಎದುರಿಗೆ ಇಟ್ಟು ಪೂಜಿಸುತ್ತಾರೆ. ಹೆಣ್ಣು ಗಂಡುಗಳಿಗೆ ಗಂಡಿನವರು ಮತ್ತು ಹೆಣ್ಣಿನವರು ತಂದಿರುವ ಹೊಸ ಬಟ್ಟೆಗಳನ್ನು ಉಡಲು ಕೊಡುವರು. ಆಮೇಲೆ ಜಂಗಮರು ''ಇಳೇವು'' ಒಡೆಯುತ್ತಾರೆ. ಈ ಇಳೇವನ್ನು ಬೀಗರು ಬೀಗರು ವಿನಿಮಯ ಮಾಡಿಕೊಂಡು ಇಬ್ಬರು ಬಾಯಿಯಲ್ಲಿ ಸಕ್ಕರೆಯನ್ನು ಹಾಕುತ್ತಾರೆ. ನಂತರ ಅಲ್ಲಿಗೆ ಬಂದಿರುವ ಎಲ್ಲಾ ಬಳಗಕ್ಕು ಅಡಿಕೆ ಎಲೆ ಸಕ್ಕರೆಯನ್ನು ಕೊಡುವ ಪದ್ಧತಿಯನ್ನು ಸಂಪ್ರದಾಯದಲ್ಲಿ ನೋಡಬಹುದು. ಬಂದಿರುವ ಎಲ್ಲಾ ಜನರಿಗೂ ಊಟ ಮಾಡಿಸಿ ಕಳಿಸುತ್ತಾರೆ. ಹೋದ ಬೀಗರೆಲ್ಲರು ಆ ದಿನವೇ ಮರಳಿ ಬರುತ್ತಾರೆ. ಹುಡುಗ ಮಾತ್ರ ಆದಿನ ಉಳಿದು ಕೊಂಡು ಮರುದಿನ ಸಂಜೆ ಮತ್ತೆ ತಮ್ಮ ಊರಿಗೆ ಬರುವಂತಹ ಪದ್ಧತಿಯನ್ನು ನೋಡ ಬಹುದು.

**ವಳ್ಳಕ್ಕಿ ಪಾಡುವುದು :** ಮದುವೆ ಹೂಡಿದ್ದೇವೆ ಎಂಬುವುದಕ್ಕೆ ವಳ್ಳಕ್ಕಿ ಪಾಡುವುದು ಎಂದು ಕರೆಯುತ್ತಾರೆ. ಮದುವೆ ಇನ್ನು ೩ ಅಥವಾ ೫ ದಿನ ಇದೆ ಎಂದಾಗ ಆ ಊರಿನಲ್ಲಿ ಇರುವ ಅಥವಾ ಆ ಓಣಿಯಲ್ಲಿರುವ ಮುತ್ತೈದೆಯರು ಸೇರಿ ವಳ್ಳಕಿಯನ್ನು ಪಾಡುತ್ತಾರೆ. ವಳ್ಳಕ್ಕಿ ಪಾಡುವುದೆಂದರೆ, ಬೀಸುವ ಕಲ್ಲಿನ ಪೂಜೆ, ವಳ್ಳು, ಹಾಗೂ ಒನಕೆಯ ಪೂಜೆ, ಶಾವಿಗೆ ಮಣಿ ಪೂಜೆ, ಮಾಡಿದ ನಂತರ ಸುಮಾರು ೨ ಕೆ.ಜಿ ಯಷ್ಟು

ಭತ್ತವನ್ನು ಈ ವಳ್ಳಿನಲ್ಲಿ ಹಾಕಿ ಐದು ಜನ ಮುತ್ತೈದೆಯರು ಒನಕೆಯಿಂದ ಕುಟ್ಟುತ್ತಾರೆ. ಈ ಪದ್ಧತಿಗೆ ವಳ್ಳಕ್ಕಿ ಪಾಡುವುದು ಎಂದು ಕರೆಯುತ್ತಾರೆ. ಐಲುಗಿತ್ತಿಯರು ಮದುವೆಯ ಕಾರ್ಯವನ್ನು ನಡೆಸುವರು. "ವಳ್ಳಕ್ಕಿ" ಪಾಡುವ ಸಂದರ್ಭದಲ್ಲಿ ಮನೆಗೊಬ್ಬರಂತೆ ಯಜಮಾನರು ಸೇರಿ ವಳ್ಳಕ್ಕಿ ಪಾಡಿದ ಅಕ್ಕಿಯನ್ನೇ ಅರಿಶಿನ, ಕುಂಕುಮ, ಹಚ್ಚೆ ತಾಳಿಯ ಸಂದರ್ಭದಲ್ಲಿ ಅಕ್ಷತೆಗೆ ಕೊಡುತ್ತಾರೆ. ವಳ್ಳಕ್ಕಿ ಪಾಡುವ ಸಂದರ್ಭದಲ್ಲಿ ಅಂದರೆ ಭತ್ತಕುಟ್ಟುವ ಸಂದರ್ಭದಲ್ಲಿ ಐಲುಗಿತ್ತಿಯರು (ಮುತ್ತೈದಿಯರು) ಸೋಬಾನ ಪದಗಳನ್ನು ಹೇಳುವ ಪದ್ಧತಿ ಇದೆ.

ಉದಾ : - ಸುವೀ ಸುವೀ ಸುವ್ವಾಲೆ
ಸುವೀ ಸುವೀ ಸುವ್ವಾಲೆ
ವಳ್ಳಕ್ಕಿ ಪಾಡಾಕ ನಮನ್ಯಾರೋ ಕರೆಸ್ಯಾರೆ,
ಮ್ಯಾಲೆ ಮಾಳಿಗೆ ಅಯ್ಯಮ್ಮ
ಸುವೀ ಸುವೀ ಸುವ್ವಾಲೆ
ಸುವೀ ಸುವಿ ಸುವ್ವಾಲೆ

ಸುಣ್ಣ ಮಾರುವ ಜಾಣ ನಮ್ಮ ಓಣಿಗೆ ಬಾರೋ
ಜಾಣೆ ಮಮ್ಮಕ್ಕಳ ಮದುವಿಗೀ
ಸುವೀ ಸುವೀ ಸುವ್ವಾಲೆ
ಸುವೀ ಸುವಿ ಸುವ್ವಾಲೆ.

ಅಂಗೈಲಿ ಮಣ್ಣ ತೀಡ್ಯಾಳೆ ಆಕೆ
ನಂದಿಗೀಶ್ವರನಾ ಮಾಡ್ಯಾಳೆ
ಮುತ್ತೈದೆತನವಾ ಪಡೆದಂತಾ ಚೆನ್ನಮ್ಮ ಬಾರೇ
ಸುವೀ ಸುವೀ ಸುವ್ವಾಲೆ
ಸುವೀ ಸುವಿ ಸುವ್ವಾಲೆ

ಹೆಬ್ಬೆಟ್ಟಿಲಿ ಮಣ್ಣು ತೀಡ್ಯಾಳೆ ಆಕೆ
ಸೃಷ್ಟಿಗೀಶನಾ ಸೆಟ್ಯಾರ ಪ್ರಾಣ ಪಡೆದಂತೆ ಚನ್ನಮ್ಮ ಬಾರೇ
ಸುವೀ ಸುವೀ ಸುವ್ವಾಲೆ
ಸುವೀ ಸುವಿ ಸುವ್ವಾಲೆ.

ಎನ್ನುವ ಹಾಡನ್ನು ವಯಸ್ಸಾದಂತಹ ಮಹಿಳೆಯರು ರಾಗದಿಂದ ಹಾಡುವರು.

**ವಧುವರರಿಗೆ ಬಟ್ಟೆ ಕೊಳ್ಳುವ ಪದ್ಧತಿ :** ಮದುವೆಗೆ ಬಟ್ಟೆಯನ್ನು ತೆಗೆದು ಕೊಳ್ಳುವಾಗ ಗಂಡಿನ ಮನೆಯವರು ಮತ್ತು ಹೆಣ್ಣಿನ ಮನೆಯವರು ಒಂದಾಗೆ ಹೋಗುತ್ತಾರೆ. ಬೀಗರಿಬ್ಬರು ಸೇರಿ ಇಂತಹ ದಿನದಂದು ಜವಳಿಗೆ ಹೋಗೋಣವೆಂದು ಮಾತನಾಡಿಕೊಂಡು ಹೋಗುತ್ತಾರೆ. ಗಂಡಿನ ಜೊತೆಗೆ ಅವನ ಗಳೆಯರು ಇಲ್ಲವೆ ಸೋದರ ಮಾವನವರು ಇಲ್ಲವೇ ಮನೆಯ ಹಿರಿಯರಾದ ದಂಪತಿಗಳು ಹೋಗುವರು. ಹುಡುಗಿಯ ಜೊತೆಗೆ ಹುಡುಗಿಯ ತಾಯಿ ಇಲ್ಲವೆ ಚಿಕ್ಕಮ್ಮಂದಿರು ಮಾವಂದಿರು ಮತ್ತು ಅತ್ತೆಯರು ಹೋಗುವ ಪದ್ಧತಿ ಇದೆ. ಹೀಗೆ ಹೋಗಿ ಮದುಮಕ್ಕಳಿಗೆ ಬಟ್ಟೆಯನ್ನು ಆರಿಸಿ ಆದಮೇಲೆ ಮದುವೆಗೆ ಬಂದಿರುವ ಬಂಧು - ಮಿತ್ರರಿಗೆ ಕೊಡಲು ಬಟ್ಟೆಗಳನ್ನು ಆರಿಸುತ್ತಾರೆ. ಹುಡುಗಿಗೆ ತಾಳಿಯ ಸೀರೆಯನ್ನು ವಿಶೇಷವಾಗಿ ಸೋದರ ಮಾವನವರೇ ಕೊಡುವ ಪದ್ಧತಿ ಇರುವುದರಿಂದ ಈ ಸೀರೆಯನ್ನು ವಿಶೇಷವಾಗಿ ಆರಿಸುತ್ತಾರೆ. ಹೀಗೆಲ್ಲಾ ತಂದಿರುವಂತಹ ಬಟ್ಟೆಗಳನ್ನು ಜವಳಿ ಎಂದು ಕರೆಯುವರು. ಮದುವೆ ಇನ್ನು ೫ ದಿನ ಇದೆ ಎಂದಾಗ ಹಿರಿಯರ ಪೂಜೆ ಎಂದು ಮಾಡಿ ಅವುಗಳನ್ನು ಹಿರಿಯರಾದಂತಹ ಅಜ್ಜಿ ಅಮ್ಮಂದಿರಿಗೆ ಏರಿಸಿದ ಮೇಲೆ ಮದುಮಗಳಿಗೆ ಉಡಲು ಕೊಡುವರು.

**ವರೋಪಚಾರದ ಪದ್ಧತಿ ಅಥವಾ ಮಾತುಕತೆ :** ವೀರಶೈವರ ಸಂಪ್ರದಾಯದಲ್ಲಿ ಮೊದಲು ಹೆಣ್ಣನ್ನು ನೋಡಲು ಹೋಗುವ ಪದ್ಧತಿ ಇದೆ. ಹೆಣ್ಣು ಒಪ್ಪಿಗೆಯಾಗಬೇಕು. ವರನ ತಂದೆ, ತಾಯಿ, ಬಂದು, ಬಳಗದವರು ಸಂಬಂಧಿಕರು ಹೆಣ್ಣನ್ನು ಒಪ್ಪಿಕೊಂಡ ಮೇಲೆ ಹೆಣ್ಣಿನ ಕಡೆಯವರು ವರನ ಮನೆ ನೋಡಲು ಬರುವ ಸಂಪ್ರದಾಯವಿದೆ. ಇದಕ್ಕೆ 'ಮನೆ ನೋಡುವ ಪದ್ಧತಿ' ಎಂತಲೂ ಕರೆಯುತ್ತಾರೆ. ವರನ ಮನೆ ನೋಡಲು ಬರುವವರಿಗೆ ಸಿಹಿ ತಿಂಡಿಯನ್ನು ಮಾಡಿಸಲಾಗುತ್ತದೆ. ವರನ ಮನೆ ಒಪ್ಪಿಗೆಯಾದಲ್ಲಿ ವರನ ಮನೆಯಲ್ಲಿಯೇ ಮದುವೆಯ ಮಾತುಕತೆ ನಡೆಯುತ್ತದೆ. ವರನಿಗೆ ವರೋಪಚಾರ, ಬಟ್ಟೆ ಇತ್ಯಾದಿ ಹಾಕಬೇಕೆಂದು, ಹೆಣ್ಣಿಗೆ ನಾವು ಆಭರಣಗಳನ್ನು ಹಾಕುತ್ತೇವೆ ಇತ್ಯಾದಿಯಾಗಿ ಅವರವರ ಅಂತಸ್ತಿಗೆ ತಕ್ಕಂತೆ ಮಾತುಕತೆ ನಡೆಯುತ್ತದೆ.

**ತಾಳಿ ಖರೀದಿಸುವ ಪದ್ಧತಿ :** ಒಂದು ತಾಳಿಯನ್ನು ವರನ ಕಡೆಯವರು, ಇನ್ನೊಂದು ತಾಳಿಯನ್ನು ಹೆಣ್ಣಿನ ಕಡೆಯವರು ಮಾಡಿಸುವ ಪದ್ಧತಿ ಇದೆ. ಒಂದು ಒಪ್ಪಂದದ ತೂಕದ ಪ್ರಕಾರ ಎರಡು ತಾಳಿಗಳು ಸಿದ್ಧವಾಗುತ್ತವೆ. ಒಂದು ವೇಳೆ ವರನ ಕಡೆಯವರು ಎರಡು ತಾಳಿಗಳನ್ನು ಮಾಡಿಸಿದ್ದರೆ, ಹೆಣ್ಣಿನ ಕಡೆಯವರು ಒಂದು ತಾಳಿಯ ದುಡ್ಡನ್ನು ಕೊಡಬೇಕಾಗುತ್ತದೆ.

**ಲಗ್ನಪತ್ರಿಕೆ ಕಟ್ಟಿಸುವ ಪದ್ಧತಿ :** ಲಗ್ನಪತ್ರಿಕೆಯನ್ನು ಮದುವೆ ಹಮ್ಮಿಕೊಂಡ ೫ ದಿನದಲ್ಲಿ ಅಥವಾ ೯ ದಿನದಲ್ಲಿ ಕಟ್ಟಿಸುವ ಪದ್ಧತಿ ಇದೆ. ಲಗ್ನಪತ್ರಿಕೆಯನ್ನು ತಮ್ಮ ತಮ್ಮ ಮನೆಯ ಅಥವಾ ಊರಿನಲ್ಲಿರುವ ದೊಡ್ಡ ದೇವಸ್ಥಾನದ ಮುಂದೆ ಕಟ್ಟಿಸುವರು. ಲಗ್ನಪತ್ರಿಕೆಯನ್ನು ಕಟ್ಟಿಸುವಾಗ ಜಂಗಮರು, ಊರಿನ ದೈವದವರು ಮತ್ತು ಬಂಧು-ಬಳಗದವರು ಬರುತ್ತಾರೆ. ಈ ಲಗ್ನ ಪತ್ರಿಕೆಯನ್ನು ಕೆಲವು ಸಂದರ್ಭದಲ್ಲಿ ಸಂಪ್ರದಾಯದ ಪ್ರಕಾರ ಗಂಡಿನ ಮನೆಯವರೇ ಕಟ್ಟಿಸುವರು. ಶಾಸ್ತ್ರೋಕ್ತವಾಗಿ ಲಗ್ನಪತ್ರಿಕೆಯನ್ನು ಕಟ್ಟಿಸುವ ಸಲುವಾಗಿ ಊರಿನ ಹಿರಿಯರನ್ನು ಮತ್ತು ಪುರೋಹಿತರನ್ನು ಕರೆತಂದು ಅವರಿಂದ

ಲಗ್ನಪತ್ರಿಕೆಯನ್ನು ಮನೆಯ ಒಂದು ಯೋಗ್ಯವಾದ ಸ್ಥಳದಲ್ಲಿ ಬರೆಸಲಾಗುತ್ತದೆ. ಕಂಬಳಿಯನ್ನು ಹಾಸಿ, ಮೇಲೆ ಲಗ್ನ ಪತ್ರಿಕೆಯನ್ನು ಇಟ್ಟು ಪೂಜೆ ಮಾಡಿ ಮುತ್ತೈದೆಯರಿಂದ ಕಳಸ ಬೆಳಗಲಾಗುತ್ತದೆ. ಪುರೋಹಿತರಿಗೆ ಈ ಸಮಯದಲ್ಲಿ ಬೇಳೆ, ಬೆಲ್ಲ, ಹೋಳಿಗೆ ಹಿಟ್ಟು, ಎಣ್ಣೆ, ಕೊಬ್ಬರಿ, ಬೆಟ್ಟಡಿಕೆ ಇವುಗಳನ್ನು ಕೊಡುವರು. ಪುರೋಹಿತನು ಲಗ್ನಪತ್ರಿಕೆಯಲ್ಲಿ, ವರ ಮತ್ತು ಕನ್ಯೆಯ ಹೆಸರು, ಅವರ ತಂದೆ-ತಾಯಿಗಳ ವಿವರ ವಿದ್ಯಾಭ್ಯಾಸ, ಮದುವೆಯ ಮುಹೂರ್ತ, ಕಲ್ಯಾಣ ಮಂಟಪ, ತಾಳಿ ದಿನಾಂಕ ಇತ್ಯಾದಿಗಳನ್ನು ಬರೆಯುವನು. ನಂತರ ಎಲ್ಲರೂ ಅಕ್ಷತೆಯನ್ನು ಹಾಕುವರು.

**ಐಲುಗಿತ್ತಿಯರು :** ಐಲುಗಿತ್ತಿಯರು ಅಥವಾ ಸೋಬಾನಗಿತ್ತಿಯರು ಎಂದರೆ; ಮದುವೆ ಕಾರ್ಯವನ್ನು ಮುಗಿಸುವವರಿಗೆ ಅಥವಾ ಶಾಸ್ತ್ರೋಕ್ತವಾಗಿ ನಡೆಸಿಕೊಡುವವರಿಗೆ ಐಲುಗಿತ್ತಿಯರು ಎಂದು ಕರೆಯುವರು. ಒಟ್ಟು ಐದು ಜನ ಕೂಡಿದರೆ ಮಾತ್ರ ಐಲುಗಿತ್ತಿಯರಾಗುತ್ತಾರೆ. ಮದುವೆ ಸಂದರ್ಭಧಲ್ಲಿ ಇವರ ಕಾರ್ಯವೆಂದರೆ; ವಳ್ಳಕ್ಕಿ ಪಾಡುವುದು. ಲಗ್ನಪತ್ರಿಕೆ ಕಟ್ಟಿಸುವುದು, ಸೋಬಾನೆ ಪದಗಳನ್ನು ಹಾಡುವುದು, ಮದುವೆ ದಿನ ಸುರುಗಿ ಸುತ್ತುವುದು, ಕಳಸ ಹಿಡಿಯುವುದು, ಮದುಮಕ್ಕಳಿಗೆ ಅರಿಶಿನ ಹಚ್ಚುವುದು, ಗಂಗೆ ಪೂಜೆಗೆ ಕರೆದೊಯ್ಯುವುದು, ತಾಳಿ ಸಂದರ್ಭದಲ್ಲಿ ಪುರೋಹಿತನಿಗೆ ಸಹಾಯ ಮಾಡುವುದು, ಮದುವೆಗೆ ಸಂಬಂಧಿಸಿದಂತೆ ಹೂವು, ದಂಡೆ ಇತ್ಯಾದಿ ತರುವುದು. ಮದುವೆಯ ಸಾಮಾನ್ಯ ವ್ಯವಸ್ಥೆ ಮಾಡಿಕೊಳ್ಳುವುದು, ಮದು ಮಕ್ಕಳನ್ನು ಮನೆಗೆ ತುಂಬಿಸುವ ವ್ಯವಸ್ಥೆ ಮಾಡುವುದು, ಮಾವನ ಮನೆಗೆ ಕರೆದೊಯ್ಯುವುದು, ದೇವರ ಕಳಸವನ್ನು ನೋಡಲು ಕರೆದೊಯ್ಯುವುದು, ಐರಾಣಿ ತರುವುದು, ತಾಳಿ ಕಟ್ಟುವ ಸಮಯದಲ್ಲಿ ಸೋಬಾನೆ ಪದಗಳನ್ನು ಹೇಳುವುದು ಐಲುಗಿತ್ತಿಯರ ಕೆಲಸವಾಗಿರುತ್ತದೆ. ಮದು ಮಕ್ಕಳ ತಂದೆ, ತಾಯಿಗಳಿಗಿಂತ ಐಲುಗಿತ್ತಿಯರು ಈ ಸಂದರ್ಭದಲ್ಲಿ ಹೆಚ್ಚು ಜವಾಬ್ದಾರಿಯಿಂದ ಇರುತ್ತಾರೆ. ಒಟ್ಟಾರೆಯಾಗಿ ಮದುಮಕ್ಕಳ ಜವಾಬ್ದಾರಿಯೇ ಐಲುಗಿತ್ತಿಯರಿಗೆ ಹೆಚ್ಚಿನ ಕೆಲಸವಾಗಿರುತ್ತದೆ. ಮದುವೆಯ ಸಂದರ್ಭದಲ್ಲಿ ಎರಡು ದಿನಗಳವರೆಗೆ ಸಂಪೂರ್ಣವಾಗಿ ಇವರು ತಮಗೆ ಬೇಕಾದ ಸಾಮಾನುಗಳ ವ್ಯವಸ್ಥೆ ಮಾಡಿಕೊಂಡು ಮದುವೆ ಕಾರ್ಯ ಸುಸೂತ್ರವಾಗಿ ಜರುಗುವಂತೆ ನೋಡಿಕೊಳ್ಳುತ್ತಾರೆ. ಮದುವೆ ಮುಗಿಯುವ ತನಕ ಐಲುಗಿತ್ತಿಯರು ಎಲ್ಲಿಗೂ ಹೋಗುವಂತಿಲ್ಲ. ಮದುವೆ ನಡೆಸಿಕೊಡಬೇಕೆಂದು ವರನ ಕಡೆಯವರು ಐಲುಗಿತ್ತಿಯರಿಗೆ ಕರೆಯುವುದು ವಿಶಿಷ್ಟವಾಗಿರುತ್ತದೆ.

**ಹಾಲಗಂಬ ಹಾಗೂ ಹಂದರ ಹಾಕುವಿಕೆ :**ಮದುವೆಗಿಂತ ಮೂರುದಿನ ಮುಂಚೆ ಮದು ಮಗನನ್ನು ಮಾಡುವ ಸಂಪ್ರದಾಯವಿದೆ. ಟೆಂಗಿನಗರಿ, ಹಂದ್ರಗಾಯಿ, ಹಾಲಗಂಬವನ್ನು ತಂದು ದೇವರ ಗುಡಿ ಮುಂದೆ ಐದು ಜನ ಬೀಗರಾಗುವವರು ಇಟ್ಟುಕೊಂಡು ಕುಳಿತಿರುತ್ತಾರೆ. ಅವರಿಗೆ ಕಂಬಳಿ ಹಾಸಿ, ಕೂಡಿಸಿ, ಉಡಿತಂಬುವ ಪದ್ಧತಿ ಇದೆ. ಅವರು ಮುತ್ತೈದೆಯರಾಗಿರಬೇಕು. ಐಲುಗಿತ್ತಿಯರು, ಅಡಿಕೆ, ಎಲೆ, ಉತ್ತುತ್ತಿ, ಅಕ್ಕಿ, ಕೊಬ್ಬರಿ, ಬಟ್ಟಲು ಇತ್ಯಾದಿಗಳನ್ನು ಐದು ಜನ ಗಂಡಸರಿಗೆ ಉಡಿ ತುಂಬುತ್ತಾರೆ. ಅವರ ಹಣೆಗೆ ವಿಭೂತಿ ಹಚ್ಚಿ, ಕಂಕಣ ಕಟ್ಟಿ, ಕಳಸ ಬೆಳಗಲಾಗುತ್ತದೆ. ಹಾಲುಗಂಭವನ್ನು ಹೊತ್ತುಕೊಂಡ ಬರುವ ಇವರು ಬರಿ ಉಡಿಯಲ್ಲಿ ಬರುವುದಿಲ್ಲ. ಹಾಗಾಗಿ ಅವರಿಗೆ ಉಡಿ ತುಂಬುವ ಪದ್ಧತಿ ಇದೆ.

ಹಾಲುಗಂಭವನ್ನು ತಂದು ಅವರು ಮದುವೆ ಮನೆಯ ಮುಂದೆ ಕಟ್ಟೆಯ ಹತ್ತಿರ ಇಲ್ಲವೆ ಬಾಗಿಲದ ಗತ್ತಿರ ಗುದ್ದು (ಮಣ್ಣನ್ನು ಬಗೆದು) ತೆಗೆದು ಹೂಳುವರು. ನಂತರ ಟೆಂಗಿನ ಗರಿಗಳಿಂದ ಮದುವೆ ಮನೆಗೆ ಚಪ್ಪರವನ್ನು ಹಾಕುತ್ತಾರೆ. ಅಷ್ಟೊತ್ತಿಗೆ ಮದುವೆಯ ಮನೆಯ ಸುತ್ತಲೂ ವರನ ಅಕ್ಕ ಹಾಗೂ ಮಾವ ಅವರ ಮನೆಯಲ್ಲಿ ಸಂಪ್ರದಾಯವಿದ್ದರೆ ಕೆಲವರು ಕೆಮ್ಮಣ್ಣಿನಿಂದ ಅವರ ಅಂಗೈನಿಂದ ಗೋಡೆಗೆ ಹತ್ತಿಸುತ್ತಾರೆ. ಅದಕ್ಕೆ ಚಟ್ಟುಬಡಿಸುವುದು ಎನ್ನುವರು. ಈ ಸಂಪ್ರದಾಯವು ಕೆಲವು ಮನೆಗೆ ಅಥವಾ ಕುಟುಂಬಕ್ಕೆ ಸೀಮಿತವಾಗಿದೆ. ಕಡ್ಡಾಯವಾಗಿ ಎಲ್ಲಾರೂ ಮಾಡಬೇಕು ಎನ್ನುವ ನಿಯಮವೇನು ಇಲ್ಲ. ನಂತರ ಹಾಲಗಂಭ ಹುಗಿದ ಮೇಲೆ ಅದೇ ರಾತ್ರಿ ಮದುಮಗನನ್ನು ಮಾಡುತ್ತಾರೆ.

**ಐರಾಣಿ ಶಾಸ್ತ್ರ :** ಮದುಮಕ್ಕಳನ್ನು ಮಾಡುವ ಮೊದಲೇ ಐರಾಣಿ ಗಡಿಗೆಯನ್ನು ಅಥವಾ ಐರಾಣಿ ದೀಪವನ್ನು ದೇವರು ಮನೆಯಲ್ಲಿ ಹಚ್ಚುತ್ತಾರೆ. ಎರಡೆರಡು ಗಡಿಗೆಯಂತೆ, ನಾಲ್ಕು ಗಡಿಗೆಗಳನ್ನು ಜೋಳದ ಮೇಲೆ ಇಟ್ಟು ಗಡಿಗೆಯ ಒಳಗೆ ಐದು ದಿನಸಿನ ಧಾನ್ಯಗಳನ್ನು ಹಾಕಿ ಒಂದು ರೂಪಾಯಿ ನಾಣ್ಯವನ್ನು ಹಾಕಿ ಗಡಿಗೆ ಮೇಲೆ ಮುಚ್ಚಳವನ್ನು ಇಟ್ಟು ದೀಪ ಹಚ್ಚುತ್ತಾರೆ. ಇದಕ್ಕೆ ' ಐರಾಣಿ ದೀಪ' ಅಥವಾ ಐರಾಣಿ ಶಾಸ್ತ್ರವೆಂದು ಕರೆಯುತ್ತಾರೆ. ಹಚ್ಚಿರುವ ದೀಪ ಆರಬಾರದು. ಐರಾಣಿ ದೀಪವು ವರ ತಾಳಿ ಕಟ್ಟುವತನಕ ಉರಿಯಬೇಕು ಆರಬಾರದು. ಅದಕ್ಕಾಗಿ ಮನೆಯಲ್ಲಿ ಹಿರಿಯರಾದಂತವರು ಅದನ್ನು ನೋಡಿಕೊಳ್ಳುತ್ತಾ ಇರುತ್ತಾರೆ. ಈ ಸಂದರ್ಭದಲ್ಲಿ ವಯಸ್ಸಾದ ಅನುಭವಿಗಳ ಜವಬ್ದಾರಿ ಹೆಚ್ಚಾಗಿರುತ್ತಾದೆ. ಅದೇ ರಾತ್ರಿ ಮದುವೆಯಾಗು ವಂತಹ ಹುಡುಗ ಅಥವಾ ಹುಡುಗಿಯನ್ನು ಸೋದರತ್ತೆ ಮಾವ ಅಥವಾ ಆ ಮನೆಗೆ ಬೀಗರು ಆಗುವಂತಹ ಮನೆಗಳಿಗೆ ಕರೆದುಕೊಂಡು ಹೋಗಿ ಅಲ್ಲಿ ಮೊದಲು ಕರಿ ಕಂಬಳಿಯ ಮೇಲೆ ಸ್ಯಾಸಕ್ಕಿಯನ್ನು ಹಾಕಿ, ಕೂರಿಸಿ ಬಳಿಕ ಎಣ್ಣೆಯಿಂದ ಮಿಶ್ರಣ ಮಾಡಿದ ಅರಿಶಿಣವನ್ನು ಐದು ಮಂದಿ ಮುತ್ತೈದೆಯರು ವರನಿಗೆ ಹಚ್ಚಿ, ಕುಂಕುಮವನ್ನು ಇಟ್ಟು ಆರತಿಯನ್ನು ಬೆಳಗುತ್ತಾರೆ. ನಂತರ ಅವರನ್ನು ಸ್ನಾನಮಾಡಿಸಿ ಮತ್ತೊಮ್ಮೆ ಆರತಿ ಬೆಳಗಿ ಶ್ಯಾವಿಗೆ ಊಟ ಮಾಡಿಸುತ್ತಾರೆ. ನಂತರ ಹುಡುಗ ಆ ದಿನದಂದು ಮದುಮಗ ಎಂದು ಕರೆಯಿಸಿ ಕೊಳ್ಳುವನು.

ಮರುದಿನ ಬೆಳಿಗ್ಗೆ ಮನೆಯಲ್ಲಿ ಮನೆಯ ಮದುಮಗ ಎಂದು ಅರಿಶಿಣ ಹಚ್ಚಿ ಸ್ನಾನ ಮಾಡಿಸಿ ಹೊಸ ಬಟ್ಟೆಯನ್ನು ಕೊಡುತ್ತಾರೆ. ಅವಾಗಿನಿಂದ ಅವರು ಕರೆಯಲು ಬಂದಂತಹ ಬಂಧು ಮಿತ್ರರ ಮನೆಗೆ ಹೋಗಿ ಕೋರುಟವನ್ನು ಊಟಮಾಡಿ ಬರುತ್ತಾರೆ. ಸಂಜೆ ಆರು ಗಂಟೆ ಮೇಲೆ ಬೀಗರನ್ನು ಎದುರು ಗೊಳ್ಳುವ ಕಾರ್ಯಕ್ರಮವಿರುತ್ತದೆ. ಇದರಲ್ಲಿ ಮೊದಲೇ ನಿಗದಿ ಪಡಿಸಿದ ಸ್ಥಳಕ್ಕೆ ಬೀಗರನ್ನು ಕುಳ್ಳಿರಿಸ ಬೇಕು ಇತ್ತ ಕಡೆ ಲಗ್ನದ ಮನೆಯವರನ್ನು ಗುರುಗಳು ಬಂದು ಮಿತ್ರರೊಂದಿಗೆ ಮಂಗಲ ವಾದ್ಯ ದೊಡನೆ ಹೋಗಿ ಬೀಗರೆದುರು ಕುಳಿತು ಕೊಳ್ಳುವದು.

**ಬೀಗರನ್ನು ಎದುರು ಗೊಂಬುವಿಕೆ :** ಹೆಣ್ಣಿನ ಹಿಂದೆ ಬಂದಿರುವ ಬೀಗರನ್ನು ವರನ ಮನೆಗೆ ಹತ್ತಿರವಿರುವ ದೇವಸ್ಥಾನ ಅಥವಾ ಆ ಊರಿನ ದೊಡ್ಡ ದೇವಸ್ಥಾನದಲ್ಲಿ ಇಳಿದುಕೊಳ್ಳಲು ವ್ಯವಸ್ಥೆ ಮಾಡಲಾಗುತ್ತದೆ.

ಇವರನ್ನು ಎದುರು ಗೊಂಬಲು ಅಂದರೆ ಕರೆತರಲು ಗಂಡಿನ ಕಡೆಯವರು ವಾದ್ಯಗಳ ಸಮೇತ ಹೋಗುತ್ತಾರೆ. ಒಂದು ಬಿದಿರು ಪುಟ್ಟಿಗೆ ಚಕ್ಕುಲಿ, ಸಂಡಿಗೆ, ಹಪ್ಪಳ, ವಡೆ, ಮೆಣಸಿನಕಾಯಿ, ಉಳ್ಳಗಡ್ಡೆ, ಕರಿದ ಸಾಮಾನುಗಳನ್ನು ಇತ್ಯಾದಿಗಳನ್ನು ಕಟ್ಟಲಾಗುತ್ತಿದೆ. ಇದನ್ನೆಲ್ಲಾ ಸೀರೆಯನ್ನು ಉಟ್ಟು ಹುಡುಗಿಯರ ವೇಶವನ್ನು ಹಾಕಿರುವಂತ ಗಂಡಸರು ಹಿಡಿದುಕೊಂಡು ಬಂದಿರುತ್ತಾರೆ. ಆನಂತರ ಆರತಿಯನ್ನು ಮಾಡಿ ನೀರು ತುಂಬಿದ ತಂಬಿಗೆಯನ್ನು ಭಸ್ಮ, ಗಂಧ, ಕುಂಕುಮ, ಪತ್ರಿ-ಪಷ್ಪ, ಎಲೆ, ಅಡಿಕೆ, ಉದಿನಕಡ್ಡಿ, ಕರ್ಪೂರ, ಟೆಂಗಿನಕಾಯಿ ೨, ಮತ್ತು ದಕ್ಷಿಣೆ, ಸುಗಂಧ ತೈಲ (ಅತ್ತರದಾನಿ, ಗುಲಾಬಿದಾನಿ) ಮೊದಲಾಗಿ ಎರಡು ತಟ್ಟೆಯಲ್ಲಿಟ್ಟು ಕೊಂಡೇ ಹೋಗಬೇಕು. ಬೀಗರು ಎದುರು ಬದುರು ಕುಳಿತು ಕೊಂಡ ಮೇಲೆ ಇವರಿಬ್ಬರ ಮದ್ಯದಲ್ಲಿ ಜಂಗಮರು ಕುಳಿತಿರುತ್ತಾರೆ. ಅವರಿಗೆ ಮೊದಲು ಗದ್ದಿಗೆ ಎಂದು ಒಂದು ಬಟ್ಟೆಯ ಚಾಪೆಯನ್ನು ತೆಗೆದುಕೊಂಡು ಹೋಗಬೇಕು. ಇಲ್ಲವೆ ಒಂದು ಮಣೆಯನ್ನು ತೆಗೆದು ಕೊಂಡು ಹೋದರು ಬರುತ್ತದೆ. ಇವುಗಳ ಜೊತೆಗೆ ಪೂಜೆಯ ಸಾಮಾನುಗಳನ್ನು ತೆಗೆದುಕೊಂಡು ಬೀಗರ ಕಡೆಗಿರುವ ಗುರುಗಳಲ್ಲಿಗೆ ಹೋಗಿ ಪಾದ ಪೂಜೆಯನ್ನು ಮಾಡಿ ಎಲೆ, ಅಡಿಕೆ, ಕಾಯಿ ಮತ್ತು ದಕ್ಷಿಣೆ ಸಹಿತ ಸಮರ್ಪಿಸಿ ನಮಸ್ಕರಿಸುತ್ತಾರೆ. ಈ ಎಲ್ಲಾ ಕಾರ್ಯ ಮುಗಿಯುವ ತನಕ ಬೇರೆಯವರು ಯಾರು ನೋಡಬಾರದು ಎಂದು ಸುತ್ತಲು ಒಂದು ಚದಾರವನ್ನು ಮರೆಮಾಡಿರುತ್ತಾರೆ. ಆ ಮದುವೆಯ ಸಾಮಾನುಗಳನ್ನು ಅಲ್ಲಿಯೇ ಬಿಟ್ಟು ಬರಬೇಕು. ಆದರಂತೆ ಬಂದಿರುವ ಬೀಗರ ಕಡೆಗಿನ ಗುರುಗಳ ಹತ್ತಿರದಲ್ಲಿದ್ದ ಸಾಮಾನುಗಳನ್ನು ತೆಗೆದುಕೊಂಡು ಲಗ್ನದ ಮನೆಯವರ ಕಡೆಗಿನ ಗುರುಗಳ ಹತ್ತಿರ ಬಂದು, ಪಾದ ಪೂಜೆಯ ಮಾಡಿ ಎಲೆ, ಅಡಿಕೆ, ದಕ್ಷಿಣೆ, ಸಹಿತ ಸಮರ್ಪಿಸಿ ನಮಸ್ಕರಿಸುವರು. ಹೀಗೆ ಮೊದಲು ಎರಡೂ ಕಡೆಯ ಗುರುಗಳ ಪೂಜೆ ಯಾದ ನಂತರ ಬೀಗರ ಕಡೆಯ ಹೆಣ್ಣುಮಕ್ಕಳು ಗೌರವದಿಂದ ಪರಸ್ಪರ ಭಸ್ಮ, ಗಂಧ, ಕುಂಕುಮಾದಿ ಧರಿಸಿ ಆರತಿ ಮಾಡುವರು. ನಂತರ ಈ ಕಾರ್ಯಕ್ಕೆ ಬರುವ ಬಂಧು-ಮಿತ್ರರಿಗೆ ಅರುಶಿನ ಕುಂಕುಮ ಹಚ್ಚಿ ತಾಂಬುಲವನ್ನು ಕೊಡಬೇಕು. ಈ ಕಾರ್ಯವೆಲ್ಲಾ ಆದ ಮೇಲೆ ಮಾಂಗಲ್ಯ ವಾದ್ಯದೊಡನೆ ಬಿಡದಿ ಮನೆಗೆ (ಬೀಗರ ಸಲುವಾಗಿ ಸಿದ್ಧಪಡಿಸಿದ ಸ್ಥಳ) ಬರುತ್ತಾರೆ.

**ಸುರುಗಿ ನೀರು :** ಕುಂಬಾರನ ಮನೆಯಿಂದ ತೆಗೆದುಕೊಂಡು ಬಂದಿರುವ ಮಡಿಕೆಗಳನ್ನು ಬಾವಿ ಗಂಗಮ್ಮನ ಹತ್ತಿರ ಹೋಗಿ ಪೂಜೆಮಾಡಿಕೊಂಡು ಮಡಿಕೆಗಳಲ್ಲಿ ನೀರನ್ನು ತುಂಬಿಸಲಾಗುತ್ತದೆ. ನಂತರ ಮಡಿಕೆಗಳಿಗೆ ಕಂಕಣವನ್ನು ಕಟ್ಟಲಾಗುತ್ತದೆ. ಸುರುಗಿಯ ಒಳಗೆ ಮದುಮಕ್ಕಳನ್ನು ಕೂಡಿಸಿ ನೀರು ಹಾಕುವ ಸಲುವಾಗಿ ನಮ್ಮ ಮನೆಗಳಲ್ಲಿ ಮಡಿಕೆಗಳನ್ನು ಇಟ್ಟು ಐದು ಸುತ್ತು ದಾರವನ್ನು ಮಡಿಕೆಗಳಿಗೆ ಸುತ್ತಲಾಗುತ್ತದೆ. ಆ ಸುರಗಿ ಒಳಗೆ ಒನಕೆಯನಿಟ್ಟು ಸುರುಗಿಗೆ ಕೈಮುಗಿಸಿ, ಮದುಮಕ್ಕಳನ್ನು ಆ ಒನಕೆ ಮೇಲೆ ಅಥವಾ ಮಣೆಯ ಮೇಲೆ ಕೂಡಿಸಿ, ಅರಿಶಿನ ನೀರು ಹಾಕಲಾಗುತ್ತದೆ. ಬೇರೆಯವರ ಕಣ್ಣಿನಿಂದ ಮದುಮಕ್ಕಳಿಗೆ ದೃಷ್ಟಿ ಬೀಳದಿರಲೆಂದು ನಿವಾಳಿ ತೆಗೆಯಲಾಗುತ್ತದೆ. ಮದುಮಕ್ಕಳ ಮೇಲೆ ಕಂಚಿನ ತಟ್ಟೆಗೆ ಎಲೆಯನ್ನು ಹಿಡಿದು ನೀರು ಬಿಡಲಾಗುತ್ತದೆ. ಇದಕ್ಕೆ ಸುರಗಿ ನೀರು ಎಂದು ಕರೆಯುತ್ತಾರೆ. ಜನಪದರು ಹಳ್ಳಿಗಾಡಿನಲ್ಲಿ ಈ ಸುರುಗಿ ನೀರಿಗೆ ಹೆಚ್ಚಿನ ಮಹತ್ವವನ್ನು ಕೊಡುವರು. ಆದರೆ ಪಟ್ಟಣದಲ್ಲಿ ಈಗಾಗಲೇ ಈ ವ್ಯವಸ್ಥೆ ಸ್ವಲ್ಪ ಸ್ವಲ್ಪ ಕಡಿಮೆ ಆಗುತ್ತಾ ಬಂದಿದೆ ಎಂದು ಹೇಳಬಹುದು. ಜನಪದರಲ್ಲಿ ಸುರಗಿಯ ಬಗ್ಗೆ ಪೂಜ್ಯ

ಭಾವನೆಯನ್ನು ಇಟ್ಟುಕೊಂಡಿದ್ದಾರೆ. ಅದನ್ನು ಯಾರೂ ಕೂಡ ದಾಟುವಂತಿಲ್ಲ, ಭಗ್ನ ಗೊಳಿಸುವಂತಿಲ್ಲ ಅದಕ್ಕೆ ಹಿರಿಯರು ಸುರುಗಿ ಚರಿಗಿಯನ್ನು ಹಿಡಿದು ಕುಳಿತ್ತಿರುತ್ತಾರೆ. ಗಂಗೆಯ ಪೂಜೆಯ ನಂತರವೇ "ಸುರಗಿ ನೀರನ್ನು" ಮದುಮಕ್ಕಳಿಗೆ ಹಾಕಲಾಗುತ್ತದೆ. ನಂತರ ಬಾಸಿಂಗವನ್ನು ಕಟ್ಟಲಾಗುತ್ತದೆ. ಸುರಗಿ ನೀರು ಹಾಕುವಾಗ ಅನುಭವಸ್ತ ಮುತ್ತೈದೆಯರು ಎಲ್ಲಾ ಕೆಲಸ ಕಾರ್ಯಗಳನ್ನು ಮಾಡಿ ಮುಗಿಸುವರು.

**ಬಾಸಿಂಗ ಪದ್ಧತಿ :** ಯಾವುದೇ ಪದ್ಧತಿಯಲ್ಲಿ ಅಥವಾ ಯಾವುದೇ ಜಾತಿಯಲ್ಲಿಯೂ ಬಾಸಿಂಗವಿಲ್ಲದ ಮದುವೆಯನ್ನು ಮಾಡಲು ಸಾಧ್ಯವಿಲ್ಲ. ವೀರಶೈವ ವಿವಾಹ ಪದ್ಧತಿಯಲ್ಲಿ ಮದುಮಕ್ಕಳಿಗೆ ಬಾಸಿಂಗವನ್ನು ಕಟ್ಟುವ ಪದ್ಧತಿ ಮೊದಲಿನಿಂದಲೂ ಇದೆ. ಬಾಸಿಂಗಗಳಲ್ಲಿ ಹಲವು ವಿಧಗಳಿವೆ . ನಾಮದ ಬಾಸಿಂಗ, ಡುಬರಿ ಬಾಸಿಂಗ, ತೇರು ಬಾಸಿಂಗ, ಇತ್ಯಾದಿ ನಮೂನೆಗಳಲ್ಲಿ ಬಾಸಿಂಗಗಳಿರುತ್ತವೆ. ವೀರಶೈವರಲ್ಲಿ ಮದುಮಗನಿಗೆ ಬಾಸಿಂಗವಿಲ್ಲದೆ ಮದುವೆ ನಡೆಯುವುದಿಲ್ಲ. ತಾಳಿಕಟ್ಟುವ ಸಂದರ್ಭದಲ್ಲಿ ಬಾಸಿಂಗವನ್ನು ಕಟ್ಟುವರು. ಈ ಬಾಸಿಂಗವನ್ನು ಮುರಿಯದಂತೆ ಎಚ್ಚರಿಕೆಯಿಂದ ನೋಡಿಕೊಳ್ಳುತ್ತಾರೆ. ಮದುವೆ ಕಾರ್ಯ ಮುಗಿದ ಮೇಲೆ ಬಾಸಿಂಗವನ್ನು ಗಂಗೆಗೆ ಬಿಡಲಾಗುತ್ತದೆ.

**ತಾಳಿ ಮುಹೂರ್ತ :** ಸುರುಗಿ ಕಾರ್ಯ ಮುಗಿಯುತ್ತಲೇ ಮದುಮಗನಿಗೆ ಜೋಡಿ ಪಂಜೆ ಮತ್ತು ಅಂಗಿ, ಹುಡುಗಿಗೆ ಸೋದರಮಾವ ತಂದಿರುವ ಸೀರೆಯನ್ನು ಧಾರೆ ಎರೆಯುವಾಗ ಅಥವಾ ತಾಳಿಯನ್ನು ಕಟ್ಟುವಾಗ ಉಡಿಸುತ್ತಾರೆ. ಹೀಗೆ ಸಿದ್ಧಮಾಡಿ ಮದುಮಕ್ಕಳನ್ನು ಹಸೆಮಣೆಯಮೇಲೆ ಮೊದಲು ಮದುಮಗನನ್ನು ಕೂಡಿಸುತ್ತಾರೆ . ನಂತರ ಮದುಮಗಳನ್ನು ಅವಳ ಸೋದರಮಾವನು ಕೈಹಿಡಿದುಕೊಂಡು ಅವಳನ್ನು ಹಸೆಮಣೆಯ ಮೇಲೆ ಕುಳಿಸುತ್ತಾರೆ. ಇದಕ್ಕಿಂತ ಮೊದಲು ಶ್ರೀ ಗುರು ದೇವತಾಕಾರ್ಯವನ್ನು ಮಾಡುವರು. ಆ ದಿವಸ ಪ್ರತಿನಿತ್ಯ ಮಾಡುವಂತೆ ಸ್ನಾನಮಾಡಿ ಮಡಿಯಿಂದ ಲಿಂಗಪೂಜೆ, ಮನೆದೇವರ ಪೂಜೆ, ಗುರುಪಾದ ತೀರ್ಥ ಇತ್ಯಾದಿ ತೀರಿಸಿಕೊಂಡು ಶಿವ ಪಾರ್ವತಿಯರ ಪ್ರೀತ್ಯರ್ಥ, ಗ್ರಾಮದೇವತಾ ಪ್ರೀತ್ಯರ್ಥವಾಗಿ ಹಾಗೂ ಮದುಮಕ್ಕಳ ಸುಖಶಾಂತಿ ನೆಮ್ಮದಿಗಾಗಿ ಆ ಊರಿನ ಮಠ ಮತ್ತು ದೇವಾಲಯಗಳಲ್ಲಿಯ ನಂದಾದೀಪದ ಸಲುವಾಗಿ ಎಣ್ಣೆಯನ್ನು ಕೊಡುವರು. ಈ ಪದ್ಧತಿಗೆ ಎಣ್ಣೆ ಯನ್ನು ಬೀರುವುದು ಎಂದು ಹೇಳುವರು. ನಂತರ ಬಂದಿರುವ ದೈವದವರು ಮತ್ತು ಬಂಧುಮಿತ್ರರಿಗೆ ಚೆನ್ನಾಗಿ ಊಟಮಾಡಿಸಿ ತೃಪ್ತಿ ಪಡಿಸಬೇಕು. ಇಲ್ಲಿಗೆ ದೇವರ ಕಾರ್ಯ ಮಗಿದ ಹಾಗೆ ಎಂದು ಕೊಳ್ಳಬೇಕು.

ಮರುದಿನ ಲಗ್ನದಿನದ ಕಾರ್ಯಕ್ರಮಗಳು. ವಿವಾಹ ಮಂಟಪ ರಚನೆ ಮಾಡುವುದು. ಮನೆಯ ಮಧ್ಯ ವಿವಾಹಕ್ಕೆ ಅನುಕೂಲವಾಗುವಂತಹ ಒಂದು ಜಾಗದಲ್ಲಿ ಆಕಳ ಹಾಲು, ಮೊಸರು, ತುಪ್ಪ, ಗೋಮೂತ್ರ, ಶಗಣಿ ಮತ್ತು ಗೋರೋಜನದಿಂದ ಪರಿಶುದ್ಧ ಮಾಡಿ ಆ ಮಂಟಪವನ್ನು ಪೂರ್ವ ಇಲ್ಲವೆ ಉತ್ತರ ಮುಖ ಮಾಡಿ ನಾಲ್ಕು ದಿಕ್ಕುಗಳಲ್ಲಿಕಬ್ಬು, ಬಾಳೆ, ತೆಂಗು, ತಳಿರುತೋರಣಾದಿಗಳಿಂದಲೂ ಮಂಟಪವನ್ನು ಶೃಂಗರಿಸಬೇಕು. ಅನೇಕ ವಿಧಗಳ ವಸ್ತ್ರಪಟಗಳಿಂದಲೂ ಸುಂದರವಾಗುವಂತೆ ಮದುವೆ ಮಂಟಪವನ್ನು ರಚಿಸಿ ಈ ಮಂಟಪದ ೧೦ದಿಕ್ಕುಗಳ ದಿಕ್ಪಾಲಕರಾದ ಇಂದ್ರ, ಅಗ್ನಿ, ಯಮ, ನೈಋತ್ಯ,

ವರುಣ, ವಾಯುವ್ಯ ಕುಬೇರ, ಈಶಾನ್ಯ, ಉರ್ಧ್ವ, ಮಹೇಶ್ವರ, ಪಾತಳ, ಶಕ್ತಿ, ಇವರುಗಳನ್ನು ಶಾಸ್ತ್ರೋಕ್ತವಾಗಿ ಪೂಜಿಸುತ್ತಾರೆ.

ನಂತರ ಪಂಚ ಕಲಶ ಸ್ಥಾಪನೆ. ಮೇಲೆ ಹೇಳಿದಂತೆ ಮಂಟಪವನ್ನು ತಯಾರು ಮಾಡುತ್ತಾರೆ. ಆಮೇಲೆ ಅದರ ಮಧ್ಯದಲ್ಲಿ ಒಂದು ಚೌಕು ವೇದಿಕೆ ಅಥವಾ ಕಟ್ಟೆಯನ್ನು ಮಾಡುತ್ತಾರೆ. ಅದನ್ನು ರಂಗೋಲಿಯೊಂದಿಗೆ ಅಲಂಕರಿಸುತ್ತಾರೆ. ಎಂಟು ದಳದ ಕಮಲವನ್ನು ಬರೆದು 5-10 ಸೇರು ಅಕ್ಕಿ ಅಥವಾ ಜೋಳವನ್ನು ಹಾಕಿ ವೇದಿಕೆಯನ್ನು ಮಾಡುತ್ತಾರೆ. ಸ್ವಲ್ಪ ಉದ್ದು, ಜೀರಿಗೆ, ಕಡಲೇಬೇಳೆ ಹಾಕಿ, ಮನೆಯ ಯಜಮಾನನ ಗೋತ್ರಕ್ಕನುಸಾರವಾಗಿ ಐದು ದಿಕ್ಕುಗಳಲ್ಲಿ ಅಂದರೆ ಮಧ್ಯ, ಪೂರ್ವ, ಪಶ್ಚಿಮ, ದಕ್ಷಿಣ, ಉತ್ತರ ಕೆಳಗೆ ತೋರಿಸಿದಂತೆ ಆ ದಿಕ್ಕು ಹೊಂದುವಂತಹ ಸೂತ್ರಗಳನ್ನು ಬರೆದು ಪಂಚ ಕಲಸಗಳನ್ನು ಅವುಗಳ ಮೇಲೆ ಇಡಬೇಕು.

ಲಗ್ನದ ಮನೆಯ ಯಜಮಾನ ಗುರುಪೀಠಕ್ಕೆ ಸರಿಯಾದ ಪ್ರಣವಗಳನ್ನು ಬರೆದು ಪಂಚ ಕಲಶಗಳನ್ನು ಸ್ಥಾಪಿಸಬೇಕು. ಎಲ್ಲಾ ಕಡೆ ಹೀಗೆ ಬರೆದರೆ ದೋಷವಾಗುತ್ತದೆ. ಕಾರಣ ಎಚ್ಚರಿಕೆಯಿಂದ ಬರೆಯಬೇಕು. ಈ ಕೆಲಸಗಳಲ್ಲಿ ಮಡಿ ನೀರು ಅಕ್ಷತೆ ಮಂತ್ರಗಳನ್ನು ಮಾತ್ರ ಪೂರ್ವವಾಗಿ ಹಾಕಿ , ಅವುಗಳನ್ನು ಎಲೆಗಳಿಂದ ಅಲಂಕರಿಸಬೇಕು. ಕಲಸಗಳ ಮೇಲೆ ಟೆಂಗಿನ ಕಾಯಿಯಿಟ್ಟರೂ ಇಡಬಹುದು ಇಲ್ಲದೆನೂ ಇರಬಹುದು.

ಐದು ಕಲಸಗಳನ್ನು ಇಟ್ಟ ಮೇಲೆ ಇವುಗಳಲ್ಲಿ ಮಧ್ಯದ ಕಲಸದಿಂದ ಒಂದು ಸೂತ್ರವನ್ನು ಪುರೋಹಿತರ ಕಡೆಗೆ, ಮತ್ತೊಂದು ಸೂತ್ರ ಮದುಮಕ್ಕಳ ಕಡೆಗೆ ಉದ್ದವಾಗಿ ಮಾಡಿ ಎರಡು ಅರಿಶಿಣ ಕಂಕಣವನ್ನು ಕಟ್ಟುವದು, ಮದುಮಗನಿಗೆ ಮತ್ತು ಮದುಮಗಳಿಗೆ ಕಟ್ಟಲಿಕ್ಕೆ ಕಂಕಣವನ್ನು ಬೇರೆಬೇರೆಯಾಗಿ ತಯಾರಿಸಬೇಕು. ಪಂಚ ಕೆಲಸಕ್ಕೆ ಸುತ್ತಿದ ಸೂತ್ರವನ್ನು ಯಾವುದೇ ಕಾರಣಕ್ಕೂ ಹರಿಯಬಾರದು. ನಂತರ ವಿಘ್ನೇಶ್ವರ, ಗೌರಿ ಮುಂತಾದ ಪೂಜೆಗಳನ್ನು ಮತ್ತು ಸಮಾರಾಧನೆಯನ್ನು ವಿಧಿಯ ಪ್ರಕಾರ ಮಾಡುತ್ತಾರೆ. ಮುತ್ತೈದೆಯರು ಆರತಿ ಸಹಿತ, ಪರಿಶೋಭಿತನನ್ನಾಗಿ ಮಾಡಿದ ವರನನ್ನು ಹಂದರದಲ್ಲಿ ಕರೆದುಕೊಂಡು ಹೋಗಿ, ಪೂರ್ವ ಇಲ್ಲವೆ ಉತ್ತರಾಭಿಮುಖವಾಗಿ ನಿಂತು, ಒಂದು ತೆಂಗಿನ ಕಾಯಿಯನ್ನು ಇಳೇ ತೆಗೆದು ಒಡೆದು ಪುನಃ ವರನು ಮುತ್ತೈದೆಯರಿಂದ ಎದುರುಗೊಳ್ಳಲ್ಪಟ್ಟವನಾಗಿ ಬಾಣದಾರತಿ ವಗೈರೆ (ಅನ್ನದ ಉಂಡೆ ಕುಂಕುಮದ ನೀರು) ಮಾಡಿದ ಮೇಲೆ ಬಲಗಾಲ ಮುಂದುಮಾಡಿ ಗೃಹ ಪ್ರವೇಶ ಮಾಡಬೇಕು. ವಿವಾಹ ಮಂಟಪದ ಬಲಭಾಗಕ್ಕೆ ಪೂರ್ವ ಅಥವಾ ಉತ್ತರ ಮುಖವಾಗಿ ಉಚಿತಾಸನದಲ್ಲಿ ತನ್ನ ಕುಟುಂಬದ ಸಹಿತ ಕುಳಿತುಕೊಳ್ಳುತ್ತಾರೆ. ನಂತರ ವರನಿಗೆ ವಿಧಿ ನಿಯಮವಾಗಿ ಮಂತ್ರವನ್ನು ಹೇಳಿದ ಮೇಲೆ ಕನ್ಯೆಯನ್ನು ತಂದು ಮದುವೆ ಮಂಟಪದಲ್ಲಿ ಕುಳ್ಳಿರಿಸುತ್ತಾರೆ.

**ಕನ್ಯಾದಾನ ಪದ್ಧತಿ :** ಮೇಲೆ ಹೇಳಿದ ಪ್ರಕಾರ ಕನ್ಯೆಯನ್ನು ಕರೆತಂದು ಪೂರ್ವಮುಖವಾಗಿ, ವರನನ್ನು ಪಶ್ಚಿಮ ಮುಖವಾಗಿಯೂ, ಕನ್ನದಾನ ಮಾಡುವ ತಾಯಿ-ತಂದೆಗಳು ಉತ್ತರ ಮುಖವಾಗಿಯೂ ನಿಂತುಕೊಂಡು, ಒಂದು ಕಂಚಿನ ಪಾತ್ರೆಯಲ್ಲಿ ವರನ ಬೊಗಸೆಯ ಮೇಲೆ ಮಧುವಿನ ಬೊಗಸೆಯಲ್ಲಿ ಒಂದು ತೆಂಗಿನಕಾಯಿಯನ್ನಿರಿಸಿ, ಒಂದು ಚರಿಗೆ ಅಥವಾ ತಂಬಿಗೆ (ಅನುಕೂಲಕ್ಕೆ ತಕ್ಕಂತೆ ಬೆಳ್ಳಿ ಇಲ್ಲವೆ ಸ್ಟೀಲ್‌ನ) ಯಲ್ಲಿ ನೀರನ್ನು ಮತ್ತು ಅದಕ್ಕೆ ಹಾಲು, ತುಪ್ಪ, ಪಂಚಾಮೃತವನ್ನು ಅದರೊಳಗೆ ಹಾಕಿ ಜೋಡಿ ಜೋಡಿ ದಂಪತಿಗಳು ಮದುಮಕ್ಕಳ ಕೈಯಲ್ಲಿ ಇರುವಂತಹ ಕಾಯಿಯ ಮೇಲೆ ಹಾಕುತ್ತಾರೆ. ನಂತರ ಪುರೋಹಿತರು ಹೇಳಿದ ಸಮಯದಲ್ಲಿ ತಾಳಿಯ ಮುಹೂರ್ತ ನಡೆಯುತ್ತದೆ. ಅಕ್ಷತೆ, ಅಡಿಕೆ, ಎಲೆ, ಎರಡು ಕೊಬ್ಬರಿ ಬಟ್ಟಲುಗಳ ಮೇಲೆ ಮಾಂಗಲ್ಯವನ್ನಿಟ್ಟು ಅವುಗಳಿಗೆ ಕುಂಕುಮ, ಅರಿಶಿನ ಹಚ್ಚಿ ಐದು ಮಂದಿ ಮುತ್ತೈದೆಯರಿಗೆ ತಾಳಿಯನ್ನು ನಮಸ್ಕರಿಸಲು ಪುರೋಹಿತನು ತಿಳಿಸುತ್ತಾನೆ. ಅವರೆಲ್ಲಾ ತಾಳಿಗೆ ನಮಸ್ಕರಿಸಿದ ಮೇಲೆ ಅದನ್ನು ಮದುಮಗ ಸರಿಯಾದ ಮುಹೂರ್ತಕ್ಕೆ ಮದುಮಗಳಿಗೆ ಕಟ್ಟುತ್ತಾನೆ. ಈ ಸಂದರ್ಭದಲ್ಲಿ ಹೆಣ್ಣಿನ ಕಡೆಯವರು ಹಾಲು ಉಣಿಸಿ ಬೆಳಸಿ ನಿಮಗೆ ಕೊಡುತ್ತೇವೆ. ಇಲ್ಲಿಗೆ ನಮ್ಮ ದಾರಿ ಮುಗಿಯಿತು ಎಂದು 'ಧಾರೆ ಎರೆದು ಕೊಡುತ್ತಾರೆ'. ಇದಕ್ಕೆ ಧಾರೆಯೆರೆಯುವ ಪದ್ಧತಿ ಎಂದು ಕರೆಯುತ್ತಾರೆ. ಕೈ ತೊಳೆದುಕೊಂಡ ಹಾಲಿನಲ್ಲಿ ಮೂಗುತಿಯನ್ನು ಹಾಕಿ ಅದನ್ನು ಕನ್ಯೆ ಮತ್ತು ವರ ಇಬ್ಬರಿಗೆ ಹುಡುಕುವಂತೆ ಪುರೋಹಿತರು ಹೇಳುತ್ತಾರೆ. ಹೆಣ್ಣಿನ ತಂದೆ-ತಾಯಿಗಳು ಗಂಡನ ಮನೆಗೆ ಹೋಗುವ ಮಗಳಿಗೆ ಕಾಲು ತೊಳೆಯುವ ಸಾಮಾನು ಕೊಡುತ್ತಾರೆ. ಅನುಕೂಲಸ್ಥರು ಇದರಲ್ಲಿ ಬೆಳ್ಳಿ ಸಾಮಾನುಗಳನ್ನು ಕೊಡುತ್ತಾರೆ. ನಂತರ ಇವುಗಳೆಲ್ಲವನ್ನು ವಾದ್ಯಗಳ ಮೂಲಕ ಮದುವೆಯ ಮನೆಗೆ ತಂದು ಒಪ್ಪಿಸಿ ಮದುಮಗಳ ತಂದೆ-ತಾಯಿ ಇಲ್ಲವೆ ಚಿಕ್ಕಪ್ಪ-ಚಿಕ್ಕಮ್ಮಂದಿರು ಸೇರಿ ಮದುಮಕ್ಕಳಿಬ್ಬರ ಕಾಲು ತೊಳೆಯುತ್ತಾರೆ. ಕಾಲುತೊಳೆದವರಿಗೆ ಬೀಗರು ಹೊಸ ಬಟ್ಟೆಯನ್ನು ಕೊಡುತ್ತಾರೆ. ಹೀಗೆ ಪಾತ್ರೆ ಸಾಮಾನುಗಳನ್ನು ತರುವಾಗ ಒಬ್ಬ ಮುತ್ತೈದೆಯು ಕೊಡವನ್ನು ಹೊತ್ತುಕೊಂಡು ಬರುವ ಪದ್ಧತಿ ಇದೆ. ಇದಕ್ಕೂ ಗಂಡಿನ ಮನೆಯವರು ಅವಳಿಗೆ ಸೀರೆಯನ್ನು ಕೊಡುತ್ತಾರೆ. ಬೀಗರು ಸಾಮಾನುಗಳನ್ನು ಒಪ್ಪಿಸುವ ಕಾರ್ಯ ನಿಜಕ್ಕೂ ಸಾಂಸ್ಕೃತಿಕ ಪ್ರತೀಕವಾಗಿದೆ.

**ಮೆರವಣಿಗೆ :** ಮದುಮಕ್ಕಳ ಮೆರವಣಿಗೆಯಲ್ಲಿ ಸಾಮಾನ್ಯವಾಗಿ ಮದುಮಕ್ಕಳು ತುರಾಯಿ ಹಿಡಿದಿರುತ್ತಾರೆ. ಮದುಮಕ್ಕಳ ಮೆರವಣಿಗೆ ಪ್ರಮುಖ ಬೀದಿಗಳಲ್ಲಿ ಸಾಗಿ ದೇವರ ಗುಡಿ ಹತ್ತಿರ ಬರುತ್ತದೆ. ಗುಡಿಯೊಳಕ್ಕೆ ಹೋಗಿ ಪೂಜೆ ಮಾಡಿಸಿಕೊಂಡು ಪ್ರಸಾದವನ್ನು ತೆಗೆದುಕೊಂಡು ಬರುತ್ತಾರೆ. ಹೀಗೆ ಇಡೀ ಊರನ್ನು ಸುತ್ತಿಸಿ ಮೆರವಣಿಗೆಯನ್ನು ಮಾಡುವರು.

ಅಧ್ಯಾಯ - ೪

# ವೀರಭದ್ರ ದೇವಾಲಯಗಳು

ಪ್ರಸ್ತುತ ಅಧ್ಯಯನಕ್ಕೆ ಒಳಪಡಿಸಿರುವ ಹೂವಿನಹಡಗಲಿ ತಾಲೂಕು ಬಳ್ಳಾರಿ ಜಿಲ್ಲೆಯಲ್ಲಿ ಸಾಂಸ್ಕೃತಿಕವಾಗಿ ಬಹುಮುಖ್ಯವಾದುದು. ಹೂವಿನಹಡಗಲಿಯಲ್ಲಿ ಪ್ರಮುಖವಾಗಿ ಮೈಲಾರಲಿಂಗ, ವೀರಭದ್ರ, ಈಶ್ವರ, ಎಲ್ಲಮ್ಮ, ಮಾರಮ್ಮ, ಊರಮ್ಮ, ಆಂಜನೇಯ ಮುಂತಾದ ದೈವಗಳ ಸಾಂಸ್ಕೃತಿಕ ಆಚರಣೆಗಳು ವರ್ಷದ ಎಲ್ಲಾ ದಿನಗಳಲ್ಲೂ ನಡೆಯುತ್ತವೆ. ವೀರಭದ್ರನ ಆಚರಣೆಗಳು ಅದಕ್ಕೆ ಸಂಬಂಧಿಸಿದ ಭಕ್ತರಿರುವ ಊರುಗಳಲ್ಲಿ ನಡೆಯುವುದರ ಜೊತೆಗೆ ದೇವಾಲಯಗಳು ಹಾಗೂ ವೀರಭದ್ರನ ಶಿಲ್ಪಗಳು ಇವೆ. ಪ್ರಮುಖವಾದ ದೇವಾಲಯಗಳ ಕುರಿತಂತೆ ಮಾತ್ರ ವಿವರಗಳನ್ನು ಕೊಡಲಾಗಿದೆ. ಹೂವಿನ ಹಡಗಲಿ ತಾಲೂಕಿನ ಹೊಳಲು, ಹೊಳಗುಂದಿ, ಮಾನ್ಯರ ಮಸಲವಾಡ, ಮೈಲಾರ, ಸೋಗಿ ಮುಂತಾದ ಗ್ರಾಮಗಳಲ್ಲಿ ವೀರಭದ್ರನ ದೇವಾಲಯಗಳಿವೆ. ವೀರಭದ್ರನ ದೇವಾಲಯಗಳಲ್ಲಿರುವ ಮೂರ್ತಿಗಳು ಸಾಮಾನ್ಯವಾಗಿ ತ್ರಿಭಂಗಿಯಲ್ಲಿ ನಿಂತಿದ್ದು, ನಾಲ್ಕು ಕೈಗಳು ಇರುತ್ತವೆ. ಬಲಭಾಗದ ಮೇಲಿನ ಕೈಯಲ್ಲಿ ಬಾಣ, ಎಡಭಾಗದ ಮೇಲಿನ ಕೈಯಲ್ಲಿ ಬಿಲ್ಲು, ಬಲಭಾಗದ ಕೆಳಗಿನ ಕೈಯಲ್ಲಿ ಖಡ್ಗ ಮತ್ತು ಎಡಭಾಗದ ಕೆಳಗಿನ ಕೈಯಲ್ಲಿ ಉದ್ದನೆಯ ಗುರಾಣಿ ಇರುತ್ತದೆ. ತಲೆಯಲ್ಲಿ ಕಿರೀಟ ಹಾಗೂ ಹಣೆಯಲ್ಲಿ ಮೂರನೆಯ ಕಣ್ಣನ್ನು ಕೆತ್ತಲಾಗಿರುತ್ತದೆ. ಕೋರೆಹಲ್ಲಿನಿಂದ ಕೂಡಿದ್ದು ಕಿವಿಯಲ್ಲಿ ಚಕ್ರ ಮತ್ತು ರತ್ನ ಕುಂಡಲ, ಕಂಠಹಾರ, ಭುಜಕಿರೀಟ, ಕೈ ಕಡಗ, ಕಲಾಲ್ಲಿ ಪಂಡೆಗಳು, ರುಂಡಮಾಲೆ, ಸೊಂಟಪಟ್ಟಿ, ಯಜ್ಞೋಪವೀತ ಧರಿಸಿರುತ್ತಾನೆ. ಅಂದವಾದ ನೆರಿಗೆಗಳಿರುವ ಟೊಂಕ ವಸ್ತ್ರಧರಿಸಿರುತ್ತಾನೆ. ಇದು ಮೊಳಕಾಲಿನಿಂದ ಸ್ವಲ್ಪ ಮೇಲೆ ಇರುತ್ತದೆ. ಬಲಬದಿಯಲ್ಲಿ ಕುರಿತಲೆ ಹೊಂದಿರುವ ದಕ್ಷನ ಸಮಭಂಗಿಯಲ್ಲಿ ಅಂಜಲಿ ಬದ್ಧನಾಗಿ ನಿಂತಿರುತ್ತಾನೆ. ಹಾಗೆಯೇ ಎಡಬದಿಯಲ್ಲಿ ಅವನ ಪತ್ನಿ ಸಹ ಅಂಜಲಿ ಬದ್ಧಳಾಗಿ ನಿಂತಿರುತ್ತಾಳೆ. ಗರ್ಭಗೃಹದಲ್ಲಿ ಸ್ಥಾಪಿಸಿರುವ ಮೂರ್ತಿಗಳಿಗೆ ಕೀರ್ತಿ ಮುಖವಿರುವ ಪ್ರಭಾವಳಿ ಇರುತ್ತದೆ. ಕೆಲವೊಂದು ವೀರಭದ್ರನ ಮೂರ್ತಿಗಳ ಕಾಲಲ್ಲಿ ಅವಿಗೆಗಳು ಇರುತ್ತವೆ. ಕೆಲವು ವೀರಭದ್ರನ ಮೂರ್ತಿಗಳು, ಚಲನೆಯಲ್ಲಿರುವುದಾಗಿ ಕೆತ್ತಲಾಗಿರುತ್ತದೆ. ಈ ಮಾದರಿಯಲ್ಲಿ ಕೈಗಳನ್ನು ಮುಂದಕ್ಕೆ ಚಾಚುವಂತೆ ಮತ್ತು ಕಾಲುಗಳನ್ನು ಮುಂದೆ ಚಾಚಿರುವಂತೆ ಕೆತ್ತಲಾಗಿರುತ್ತವೆ.

ಹೊಳಲಿನಲ್ಲಿರುವ ವೀರಭದ್ರ ದೇವಾಲಯವು ಗ್ರಾಮದ ಮಧ್ಯದಲ್ಲಿದೆ. ಉತ್ತರಾಭಿಮುಖ ವಾಗಿದ್ದು, ಕಲ್ಯಾಣ ಚಾಲುಕ್ಯರ ಕಾಲದ್ದಾಗಿದೆ. ದೇವಸ್ಥಾನದ ಗೋಪುರ ಹಾಳಾಗಿದ್ದು, ಕಪ್ಪು ಶಿಲೆಯ ವಿಗ್ರಹವನ್ನು ಹೊಂದಿದೆ. ಈ ದೇವಾಲಯವು ಗರ್ಭಗೃಹ ಮತ್ತು ಸಭಾಮಂಟಪದಿಂದ ಕೂಡಿದ್ದು, ಅದರ ಮುಂದಿನ ಸಭಾಂಗಣ ವಿಶಾಲವಾಗಿದ್ದು, ಇತ್ತೀಚಿಗೆ ನಿರ್ಮಿಸಲಾಗಿದೆ. ಸಭಾ ಮಂಟಪದಲ್ಲಿ ನಾಲ್ಕು ಕಂಬಗಳಿವೆ ಮತ್ತು ಗರ್ಭಗೃಹದ ಲಲಾಟ ಬಿಂಬದಲ್ಲಿ ಪದ್ಮವನ್ನು ಕೆತ್ತಲಾಗಿದೆ.

ಗರ್ಭಗೃಹದಲ್ಲಿ ದ್ವಿಭಂಗಿಯಲ್ಲಿ ನಿಂತಿರುವ ಚತುರ್ಭುಜ ವೀರಭದ್ರನು ತನ್ನ ಕೈಗಳಲ್ಲಿ ಖಡ್ಗ, ಗುರಾಣಿ, ಬಿಲ್ಲು ಮತ್ತು ಬಾಣವನ್ನು ಹಿಡಿದಿರುವನು. ದೇವಾಲಯದ ಹೊರಗಡೆ ಸಪ್ತ ಮಾತೃಕೆಯರ ಫಲಕ, ಎರಡು ಶಿಲಾಶಾಸನ ಮತ್ತು ವೀರಗಲ್ಲುಗಳನ್ನು ನಿಲ್ಲಿಸಿರುವರು.

## ವೀರಭದ್ರ ದೇವಾಲಯ, ಹೊಳಲು
## ಹಡಗಲಿ ತಾಲೂಕು, ಬಳ್ಳಾರಿ




1) ಹೊಸಕಟ್ಟಡ
2) ಕಂಬಗಳು
3) ಸಭಾಮಂಟಪ
4) ಗರ್ಭಗುಡಿ

ಹೊಳಗುಂದಿಯಲ್ಲಿರುವ ವೀರಭದ್ರ ದೇವಾಲಯವು ಉತ್ತರಾಭಿಮುಖವಾಗಿದ್ದು, ವಿಜಯನಗರ ಕಾಲದಲ್ಲಿ ಸ್ಥಾಪಿಸಲಾಗಿದೆ. ವಿಗ್ರಹವು ಕಣಜಶಿಲೆ (ಗ್ರಾನೈಟ್)ಯಿಂದ ತಯಾರಿಸಿದ್ದಾರೆ. ಮೂಲತಃ ಈ ದೇವಾಲಯದಲ್ಲಿ ಸಿದ್ದೇಶ್ವರನ ಹೆಸರಿನಲ್ಲಿ ಗರ್ಭಗೃಹ, ಅಂತರಾಳ ಮತ್ತು ಮುಖಮಂಟಪ ಇದ್ದು, ಪೂರ್ವಾಭಿಮುಖವಾಗಿರುವುದು. ಈ ದೇವಾಲಯ ಕಲ್ಯಾಣಿ ಚಾಲುಕ್ಯರ ಕಾಲದಲ್ಲಿ ನಿರ್ಮಿತವಾಗಿದ್ದು, ನಂತರದ ವಿಜಯನಗರ ಕಾಲದಲ್ಲಿ ಚತುರ್ಭುಜ ವೀರಭದ್ರನ ವಿಗ್ರಹವನ್ನು ಸ್ಥಾಪಿಸಲಾಗಿದೆ. ಈ ದೇವಾಲಯದ ಗರ್ಭಗೃಹದ ಮೇಲೆ ದ್ರಾವಡ ಶೈಲಿಯ ಗೋಪುರ ನಿರ್ಮಿಸಲಾಗಿದೆ.

## ವೀರಭದ್ರ ದೇವಾಲಯ, ಹೊಳಗುಂದಿ
## ಹಡಗಲಿ ತಾಲೂಕು, ಬಳ್ಳಾರಿ ಜಿಲ್ಲೆ




1) ಕಂಬಗಳು 2) ಸಭಾ ಮಂಟಪ 3) ಗರ್ಭಗುಡಿ 4) ಅಂತರಾಳ
5) ಮಂಟಪ 6) ಅಂತರಾಳ 7) ಗರ್ಭಗುಡಿ

ಮಾನ್ಯರ ಮಸಲವಾಡದಲ್ಲಿರುವ ವೀರಭದ್ರ ದೇವಾಲಯವು ಊರಿನ ಮಧ್ಯದಲ್ಲಿರುವ ಕೆರೆಯ ದಂಡೆಯಲ್ಲಿದೆ. ಕಲ್ಯಾಣಿ ಚಾಲುಕ್ಯರ ಕಾಲದಲ್ಲಿ ದೇವಾಲಯ ಸ್ಥಾಪಿಸಲಾಗಿದೆ. ಕಪ್ಪುಶಿಲೆಯಿಂದ ಮೂರ್ತಿಯನ್ನು ಕೆತ್ತಿದ್ದಾರೆ. ಈ ದೇವಾಲಯವು ಗರ್ಭಗುಡಿ, ಅಂತರಾಳ, ಸಭಾಮಂಟಪದಿಂದ ಕೂಡಿದ್ದು, ಪೂರ್ವಾಭಿಮುಖವಾಗಿದೆ. ಮಂಟಪ ಕಂಬಗಳು, ದ್ವಾರ ಶಾಕ ಹಾಗೂ ಒಳರಚನೆ ಕಲ್ಯಾಣ ಚಾಲುಕ್ಯ ಶೈಲಿಯಲ್ಲಿದೆ. ಗರ್ಭಗುಡಿಯಲ್ಲಿ ದ್ವಿಭಂಗಿಯಲ್ಲಿ ನಿಂತಿರುವ ಚತುರ್ಭುಜ ವೀರಭದ್ರನು ತನ್ನ ಕೈಗಳಲ್ಲಿ ಖಡ್ಗ, ಗುರಾಣಿ, ಬಿಲ್ಲು ಮತ್ತು ಬಾಣವನ್ನು ಹಿಡಿದಿರುವನು. ಗುಡಿಯ ಶಿಖರವನ್ನು ವಿಜಯನಗರೋತ್ತರ ಕಾಲದಲ್ಲಿ ಜೀರ್ಣೋದ್ಧಾರ ಮಾಡಿರುವುದನ್ನು ಕಾಣಬಹುದು.

## ವೀರಭದ್ರ ದೇವಾಲಯ, ಮಾನ್ಯರ ಮಸಲವಾಡ
## ಹಡಗಲಿ ತಾಲೂಕು, ಬಳ್ಳಾರಿ ಜಿಲ್ಲೆ




1) ಕಂಬಗಳು 2) ಸಭಾ ಮಂಟಪ 3) ಅಂತರಾಳ 4) ಗರ್ಭಗುಡಿ

ಮೈಲಾರದಲ್ಲಿರುವ ವೀರಭದ್ರನ ದೇವಾಲಯವು ಊರಿನ ಮಧ್ಯದಲ್ಲಿ ದಕ್ಷಿಣಾಭಿಮುಖವಾಗಿದೆ. ದೇವಾಲಯವನ್ನು ವಿಜಯನಗರೋತ್ತರದಲ್ಲಿ ಸ್ಥಾಪಿಸಿದ್ದಾರೆ. ಮೂರ್ತಿಯನ್ನು ಗ್ರಾನೈಟ್‌ನಿಂದ ಕೆತ್ತಿದ್ದಾರೆ. ಈ ದೇವಾಲಯವು ಗರ್ಭಗುಡಿ ಮತ್ತು ಸಭಾ ಮಂಟಪದಿಂದ ಕೂಡಿದ್ದು, ದಕ್ಷಿಣಾಭಿಮುಖ ವಾಗಿದೆ. ಗರ್ಭಗುಡಿಯಲ್ಲಿ ದ್ವಿಭಂಗಿಯಲ್ಲಿ ನಿಂತಿರುವ ಚತುರ್ಭುಜ ವೀರಭದ್ರನು ತನ್ನ ಕೈಗಳಲ್ಲಿ ಖಡ್ಗ, ಗುರಾಣಿ, ಬಿಲ್ಲು ಮತ್ತು ಬಾಣವನ್ನು ಹಿಡಿದಿರುವನು. ಬಲಗಡೆ ಕೆಳಬದಿಯಲ್ಲಿ, ಕುರಿತಲೆಯ ದಕ್ಷನು ತನ್ನ ಕೈಗಳನ್ನು ಅಂಜಲಿ ಮುದ್ರೆಯಲ್ಲಿ ಹಿಡಿದು ಸಮಭಂಗಿಯಲ್ಲಿ ನಿಂತಿರುವನು. ಈ ದೇವಾಲಯದ ಕಂಬಗಳು ಮತ್ತು ಕಟ್ಟಡದ ಶೈಲಿಯು ವಿಜಯನಗರೋತ್ತರ ಕಾಲದ್ದೆಂದು ಹೇಳಬಹುದು.

## ವೀರಭದ್ರ ದೇವಾಲಯ, ಮೈಲಾರ
## ಹಡಗಲಿ ತಾಲೂಕು, ಬಳ್ಳಾರಿ ಜಿಲ್ಲೆ.




1) ಕಂಬಗಳು    2) ಸಭಾ ಮಂಟಪ    3) ಸಭಾ ಮಂಟಪ

ಸೋಗಿಯಲ್ಲಿರುವ ವೀರಭದ್ರನ ದೇವಾಲಯವು ಉತ್ತರಾಭಿಮುಖವಾಗಿದ್ದು, ಊರಿನ ಮಧ್ಯಭಾಗದಲ್ಲಿದೆ. ಕಲ್ಯಾಣ ಚಾಲುಕ್ಯರ ಕಾಲದಲ್ಲಿ ದೇವಾಲಯವನ್ನು ಸ್ಥಾಪಿಸಿದ್ದಾರೆ. ಮೂರ್ತಿಯನ್ನು ಕಪ್ಪುಶಿಲೆಯಿಂದ ಕೆತ್ತಿದ್ದಾರೆ. ಈ ದೇವಾಲಯವು ಉತ್ತರಾಭಿಮುಖವಾಗಿದ್ದು, ಗರ್ಭಗೃಹ, ಅಂತರಾಳ ಮತ್ತು ನವರಂಗದಿಂದ ಕೂಡಿದೆ. ಈ ದೇವಾಲಯಕ್ಕೆ ಮೂರು ದ್ವಾರಗಳಿದ್ದು, ಉತ್ತರಾಭಿಮುಖ ಪ್ರಮುಖವಾದದ್ದು. ಗರ್ಭಗೃಹದಲ್ಲಿ ಚತುರ್ಭುಜ ವೀರಭದ್ರನ ದ್ವಿಭಂಗಿಯಲ್ಲಿ ನಿಂತಿದ್ದು, ಆತನ ಕೈಗಳಲ್ಲಿ ಖಡ್ಗ, ಬಿಲ್ಲುಬಾಣ ಮತ್ತು ಖೇತಕ ಹಿಡಿದಿರುವನು. ತಲೆಯ ಮೇಲೆ ಕರಂಡ ಮುಕುಟಧಾರಿಯಾಗಿ ಕಿವಿಯಲ್ಲಿ ಓಲೆ, ಕೊರಳಲ್ಲಿ ಹಾರ ಮುಂತಾದ ಆಭರಣಗಳನ್ನು ಹೊಂದಿರುವನು. ಈತನ ಕೆಳ ಬಲಬದಿಯಲ್ಲಿ ಟಗರು ತಲೆಯ ದಕ್ಷಬ್ರಹ್ಮನು ಅಂಜಲಿ ಮುದ್ರೆಯಲ್ಲಿರುವನು. ಗೋಪುರ ಮತ್ತು ದೇವಾಲಯದ ಹೊರಭಾಗಗಳು ವಿಜಯನಗರ ಕಾಲದಲ್ಲಿ ಜೀರ್ಣೋದ್ಧಾರವಾಗಿರುವುದು ಕಂಡು ಬರುತ್ತದೆ.

## ವೀರಭದ್ರ ದೇವಾಲಯ, ಸೋಗಿ
## ಹಡಗಲಿ ತಾಲೂಕು, ಬಳ್ಳಾರಿ ಜಿಲ್ಲೆ




1) ಕಂಬಗಳು 2) ನವರಂಗ 3) ಅಂತರಾಳ 4) ಗರ್ಭಗುಡಿ

## ಅಧ್ಯಾಯ - ೫

# ವೀರಭದ್ರನ ಹುಟ್ಟಿನ ಸಾಂಸ್ಕೃತಿಕ ಸನ್ನಿವೇಶ

ಭಾರತೀಯ ಸಾಂಸ್ಕೃತಿಕ ಚರಿತ್ರೆಯನ್ನು ನೋಡಿದರೆ ಇಲ್ಲಿ ಬಹುಪಾಲು ದೇವಾನು ದೇವತೆಗಳ ಹುಟ್ಟಿಗೆ ಹಲವಾರು ಕಾರಣಗಳನ್ನು ಹೇಳುತ್ತಾರೆ. ಹಾಗೆಯೇ ತಮ್ಮದೇ ಆದಂತಹ ಪುರಾಣ, ಪುಣ್ಯ ಕತೆಗಳು, ಸಾಂಸ್ಕೃತಿಕ ಜೀವನದಲ್ಲಿ ಬಹು ಮಹತ್ತರವಾದ ಪಾತ್ರವನ್ನು ವಹಿಸುತ್ತಿವೆ. ಈ ಪುರಾಣ, ಪುಣ್ಯ ಕತೆಗಳನ್ನು ಪಠಿಸುವುದರಿಂದ, ಕೇಳುವುದರಿಂದ ಜೀವನದಲ್ಲಿ ಒಳ್ಳೆಯ ಫಲಗಳು ಸಿಗುತ್ತವೆ. ಸಾವಿನ ನಂತರವು ಮೋಕ್ಷ ಸಿಗುತ್ತದೆ ಎಂದು ಬಲವಾಗಿ ನಂಬಿದ್ದಾರೆ.

ಈಗ ನಾವು ಅಧ್ಯಯನಕ್ಕೆ ಒಳಪಡಿಸುತ್ತಿರುವ ವೀರಭದ್ರನ ಸಾಂಸ್ಕೃತಿಕ ಚರಿತ್ರೆಯನ್ನು ನೋಡಿದಾಗ ನಮಗೆ ಹಲವಾರು ಮಾಹಿತಿಗಳು ದೊರಕುತ್ತವೆ. ಮೊದಲನೆಯದಾಗಿ ಶಿವನ ಹೆಂಡತಿ ದಾಕ್ಷಾಯಣಿಗೆ ಆದ ಅವಮಾನವನ್ನು ತೀರಿಸಿಕೊಳ್ಳಲು, ಎರಡನೆಯದಾಗಿ ಶಿವನ ಸಂಹಾರಕ್ಕಾಗಿ ದಕ್ಷ ಬ್ರಹ್ಮನು ಯಜ್ಞವನ್ನು ಹಮ್ಮಿಕೊಂಡಿರುತ್ತಾನೆ. ಅದನ್ನು ಹಾಳು ಮಾಡಲು ವೀರಭದ್ರನ ಅವತಾರವಾಗುತ್ತದೆ.

ಇದಕ್ಕೆ ಸಂಬಂಧಿಸಿದಂತೆ ಪರಂಪರೆಯಲ್ಲಿ ಪುರಾಣ ಕತೆಗಳಿವೆ. ಜನಪದರು ಈಗಲೂ ಅದರ ಬಗೆಗೆ ತಮ್ಮದೇ ಆದ ಕತೆಗಳನ್ನು ಹೇಳುತ್ತಾರೆ.

ದಕ್ಷಬ್ರಹ್ಮನು ಶಿವನನ್ನು ಕುರಿತು ತಪಸ್ಸು ಮಾಡುತ್ತಿರುತ್ತಾನೆ. ಶಿವನು ಪ್ರತ್ಯಕ್ಷನಾಗಿ ದಕ್ಷಬ್ರಹ್ಮನ ತಪಸ್ಸಿನ ಉದ್ದೇಶವನ್ನು ತಿಳಿದುಕೊಳ್ಳುತ್ತಾನೆ. ಆಗ ವರವನ್ನು ಕೊಡುತ್ತಾನೆ. ಅದರಂತೆ ದಕ್ಷಬ್ರಹ್ಮನು ದಕ್ಷಾವತಿಯೆಂಬ ಪಟ್ಟಣಕ್ಕೆ ಅಧಿಪತಿಯಾಗುತ್ತಾನೆ. ಇತ್ತ ಶಿವನು ಕೈಲಾಸಕ್ಕೆ ಮರಳಿ ಬಂದ ಮೇಲೆ ದಕ್ಷಬ್ರಹ್ಮನು ಒಂದು ಯಾಗವನ್ನು ಮಾಡಬೇಕು ಎಂದು ತೀರ್ಮಾನಿಸುತ್ತಾನೆ. ತನಗೆ ಇರುವಂತಹ ಅರವತ್ತೂ್ಮರು ಮಂದಿ ಹೆಣ್ಣು ಮಕ್ಕಳನ್ನು ದೇವತೆಗಳಿಗೆ ಮದುವೆ ಮಾಡಿಕೊಟ್ಟಿರುತ್ತಾನೆ. ಶಿವನಿಗೆ ತನ್ನ ಕೊನೆಯ ಮಗಳಾದ ದಾಕ್ಷಾಯಣಿಯನ್ನು ಮದುವೆ ಮಾಡಿರುತ್ತಾನೆ. ಯಜ್ಞಕ್ಕೆ ಎಂದು ಎಲ್ಲಾ ಮಕ್ಕಳ ಮನೆಗೂ ಕರೆಯಲು ಹೋಗುವಂತೆ ದಾಕ್ಷಾಯಣಿ ಮನೆಗೆ ಹೋಗುತ್ತಾನೆ. ಅವನು ಬರುವಂತಹ ವಿಧಾನವನ್ನು ಜನಪದರು ಒಡಪುಗಳ ಮೂಲಕ ಈ ರೀತಿಯಾಗಿ ಹೇಳುತ್ತಾರೆ.

ಹರಿಬಂದ। ಹಂಸವಾಹನ ಬಂದ। ಕರಿಗಮನ ರಕ್ತ ಬಂದ ಬಹು ಪರಾಕ್।<br>
ಆಗ ವರುಣನು ಬಂದ। ವೀತಿ ಗೋತ್ರಣ ಬಂದ।<br>
ನೂತನ ದ ಯಮ ಬಂದ ಬಹುಪರಾಕ್।<br>
ಯಕ್ಷರಾಕ್ಷಸ ಬಂದ। ಪ್ರತ್ಯಕ್ಷ ದಕ್ಷ ಬಂದ।<br>
ರಕ್ಷಿಸಯ್ಯ ನಮ್ಮ ಮೋಕ್ಷನಾಥ। ಶ್ರೀಗುರವೇ ಬಹುಪರಾಕು।

ಹೀಗೆ ದಕ್ಷಬ್ರಹ್ಮನು ಅತೀ ಗರ್ವದಿಂದ ಬರುತ್ತಾನೆ. ಶಿವನು ಒಡ್ಡೋಲಗದಲ್ಲಿ ಹರಿಸುರರು ಬ್ರಹ್ಮಾದಿಗಳೊಂದಿಗೆ ಕುಳಿತುಕೊಂಡು ದಕ್ಷಬ್ರಹ್ಮನು ಗರ್ವದಿಂದ ಬರುತ್ತಿರುವುದನ್ನು ನೋಡುತ್ತಿರುತ್ತಾನೆ. ಬಾಗಿಲಲ್ಲಿ ನಂದಿಯನ್ನು ಅಡ್ಡಲಾಗಿ ನಿಲ್ಲಿಸುತ್ತಾನೆ. ನಂದಿಯನ್ನು ಲಕ್ಷಿಸದೆ ದಕ್ಷಬ್ರಹ್ಮನು ಅವನಿಗೆ ಅನೇಕ ಅವಾಚ್ಯ ಶಬ್ದಗಳನ್ನು ಆಡುತ್ತ ಒಳಗೆ ಬರುತ್ತಾನೆ. ಅವನು ಬರುತ್ತಿರುವ ಸಂದರ್ಭದಲ್ಲಿ ಶಿವನು ಪಾರ್ವತಿಗೆ ನಿಮ್ಮ ತಂದೆ ಅತೀ ಗರ್ವದಿಂದ ಬರುತ್ತಿದ್ದಾನೆ. ನೀನು ಅವನಿಗೆ ಯಾವುದೇ ತರಹದ ಮರ್ಯಾದೆಯನ್ನು ಕೊಡಬೇಡ ಎಂದು ಹೇಳುತ್ತಾನೆ. ಅದೇ ರೀತಿ ಪಾರ್ವತಿಯು ತಂದೆಯನ್ನು ಮಾತನಾಡಿಸುವುದಿಲ್ಲ. ಅಳಿಯನಾದ ಶಿವನು ಕೂಡ ಮರ್ಯಾದೆಯನ್ನು ಕೊಡುವುದಿಲ್ಲ. ಆಗ ದಕ್ಷಬ್ರಹ್ಮನು ಪರಶಿವನು ತನ್ನನ್ನು ಕರೆದು ಮರ್ಯಾದೆಯನ್ನು ಕೊಡಲಿಲ್ಲವೆಂದು ಕೋಪಗೊಳ್ಳುತ್ತಾನೆ. ಸಿಟ್ಟಿನಿಂದ ಕಿಡಿಕಿಡಿ ಕಾರುತ್ತಾ, ಶಿವನಿಗೆ ಎಲೈ! ಪರಶಿವಮೂರ್ತಿ ಶ್ರೇಷ್ಠ ಅಳಿಯನನ್ನು ನೋಡಬೇಕು ಎಂದು ಅಟ್ಟಹಾಸದಿಂದ ನಿನ್ನನ್ನು ನೋಡಲು ನಾನು ಬಂದರೆ, ಕೆಟ್ಟ ಮನುಷ್ಯನಂತೆ ನನ್ನನ್ನು ಲಕ್ಷಿಸದೆ, ನನ್ನನ್ನಿ ನಿನ್ನ ಒಡ್ಡೋಲಗದ ಒಳಗೆ ಬಾ ಎಂದು ಕರೆಯಲಿಲ್ಲ. ಕುಳಿತುಕೊಳ್ಳು ಎಂದರೆ ನಿನ್ನ ಆಸನ ಮುರಿದು ಹೋಗುತ್ತಿತ್ತೇನು. ಕೊರಳಿಗೆ ಎಲುಬಿನ ಮಾಲೆಯನ್ನು ಹಾಕಿ ಸ್ಮಶಾನವನ್ನು ಕಾಯುತ್ತಿರುವವನಿಗೆ ನನ್ನ ಕಂದಮ್ಮನಾದ ದಾಕ್ಷಾಯಣಿಯನ್ನು ಕೊಟ್ಟದ್ದು ಚಂದವಾಗಲಿಲ್ಲವೇ ಎಂದು ಗರ್ಜಿಸುತ್ತಾನೆ. ಪಾರ್ವತಿಗೆ ನಿನ್ನ ಗಂಡನನ್ನು ಕೊಂದು ಕೈಲಾಸವನ್ನೆಲ್ಲಾ ನಾನೇ ಆಳುತ್ತೇನೆ ಎಂದು ಹೇಳುತ್ತಾ ಭೂ ಲೋಕಕ್ಕೆ ಬಂದನು. ಜೊತೆಯಲ್ಲಿ ಹರಿ-ಸುರ ಬ್ರಹ್ಮಾದಿಗಳನ್ನು ಕರೆದುಕೊಂಡು ಶ್ರೀ ಹರಿಯ ಹತ್ತಿರ ಬರುತ್ತಾನೆ. ಶಿವನು ತನ್ನ ಒಡ್ಡೋಲಗದಲ್ಲಿ ನನಗೆ ಅವಮಾನವನ್ನು ಮಾಡಿದ್ದಾನೆ. ಅದಕ್ಕೆ ಅವನನ್ನು ಕೊಲ್ಲಲು ಯಜ್ಞವನ್ನು ಮಾಡಬೇಕು ಎಂದಿರುವೆ ಎಂದು ಹೇಳುತ್ತಾನೆ. ಆಗ ಶ್ರೀಹರಿಯು ಶಿವನ ಮೇಲೆ ವೈರತ್ವ ಇದ್ದಕಾರಣ ಮತ್ತು ದಕ್ಷಬ್ರಹ್ಮನ ಗರ್ವ ಮುರಿಯಲು ಇದೇ ಸಮಯವೆಂದು ದಕ್ಷಬ್ರಹ್ಮನಿಗೆ ಯಜ್ಞ ಮಾಡಲು ಒಪ್ಪಿಗೆ ಕೊಟ್ಟನು.

ದಕ್ಷನು ಹರಿಸುರ ಬ್ರಹ್ಮಾದಿಗಳೊಂದಿಗೆ ಸೇರಿಕೊಂಡು ಯಜ್ಞದ ಸಿದ್ಧತೆಯನ್ನು ನಡೆಸಿದನು. ಅಗ್ನಿ ಕುಂಡವು ಆಗಲು ಹನ್ನೆರಡು ಗಾವುದ ನಿಡಿದು ಮುನ್ನೂರು ಯೋಜನತನಕ ಯಜ್ಞ ಕುಂಡವನ್ನು ರಚಿಸಿದನು. ಅದಕ್ಕೆ ಬೇಕಾದ ಅತ್ತಿ, ಆಲ, ಅರಳಿ, ಬಸುರೆ, ಉತ್ತರಾಣಿ, ಮಾವು, ಗಂಧ ಮೊದಲಾದ ಸೌದೆಗಳನ್ನು ತಂದರು. ಕ್ಷೀರ, ಘೃತ, ಮಧು, ದದಿ, ಸಕ್ಕರೆ ಯಜ್ಞಕ್ಕೆ ಬೇಕಾದ ಇನ್ನು ಮುಂತಾದ ವಸ್ತುಗಳನ್ನು ತಂದರು. ಆಗ ಶ್ರೀಹರಿಯು ದಕ್ಷಬ್ರಹ್ಮನನ್ನು ಕರೆದು, ಯಜ್ಞವನ್ನು ಮಾಡುವಂತಹ ಸಂದರ್ಭದಲ್ಲಿ ಯಜ್ಞಕರ್ತರು ಯಾರು, ದಳ ಕರ್ತರು ಯಾರು, ನಿಮ್ಮ ಸರ್ವರಿಗೂ ಕರ್ತರು ಯಾರು ಎಂದು ಕೇಳುತ್ತಾನೆ. ಆಗ ದಕ್ಷಬ್ರಹ್ಮನು ಎಲ್ಲಾ ದೇವಾನು ದೇವತೆಗಳ ಅಪ್ಪಣೆಯಂತೆ ಪಾದಕ್ಕೆ ನಮಸ್ಕರಿಸುತ್ತಾನೆ. ದಕ್ಷಬ್ರಹ್ಮನು ಯಜ್ಞ ಕರ್ತ, ನಾನು ದಳ ಕರ್ತ, ದೇವೇಂದ್ರ ನಮ್ಮೆಲ್ಲರಿಗೂ ಕರ್ತ ನೀನು ಎಂದು ಹೇಳುತ್ತಾನೆ. ಆಗ ಕೃಷ್ಣನು ಈ ಯಜ್ಞಕ್ಕೆ ಸರಸ್ವತಿ, ಲಕ್ಷ್ಮಿ, ಗಣಪತಿ, ಸಕಲ ದೇವಾನು ದೇವತೆಗಳು ಬಂದ್ದಿದ್ದಾರೆಯೇ ಎಂದು ಪಾದಕ್ಕೆ ಎರಗಿದನು. ಆ ಮಾತಿಗೆ ಶ್ರೀಹರಿಯು ಯುಕ್ತಿಯಲ್ಲಿ ಜಾಣ, ಶಕ್ತಿಯಲ್ಲಿ ಬಲಿಷ್ಠನಾದ ದದೀಚಿ ಮಹಾಮುನಿಯು ಬಂದಿದ್ದಾರೆಯೇ ಎಂದು ಕೇಳುತ್ತಾನೆ. ಇಲ್ಲ

ಮಹಾ ಪ್ರಭುವೆಂದು ದಕ್ಷಬ್ರಹ್ಮನು ಹೇಳುತ್ತಾನೆ. ಆಗ ಶ್ರೀ ಹರಿಯು ಆತನನ್ನು ಕರೆ ಕಳುಹಿಸಬೇಕು ಎಂದು ಕರೆದುಕೊಂಡು ಬನ್ನಿ ಎಂದು ಹೇಳಿ ಕಳುಹಿಸುತ್ತಾನೆ. ಸೇವಕರು ದದೀಚಿ ಮುನಿಗಳ ಹತ್ತಿರ ಬಂದು ಸ್ವಾಮಿ ನಮ್ಮ ತಂದೆಯಾದ ದಕ್ಷಬ್ರಹ್ಮನು ಪ್ರೇಮದಿಂದ ಹೋಮವನ್ನು ಮಾಡುತ್ತಾನೆ. ಆ ಯಜ್ಞಕ್ಕೆ ತಾವುಗಳು ಬರಬೇಕು ಎಂದು ಭಿನ್ನವಿಸುತ್ತಾರೆ. ಆಗ ದದೀಚಿ ಮುನಿಯು ಸೇವಕರೆ ನಿಮ್ಮ ಒಡೆಯನಾದ ದಕ್ಷಬ್ರಹ್ಮನು ಪ್ರೇಮದಿಂದ ಯಜ್ಞ ಮಾಡುವುದಿರಲಿ, ಆ ಯಜ್ಞಕ್ಕೆ ಯಾರು ಯಾರು ಬಂದಿದ್ದಾರೆ ಎಂದು ಕೇಳುತ್ತಾನೆ. ಸೇವಕರು ಸರ್ವರೂ ಬಂದಿದ್ದಾರೆ ಎನ್ನುತ್ತಾನೆ. ದದೀಚಿ ಮುನಿಯು ಮುರಾರಿಯು ಬಂದಿದ್ದಾನೆಯೇ ಎಂದು ಕೇಳಿದಾಗ, ಪರಶಿವನು ಬಂದಿದ್ದಾರೆ ಎಂದು ಹೇಳುತ್ತಾನೆ. ಆಗ ದದೀಚಿ ಮಹಾಮುನಿಗಳು ಶಿವನ ಪಾದ ಕಮಲಗಳನ್ನು ನೋಡಬೇಕು ಎಂದು ತೆರಳಿ ಬಂದನು. ಅಲ್ಲಿ ಶಿವನ ಸುಳಿವು ಸಿಗಲಿಲ್ಲ. ಆಗ ಮುನಿಯು ಸಿಟ್ಟಿನಿಂದ ಎಲ್ಲೈ ಸೇವಕರೆ ಪರಶಿವನು ಬಂದಿದ್ದಾನೆ ಎಂದು ನನ್ನನ್ನು ಮೋಸದಿಂದ ಕರೆ ತಂದಿದೀರಾ ಎಂದು ಹೇಳುತ್ತಾನೆ. ಅಲ್ಲಿಗೆ ದಕ್ಷಬ್ರಹ್ಮನು ಬಂದು ಮಹಾ ಮುನಿಗಳೇ ಈ ಯಜ್ಞವನ್ನು ಹಮ್ಮಿಕೊಳ್ಳುವುದಕ್ಕಿಂತ ಮೊದಲು ಅಳಿಯನಾದ ಶಿವ ಮತ್ತು ಮಗಳಾದ ದಾಕ್ಷಾಯಣಿಯನ್ನು ಕರೆತರಲು ಕೈಲಾಸಕ್ಕೆ ಹೋಗಿದ್ದೆನು. ಅಲ್ಲಿ ಒಡ್ಡೋಲಗ ನಡೆಯುತ್ತಿರುವಂತಹ ಸಂದರ್ಭದಲ್ಲಿ ನನಗೆ ಒಳಗೆ ಬಾ ಎಂತಲೂ ಮತ್ತು ಕುಳಿತುಕೋ ಎಂದೂ ಕೂಡ ಹೇಳಲಿಲ್ಲ. ಅಲ್ಲಿ ನನಗೆ ಮರ್ಯಾದೆಯನ್ನು ಸಹ ಕೊಡಲಿಲ್ಲ. ಆದಕ್ಕೆ ನಾನು ಶಿವನನ್ನು ಕೊಂದು ಕೈಲಾಸವನ್ನು ಆಳುವುದಕ್ಕೆ ಇದೇ ಸಮಯವೆಂದು ತೀರ್ಮಾನಿಸಿ ಈ ಯಜ್ಞವನ್ನು ಮಾಡಿರುವೆನು. ಪರಶಿವನು ಇಲ್ಲವೆಂದರೆ ಏನಾಯಿತು ನಿನಗೆ ಇಷ್ಟವಿದ್ದರೆ ಇರು ಇಲ್ಲದಿದ್ದರೆ ತೆರಳು ಎಂದು ದಕ್ಷನು ದದೀಚಿ ಮುನಿಗೆ ಹೇಳುತ್ತಾನೆ.

ದದೀಚಿಮುನಿಯು ದಕ್ಷ ಬ್ರಹ್ಮನಿಗೆ 'ಪರಶಿವನು ನಿನ್ನನ್ನು ಕರೆದು ಮರ್ಯಾದೆಯನ್ನು ಕೊಡಲಿಲ್ಲವೆಂದು ಆವನಿಗೆ ಮಾರಣ ಹೋಮವನ್ನು ಮಾಡುವೆಯಾ, ನೀನು ನಿನ್ನ ಸ್ವಂತ ಬುದ್ಧಿಯಿಂದ ಮಾಡದೇ ದುಷ್ಟರ ಮಾತನ್ನು ಕೇಳಿ ಸುಮ್ಮನೇ ನಿನ್ನ ಪ್ರಾಣಕ್ಕೆ ಕುಂದನ್ನು ತಂದು ಕೊಳ್ಳಬೇಡ. ಈ ಯಜ್ಞವನ್ನು ಇಲ್ಲಿಗೆ ಮುಗಿಸಿ ಶಿವನ ಹತ್ತಿರ ಹೋಗಿ ಕ್ಷಮಾಪಣೆಯನ್ನು ಕೇಳು' ಎಂದು ಪರಿಪರಿಯಾಗಿ ಹೇಳುವನು. ಎಷ್ಟು ಹೇಳಿದರೂ ದಕ್ಷನು ಮಹಾಮುನಿಗಳಿಗೆ ಬಾಯಿಗೆ ಬಂದ ಹಾಗೆ ಬೈದು, ಶಿವನನ್ನು ಸಹ ನಿಂದಿಸುತ್ತಾನೆ. ಆದಕ್ಕೆ ಮುನಿಗಳು ಹಮ್ಮಿನಿಂದ ಬ್ರಹ್ಮನು ತನ್ನ ಶಿರವನ್ನು ಕಳೆದುಕೊಂಡ ಕತೆಯು ನಿನಗೆ ತಿಳಿದಿಲ್ಲವೇ, ಮಲಹರನೊಡನೆ ವಿರೋಧವನ್ನು ಕಟ್ಟಿಕೊಂಡು ಎಷ್ಟು ಮಂದಿ ಕೆಟ್ಟಿದ್ದಾರೆ. ಇಷ್ಟೆಲ್ಲಾ ಕೇಳಿ ನೋಡಿದ್ದರೂ ಕೂಡ ನಿನ್ನ ಹಟವನ್ನು ನೀನು ಬಿಡುತ್ತಿಲ್ಲವಲ್ಲ ಎಂದು ಹೇಳುತ್ತಾರೆ. ದಕ್ಷನು ನಾನು ಮಾಡುತ್ತಿರುವ ಯಜ್ಞವನ್ನು ನಿಲ್ಲಿಸುವುದಿಲ್ಲವೆಂದು ಹೇಳುತ್ತಾನೆ. ಆಗ ಮಹಾಮುನಿಯು ಬಾಳಾಕ್ಷ (ಶಿವನು) ಬಾರದ ಯಜ್ಞವು ಹಾಳಾಗಿ ಹೋಗಲಿ, ಮತ್ತು ನಿನ್ನ ತಲೆಯು ಇದೇ ಯಜ್ಞಕ್ಕೆ ಕಟ್ಟಿಗೆಯಾಗಲಿ ಎಂದು ಶಾಪವನ್ನು ಕೊಟ್ಟು ತನ್ನ ಆಶ್ರಮಕ್ಕೆ ಹೋದನು.

ಇತ್ತ ಕೈಲಾಸದಲ್ಲಿ ಮಂದಗಮನಿಯಾದ ದಾಕ್ಷಾಯಣಿಯು ತಂದೆಯ ಹೋಮದ ವಾರ್ತೆಯನ್ನು ತನ್ನ ಅಕ್ಕ ತಂಗಿಯರಿಂದ ಅಥವಾ ಇಡೀ ಮೂರು ಲೋಕವನ್ನು ಸಂಚರಿಸುತ್ತಿರುವ ನಾರದನಿಂದಲೇ ತನ್ನ ತಂದೆ ಮಾಡುತ್ತಿರುವ ಯಜ್ಞದ ವಿಷಯವನ್ನು ತಿಳಿಯುತ್ತಾಳೆ. ನನ್ನ ತಂದೆ ನನ್ನ ಸಹೋದರಿಯರಿಗೆ ಮತ್ತು ಅವರ ಗಂಡಂದಿರಿಗೆ ಆಹ್ವಾನ ಕೊಟ್ಟಿದ್ದಾನೆ. ನನಗೆ ಮತ್ತು ನನ್ನ ಗಂಡನಿಗೆ ಮಾತ್ರ ಕರೆದಿಲ್ಲ ಎಂದು ನಾರದನಿಗೆ ಹೇಳುವಳು. ಆಗ ನಾರದನು ಶಿವನಿಗೆ ದಕ್ಷನ ಯಜ್ಞಕ್ಕೆ ಹೋಗುತ್ತೇನೆ ಎಂದು ಹೇಳುತ್ತಾನೆ ಆಗ ಪಾರ್ವತಿಯು ಶಿವನ ಹತ್ತಿರ ಹೋಗಿ ನನ್ನ ತಂದೆ ನಮ್ಮ ಮೇಲಿನ ಸೇಡಿಗಾಗಿ ಯಜ್ಞ ಮಾಡುತ್ತಿದ್ದಾನೆ. ನಾನು ನನ್ನ ತಂದೆಯ ಹತ್ತಿರ ಹೋಗಿ ಅವನ ನಿಂದನೆಗೆ ನೀನು ಗುರಿಯಾಗುವುದು ಬೇಡ ಎಂದು ಹೇಳುತ್ತಾನೆ. ಇಷ್ಟು ಹೇಳಿದರೂ ಕೂಡ ಅವಳು ಕೇಳದೇ ನಾನು ಹೋಗಲೇ ಬೇಕು ಎಂದು ಹಟ ಹಿಡಿಯುತ್ತಾಳೆ. ಆದಕ್ಕೆ ಶಿವನು ಹೋಗಲು ಒಪ್ಪಿಗೆಯನ್ನು ಕೊಡುತ್ತಾನೆ.

ದಾಕ್ಷಾಯಣಿಯು ತನ್ನ ಜೊತೆಯಲ್ಲಿ ನಂದಿ ನಾರದಮುನಿ ಮುಂತಾದ ದೇವತೆಗಳನ್ನು ಕರೆದು ಕೊಂಡು ದಕ್ಷನ ಯಜ್ಞ ಸ್ಥಳವಾದ ದಕ್ಷಾವತಿಗೆ ಬರುತ್ತಾಳೆ. ಅಲ್ಲಿ ನೆರೆದಿರುವಂತಹ ದೇವಾನುದೇವತೆ ಗಳನ್ನು ನೋಡುತ್ತಾಳೆ. ಅಕ್ಕ ತಂಗಿಯರು ಅವರ ಗಂಡಂದಿರನ್ನು ನೋಡುತ್ತಾಳೆ. ಅವನ ತಂದೆಯ ಎದುರಿಗೆ ಹೋಗಿ ನಿಂತರೆ, ಇತ್ತ ಬಂದರೆ ಮುಖವನ್ನು ಅತ್ತ ತಿರುಗಿಸುತ್ತಾ, ಅತ್ತ ಬಂದರೆ ಮುಖವನ್ನು ಇತ್ತ ತಿರುಗಿಸುತ್ತಾನೆ. ಆಗ ಗೌರಿಯು ದಕ್ಷಬ್ರಹ್ಮನ ಕೋಪವನ್ನು ಶಮನಗೊಳಿಸುವುದಕ್ಕಾಗಿ ಕೆಲವು ನೀತಿಗಳನ್ನು ಹೇಳುತ್ತಾಳೆ. ಅಪ್ಪಾ ನನ್ನ ಗಂಡನಾದ ಶಿವನ ಮೇಲೆ ದ್ವೇಷವನ್ನು ಬೆಳಸಬೇಡ. ವಿಷ್ಣು ಬ್ರಹ್ಮರ ಮಾತು ಕೇಳಿ ಕೆಡಬೇಡ. ಪರಶಿವನ ಮೇಲೆ ದ್ವೇಷ ಮಾಡಿ ಅನೇಕ ಮಂದಿ ಕೆಟ್ಟಿದ್ದಾರೆ. ಆದಕ್ಕೆ ಅವರ ಮೇಲೆ ಕದನ ಮಾಡಬೇಡ. ಇಲ್ಲಿಗೆ ಈ ಯಜ್ಞವನ್ನು ನಿಲ್ಲಿಸಿಬಿಡು. ಇಲ್ಲವೆಂದರೆ; ನಿನ್ನ ಹಣೆಯ ಬರಹವನ್ನು ಬರೆಯುವವರು ಬರುತ್ತಾರೆ ಎಂದು ದಾಕ್ಷಾಯಣಿಯು ತನ್ನ ತಂದೆಗೆ ಬುದ್ಧಿವಾದವನ್ನು ಹೇಳುತ್ತಾಳೆ. ದಕ್ಷಬ್ರಹ್ಮನು ಈ ಮಾತಿಗೆ ಉಡುವುದಕ್ಕೆ ಬಟ್ಟೆಯಿಲ್ಲದೆ ನಡುವಿಗೆ ಡಾಬು ಇಲ್ಲದೆ ಸ್ಮಶಾನ ಕಾಯುವಂತಹ ಆ ಬೂದಿ ಬಡುಕನಿಗೆ ನೀನು ಹೆಂಡತಿ. ಇಲ್ಲಿ ನೀನು ದೊಡ್ಡಸ್ತಿಕೆಯ ಮಾತನ್ನು ಆಡಬೇಡ. ನಾನು ಯಜ್ಞವನ್ನು ಮಾಡಿ ಶಿವನನ್ನು ಕೊಲ್ಲುತ್ತೇನೆ ಎಂದು ಬಾಯಿಗೆ ಬಂದ ಹಾಗೆ ಶಿವನನ್ನು ನಿಂದಿಸುತ್ತಾನೆ. ಆಗ ದಾಕ್ಷಾಯಿಣಿ ದಕ್ಷಬ್ರಹ್ಮನ ಮಾತು ಕೇಳಿ, ಶಿವಶಿವ ಈ ಶಿವ ನಿಂದನೆಯನ್ನು ಕೇಳಲಾರೆ ಹರಹರ ಎನ್ನುತ್ತ ತನ್ನ ಕಣ್ಣುಗಳನ್ನು ಮುಚ್ಚಿಕೊಳ್ಳುತ್ತಾಳೆ. ನನಗೆ ನೀನು ತಂದೆಯಲ್ಲವೆಂದು ಆರ್ಭಟಿಸಿ ಕಿಡಿಕಿಡಿಯನ್ನು ಕಾರುತ್ತ, ಅದೇ ಹೋಮದೊಳಗೆ ದಾಕ್ಷಾಯಣಿ ಬಿದ್ದು ತನ್ನ ಪ್ರಾಣ ತ್ಯಾಗವನ್ನು ಮಾಡಿದಳು. ಇದನ್ನೆಲ್ಲಾ ನೋಡುತ್ತಾ ನಿಂತಿರುವ ನಂದಿ ಮತ್ತು ನಾರದನು ದಕ್ಷಬ್ರಹ್ಮನನ್ನು ಹಿಡಿದುಕೊಂಡು ಈ ಯಜ್ಞದಲ್ಲಿ ನಾಶಮಾಡಬೇಕು ಎಂದು ನಂದಿಯು ಗರ್ಜಿಸಿದರೆ, ಆದಕ್ಕೆ ನಾರದನು ನಂದೀಶನಿಗೆ ದಾಕ್ಷಾಯಣಿಯು ಮರಣವನ್ನಪ್ಪಿದ್ದಕ್ಕೆ ನಾವು ನೊಂದುಕೊಳ್ಳುವುದು ಸಹಜ. ಆಕೆಯು ಆದಿಶಕ್ತಿಯು ಆಕೆಯನ್ನು ವರ್ಣಿಸುವುದಕ್ಕೆ ಆ ಪರಶಿವನಿಗೂ ಕೂಡಾ ಅಸಾಧ್ಯವಾಗಿ ರುವದು. ಆಕೆಯ ಮಹಿಮೆಯನ್ನು ಪ್ರಜ್ವಲಿಸುವುದಕ್ಕಾಗಿ ಈ ದಕ್ಷಬ್ರಹ್ಮನ ಸಂಬಂಧವಾದ ದೇಹವನ್ನು ಬಿಟ್ಟಿರುವಳು. ಅದು ಹಾಗಿರಲಿ ಈ ದಕ್ಷ ಬ್ರಹ್ಮನ ಸಮೇತವಾಗಿ ಮಾರ್ಬಲವನ್ನು (ರಾಕ್ಷಸರನ್ನು) ಸಂಹಾರ ಮಾಡುವುದಕ್ಕೆ ಆ

ಪರಶಿವನ ಅಪ್ಪಣೆಯಿಲ್ಲ. ಹೀಗೆಂದು ನಾರದರು ನಂದೀಶನಿಗೆ ಹೇಳಿ, ನಂದಿ ನಾರದರು ಮತ್ತು ಸ್ತ್ರೀಯರಿಂದ ಒಂದು ಗೂಡಿಕೊಂಡು ಕೈಲಾಸಕ್ಕೆ ಬಂದರು. ದಕ್ಷನ ಯಾಗದಲ್ಲಿ ದಾಕ್ಷಾಯಣಿಯು ಮಡಿದ ವಾರ್ತೆಯನ್ನು ಹೇಳಿದರು. ಈ ವಿಷಯವನ್ನು ಕೇಳಿದಾಕ್ಷಣ ಶಂಕರನ್ನು ರೌದ್ರವತಾರವನ್ನು ತಾಳಿ ಕಡಕಡೆ ಎಂದು ತನ್ನ ಅಗ್ನಿನೇತ್ರದಲ್ಲಿನ ಕಿಡಿಕಿಡಿಯನ್ನು ಉಗುಳುತ್ತಾನೆ. ಹಣೆಯ ಬೆವರು ತೆಗೆದು ಬಲಗಡೆಯ ನೆಲಕ್ಕೆ ಎಸೆದಾಗ ವೀರಭದ್ರನು ಹುಟ್ಟಿದನು. ತಕ್ಷಣ ಅತೀ ಸಿಟ್ಟಿನಿಂದ ನನ್ನನ್ನು ಹುಟ್ಟಿಸಲು ಕಾರಣವೇನು ಹೇಳು ಎಂದು ಕುಣಿಯುತ್ತಿರುವಾಗ, ಪರಮೇಶ್ವರನು ಈ ರೌದ್ರವತಾರವನ್ನು ನೋಡಲಾರದೆ ತನ್ನ ಎಡಗಡೆಯ ಬೆವರನ್ನು ತೆಗೆದು ನೆಲಕ್ಕೆ ಎಸೆದನು. ಆಗ ಭದ್ರಕಾಳಿಯೂ ಹುಟ್ಟಿದಳು. ಈಕೆಯು ಹುಟ್ಟಿದ ನಂತರ ವೀರಭದ್ರ ದೇವರಿಗೂ ಭದ್ರಕಾಳಿಗೂ ವಿವಾಹವನ್ನು ಮಾಡಿ ಶೂನ್ಯ ಸಿಂಹಾಸನದ ಮೇಲೆ ಕುಳ್ಳಿರಿಸುತ್ತಾನೆ. ಆಗ ವೀರಭದ್ರನಿಗೆ ರೌದ್ರಾವತಾರ ಕಡಿಮೆಯಾಯಿತು.

ವೀರಭದ್ರನ ಜನನದ ಬಗ್ಗೆ ಇನ್ನೊಂದು ಒಡಪು ಈ ರೀತಿ ಇದೆ; ಆಹಾಹ ವೀರ। ಆಹಾಹಾ ರುದ್ರ। ನಮ್ಮ ಶ್ರೀ ವೀರಭದ್ರನು ಹುಟ್ಟಿದ ಪರಿಯಂ ಪೇಳ್ವೆ। ನಮ್ಮ ಶಂಕರನ ಮಾವನಾದ ದಕ್ಷಬ್ರಹ್ಮನು । ಶಿವನೊಡನೆ ದ್ವೇಷ ಸಾಧಿಸಿ ಯಜ್ಞವನ್ನಾರಂಭಿಸಿದನು । ಅಷ್ಟದಿಕ್ಪಾಲಕ ಹರಿಬ್ರಹ್ಮ ಮೊದಲಾದವರು। ಸಮ್ಮಿಲಿತರಾಗಿ ಅಗ್ನಿ ಪುಟ ಮಾಡಲಿಕ್ಕೆ ಋಲ್ವೆಜರ ವೇದ ಮಂತ್ರಗಳನ್ನುಚ್ಛರಿಸುತ್ತಿದ್ದರಯ್ಯ। ದಕ್ಷ ಪುತ್ರಿಯರೆಲ್ಲ ಅತೀ ಸಡಗರದಿಂದ ಓಡಾಡುತ್ತಿದ್ದರಯ್ಯ । ಇದೇ ಸಮಯದಲ್ಲಿ ದಕ್ಷ ಪುತ್ರಿಯಾದ ದಾಕ್ಷಾಯಣಿಯು ಶಿವನಪ್ಪಣೆ ಇಲ್ಲದೆ, ದಕ್ಷನ ಯಜ್ಞ ಭೂಮಿಗೆ ಬಂದಳಯ್ಯ ತಂದೆಯಾದ ದಕ್ಷನು ಮಗಳನ್ನು ಅವಮಾನಗೊಳಿಸಿ । ಅವಳನ್ನು ತನ್ನ ಎಡಗಾಲಿನಿಂದೊದ್ದು ಹೊರಗೆ ಹಾಕಿದನು। ಇದನ್ನು ನೋಡಿ ದಾಕ್ಷಾಯಣಿಗೆ ಸಹಿಸಿಕೊಳ್ಳುವುದಾಗದೆ ಯಜ್ಞ ಕುಂಡಲದಲ್ಲಿ ಧುಮುಕಿಬಿಟ್ಟಳು. ಈ ವಾರ್ತೆ ಶಂಕರನಿಗೆ ಮುಟ್ಟಿದೊಡನೆ। ಶಂಕರನು ಅತಿ ಕೋಪದಿಂದ ಜಡೆ ಬಿಚ್ಚಿ ನೆಲಕ್ಕಪ್ಪಳಿಸಿ । ಉರಿ ನೇತ್ರವನ್ನು ತೆರೆಯಲು ಭಯಂಕರ ಜ್ವಾಲೆಯೊಳಗಿಂದ ಗಂಡುಗಲಿ, ಶ್ರೀ ವೀರಭದ್ರನು ಅವತರಿಸಿ। ವೀರ ಬೊಬ್ಬೆಯಿಡಲು ನಕ್ಷತ್ರಗಳು ದುರಿದವು। ಬ್ರಹ್ಮಾಂಡವು ನಡುಗಿತು ಸೂರ್ಯ ಚಂದ್ರರಿಗೆ ದಿಕ್ಕು ತೋಚದಾಯಿತು। ಇಂತಾಗಲಾಕ್ಷಣದಿ ಶ್ರೀ ವೀರಭದ್ರನು ದಕ್ಷನ ಯಜ್ಞ ಮಂಟಪ ಪ್ರವೇಶಿಸಿ ದಕ್ಷನ ಶಿರ ಕಡಿದು ನೆತ್ತರ ಹರಿಸಿದ ನಮ್ಮ ವೀರಭದ್ರ ಕರುಣಕಪಾಲ। ಕಡೆ ಕಡೆ॥.

ಮೇಲಿನ ಒಡಬಿನ ಪ್ರಕಾರ ವೀರಭದ್ರನ ಹುಟ್ಟು ಈ ರೀತಿಯಾಗಿದೆ. ಪರಮೇಶ್ವರನ ಮಾವನಾದ ದಕ್ಷಬ್ರಹ್ಮನು ನನಗೆ ನನ್ನ ಮಗಳು, ಅಳಿಯನಿಂದ ತುಂಬಾ ಅಪಮಾನ (ಅವಮಾನ)ವಾಗಿದೆ. ಅದಕ್ಕೆ ಅವನಿಗೆ ಮಾರಣ ಹೋಮವನ್ನು ಮಾಡಿದ್ದೇನೆ ಎಂದು ಹರಿಸುರ ಬ್ರಹ್ಮಾದಿಗಳಿಂದ ಮನ್ನಣೆಯನ್ನು ಪಡೆದುಕೊಂಡು ಹೋಮವನ್ನು ಹಮ್ಮಿಕೊಂಡಿರುತ್ತಾರೆ. ಎಲ್ಲಾ ಋಷಿಮುನಿಗಳು ಸೇರಿರುವಂತಹ ಸಂದರ್ಭದಲ್ಲಿ ಮತ್ತು ಎಲ್ಲಾ ಬಂಧು-ಮಿತ್ರರು ನೆರೆದಿರುವಾಗ ಅಲ್ಲಿ ಶಿವನ ಬಲವಂತದ ಅಪ್ಪಣೆಯಿಂದ ಭೂಮಿಗೆ ದಾಕ್ಷಾಯಣಿ ಬಂದಳು. ಆಗ ಅಲ್ಲಿ ಎಲ್ಲರೂ ನೆರೆದಿರುವಂತ ಸನ್ನಿವೇಶದಲ್ಲಿ ದಕ್ಷಬ್ರಹ್ಮನು ಮಗಳಿಗೆ ಎಡಗಾಲಿನಿಂದ ಒದ್ದನು. ಈ ಅವಮಾನವನ್ನು ತಾಳಲಾರದೆ ದಾಕ್ಷಾಯಣಿಯು ಆ ಅಗ್ನಿ ಕುಂಡಲದಲ್ಲಿ ಹಾರಿ ಪ್ರಾಣಬಿಟ್ಟಳು. ಈ ವಾರ್ತೆಯನ್ನು ಕೇಳಿದ ಪರಮೇಶ್ವರನು ಭಯಂಕರ ಕೋಪದಿಂದ

ಜಡೆಬಿಚ್ಚಿ ನೆಲಕ್ಕಪ್ಪಳಿಸಿ, ಉರಿ ನೇತ್ರವನ್ನು ತೆರೆಯಲು ವೀರಭದ್ರನು ಜನನವಾಯಿತು. ವೀರಭದ್ರ ಹುಟ್ಟಿದ ತಕ್ಷಣ ಆವನ ರೌದ್ರಾವತಾರಗಳಿಗೆ ನಕ್ಷತ್ರಗಳುದುರಿದವು. ಬ್ರಹ್ಮಾಂಡವು ನಡುಗಿತು. ಸೂರ್ಯಚಂದ್ರರಿಗೆ ದಿಕ್ಕು ತೋಚದಾಯಿತು. ನಂತರ ಈ ದೃಶ್ಯವನ್ನು ನೋಡಿ, ಶಿವನು ಭದ್ರಕಾಳಿಯನ್ನು ಹುಟ್ಟಿಸಿ ವೀರಭದ್ರನ ಸಿಟ್ಟನ್ನು ಶಾಂತಗೊಳಿಸಿದನು.

ಒಟ್ಟಾರೆಯಾಗಿ ಈ ಮೇಲೆ ಹೇಳಿದ ಕತೆ ಮತ್ತು ಒಡಪುಗಳನ್ನು ಗಮನಿಸಿದಾಗ ನಮಗೆ ಈ ಅಂಶಗಳು ಸ್ಪಷ್ಟವಾಗುತ್ತವೆ. ವೀರಭದ್ರನ ಜನನದ ಮೊದಲು ದಕ್ಷಬ್ರಹ್ಮನು ದರ್ಪದಿಂದ ಶಿವನ ಒಡ್ಡೋಲಗಕ್ಕೆ ಬಂದು ಅವಮಾನಿತನಾಗುತ್ತಾನೆ. ವಿಷ್ಣುವಿನ ಹತ್ತಿರ ಬಂದು ಶಿವನಿಗೆ ಮಾರಣ ಹೋಮವನ್ನು ಮಾಡುತ್ತೇನೆ, ನನಗೆ ನೀವು ಸಹಾಯ ಮಾಡಬೇಕು ಎಂದು ಕೇಳುತ್ತಾನೆ. ವಿಷ್ಣು ಅತೀಯಾದ ಬುದ್ಧಿಯನ್ನು ಉಪಯೋಗಿಸಿಕೊಂಡು ಏಕ ಕಾಲದಲ್ಲಿ ಶಿವನ ಮತ್ತು ದಕ್ಷಬ್ರಹ್ಮನ ನಾಶಕ್ಕಾಗಿ ಯೋಚಿಸುತ್ತಾನೆ. ಹಾಗಾಗಿ ದಕ್ಷಬ್ರಹ್ಮನಿಗೆ ಸಹಾಯ ಮಾಡಲು ಒಪ್ಪುತ್ತಾನೆ. ವಿಷ್ಣುವಿಗೆ ಶಿವನ ನಾಶ ಬಹು ಮುಖ್ಯವಾಗಿರುತ್ತದೆ. ಏಕೆಂದರೆ ದೇವಾನು ದೇವತೆಗಳು ಶಿವನೆ ಹೆಚ್ಚು, ಶ್ರೇಷ್ಠನೆಂದು, ಶಿವನೇ ಮೇಲು ಎಂದು ಶಿವನಿಗೆ ಜೈಕಾರ ಹಾಕುತ್ತಿರುತ್ತಾರೆ. ವಿಷ್ಣು ಹೊಟ್ಟೆಕಿಚ್ಚಿನಿಂದ ಶಿವನ ವೈರತ್ವವನ್ನು ಪಡೆದು ಕೊಂಡಿರುತ್ತಾನೆ. ಈ ವೈರತ್ವ ಕ್ರಮೇಣ ಹೆಚ್ಚಾಯಿತೇ ವಿನಹ ಕಡಿಮೆಯಾಗಲಿಲ್ಲ. ದಕ್ಷಬ್ರಹ್ಮನು ವಿಷ್ಣುವಿಗೆ ಶಿವನಿಗೆ ಮಾರಣ ಹೋಮ ಇಟ್ಟಿದ್ದೇನೆ ಅನ್ನುವುದೊಂದೇ ಬೇಕಾಗಿತ್ತು ಹಾಗಾಗಿ ಒಪ್ಪುತ್ತಾನೆ. ಇವನು ಅತೀಯಾದ ಸಂತೋಷದಿಂದ ಹೋಮವನ್ನು ಪ್ರಾರಂಭಿಸಿದಾಗ ವಿಷ್ಣು ಈ ಯಜ್ಞಕ್ಕೆ ದದೀಚಿ ಮುನಿಯನ್ನು ಕರೆಯಲು ಹೇಳಿದಾಗ ಆಗ ಸೇವಕರಿಂದ ದದೀಚಿ ಮುನಿಯನ್ನು ಕರೆಯಿಸಿಕೊಂಡು ಮುನಿಗಳು ಶಿವನು ಬಾರದೆ ಇದ್ದುದರ ಸಂದರ್ಭವನ್ನು ತಿಳಿದುಕೊಂಡು ನೀನು ತಪ್ಪು ಮಾಡುತ್ತಿರುವೆ ಎಂದು ಹೇಳುತ್ತಾನೆ. ಇದನ್ನು ಕೇಳದೆ ಮುನಿಗಳಿಗೆ ಆಡಬಾರದ ಮಾತುಗಳೆಲ್ಲವನ್ನು ಆಡುತ್ತಾನೆ. ಆಗ ಮುನಿಯು ದಕ್ಷಬ್ರಹ್ಮನಿಗೆ ಶಾಪವನ್ನುಕೊಟ್ಟು ಹೋಗುವರು. ದಾಕ್ಷಾಯಣಿಯು ಗಂಡನ ಮಾತಿಗೆ ಬೆಲೆಕೊಡದೆ ತಂದೆಯ ಯಜ್ಞಕ್ಕೆ ಬಂದು ಅವಮಾನಿತಳಾಗುತ್ತಾಳೆ. ಅವಳು ತನ್ನ ತಂದೆ ನಿರ್ಮಿಸಿದ ಅಗ್ನಿಕುಂಡಕ್ಕೆ ಬಿದ್ದು ಆತ್ಮಾರ್ಪಣೆ ಮಾಡಿಕೊಳ್ಳುತ್ತಾಳೆ. ಹೆಣ್ಣು ತನ್ನ ಸ್ವಾಭಿಮಾನಕ್ಕೆ ಕುಂದುಂಟಾದಾಗ ಮತ್ತು ಅವಮಾನ ಆದಾಗ ಜೀವನದಲ್ಲಿ ಜಿಗುಪ್ಸೆಯನ್ನು ಪಟ್ಟುಕೊಂಡು ಅವಳು ಪ್ರಾಣವನ್ನು ಕಳೆದುಕೊಳ್ಳುವಳು. ಅದೇ ರೀತಿ ದ್ರಾಕ್ಷಾಯಣಿಯು ಕೂಡ ತನ್ನ ಗಂಡನಿಗೆ ಆದ ಅವಮಾನ ಮತ್ತು ತನ್ನ ಸ್ವಾಭಿಮಾನಕ್ಕೆ ಆದಂತಹ ಕುಂದಿಗೆ ಮತ್ತು ದಕ್ಷಬ್ರಹ್ಮನ ಧ್ವಂಸ ಮಾಡಲು ದಾಕ್ಷಾಯಣಿಯು ಆತ್ಮಾರ್ಪಣೆ ಮಾಡಿಕೊಳ್ಳುವಳು. ಇದನ್ನು ಶಿವನು ತಿಳಿದು ಕೋಪಗ್ರಸ್ಥನಾಗಿ ತನ್ನ ಉರಿನೇತ್ರದಿಂದ ವೀರಭದ್ರನ ಜನನವಾಗುತ್ತದೆ.

ಮೇಲಿನ ವೀರಭದ್ರನ ಹುಟ್ಟು, ದಕ್ಷಬ್ರಹ್ಮನ ದರ್ಪ ಹಾಗೂ ವಿಷ್ಣುವಿನ ಕುತಂತ್ರಗಳನ್ನು ಗಮನಿಸಿದಾಗ ನಮಗೆ ಕೆಲವು ಅಂಶಗಳು ಕಂಡು ಬರುತ್ತವೆ. ದಕ್ಷಬ್ರಹ್ಮನು ತಪಸ್ಸು ಮಾಡುವ ಮುಖಾಂತರ ಶಿವನನ್ನು ಒಲಿಸಿಕೊಂಡು ದಕ್ಷಾವತಿಯೆಂಬ ರಾಜ್ಯವನ್ನು ಪಡೆದುಕೊಳ್ಳುತ್ತಾನೆ. ನಂತರ ಶಿವನಿಗೆ ತನ್ನ ಮಗಳಾದ ದಾಕ್ಷಾಯಣಿಯನ್ನು ಮದುವೆ ಮಾಡಿಕೊಡುತ್ತಾನೆ. ತಾನು ಆರಂಭಿಸುವ ಯಜ್ಞಕ್ಕೆ ಶಿವನನ್ನು ಕರೆಯಲು ಹೋದಾಗ ಶಿವನ ಒಡ್ಡೋಲಗದಲ್ಲಿ ಅವನಿಗೆ ಅವಮಾನವಾಗುತ್ತದೆ. ಆಗ

ಶಿವನನ್ನು ನಿಂದಿಸಿ, ತನ್ನ ಪಟ್ಟಣಕ್ಕೆ ಬರುತ್ತಾನೆ. ವಿಷ್ಣುವಿನ ಸಹಾಯ ಪಡೆದು ಶಿವನನ್ನು ನಾಶ ಮಾಡಲು ಯಜ್ಞವನ್ನು ಕೈಗೊಳ್ಳುತ್ತಾನೆ. ಆ ಯಜ್ಞಕ್ಕೆ ದಾಕ್ಷಾಯಣಿಯು ಶಿವನ ಅಪ್ಪಣೆಯನ್ನು ಪಡೆದು ಬಂದು ತಂದೆಯನ್ನು ಯಜ್ಞವನ್ನು ನಿಲ್ಲಿಸಲು ಕೇಳುತ್ತಾಳೆ. ಆಗ ದಕ್ಷಬ್ರಹ್ಮನು ಶಿವನನ್ನು ನಿಂದಿಸುತ್ತಾನೆ. ಜೊತೆಗೆ ದಾಕ್ಷಾಯಣಿಗೆ ಅವಮಾನವನ್ನು ಮಾಡುತ್ತಾನೆ. ಆ ಅಪಮಾನವನ್ನು ತಾಳಲಾರದೆ ಅವಳು ಯಜ್ಞ ಕುಂಡಲದಲ್ಲಿ ಬಿದ್ದು ಆತ್ಮಾರ್ಪಣೆ ಮಾಡಿಕೊಳ್ಳುತ್ತಾಳೆ. ಶಿವನಿಗೆ ಈ ವಿಷಯ ತಿಳಿದು ವೀರಭದ್ರನ ಜನನಕ್ಕೆ ಕಾರಣವಾಗುತ್ತದೆ. ಶಿವ ಮತ್ತು ದಕ್ಷಬ್ರಹ್ಮನ ದ್ವೇಷದಿಂದಾಗಿ ದಾಕ್ಷಾಯಣಿಯ ಆಹುತಿಯಾಗುತ್ತದೆ. ದಾಕ್ಷಾಯಣಿಯು ತನಗೆ ಆದ ಅಪಮಾನಕ್ಕಾಗಿ ತನ್ನ ತಂದೆಯ ರಕ್ತದಿಂದ ಹುಟ್ಟಿರುವ ಈ ದೇಹವನ್ನು ಪರಿತ್ಯಜಿಸಬೇಕೆಂದು ನಿರ್ಧಾರ ಕೈಗೊಳ್ಳುತ್ತಾಳೆ. ಶಿವನು ಸಹ ದಕ್ಷಬ್ರಹ್ಮನ ಮೇಲಿನ ಸೇಡನ್ನು ತೀರಿಸಿಕೊಳ್ಳಲು ವೀರಭದ್ರನ ಸೃಷ್ಟಿಯನ್ನು ಮಾಡುತ್ತಾನೆ. ಈ ನಡುವೆ ಇಲ್ಲಿರುವ ವೈಷ್ಣವ ಮತ್ತು ಶೈವ ಪಂಥಗಳ ಜಗಳಗಳಿಂದಾಗಿ ದಕ್ಷಬ್ರಹ್ಮನಿಗೆ ಸಹಾಯ ಮಾಡುವುದರ ಮೂಲಕ ಶಿವನ ನಾಶಕ್ಕೆ ಪ್ರಯತ್ನಿಸುವುದನ್ನು ಕಾಣಬಹುದು.

ಶಿವನ ಬೆವರಿನಿಂದ ಹುಟ್ಟಿದ ವೀರಭದ್ರನು ದಕ್ಷ ಬ್ರಹ್ಮನ ಅಹಂಕಾರವನ್ನು ಮೆಟ್ಟಿ ನಿಲ್ಲುತ್ತಾನೆ. ಆ ಮುಖಾಂತರ ಅವನ ಯಜ್ಞವನ್ನು ನಾಶ ಮಾಡಿ, ದಕ್ಷ ಬ್ರಹ್ಮನ ಶಿರಚ್ಛೇದನ ಮಾಡುತ್ತಾನೆ. ದಕ್ಷಬ್ರಹ್ಮನ ಹೆಂಡತಿ ವೀರಭದ್ರನನ್ನು ತನ್ನ ಮುತ್ತೈದೆತನದ ಬಗೆಗೆ ಕೇಳಿದಾಗ ದಕ್ಷಬ್ರಹ್ಮನ ಮೃತದೇಹಕ್ಕೆ ಟಗರಿನ ತಲೆಯನ್ನು ಅಂಟಿಸುವ ಮುಖಾಂತರ ಜೀವದಾನವನ್ನು ಮಾಡುತ್ತಾನೆ. ಈ ವಿಷಯವನ್ನು ನಾರದನ ಮುಖಾಂತರ ತಿಳಿದ ಶಿವನು ಮಗನ ಶೌರ್ಯ-ಸಾಹಸವನ್ನು ಮೆಚ್ಚಿ ನಿನ್ನ ಪವಾಡ ದೊಡ್ಡದು, ನರ ಮನುಷ್ಯರು ಎಲ್ಲಿಯವರೆಗೆ ಈ ಭೂಮಂಡಲದಲ್ಲಿ ಇರುವರೋ ಅಲ್ಲಿಯವರೆಗೆ ನಿನ್ನ ಹೆಸರು ಅಚ್ಚಳಿಯದೆ ಉಳಿಯಲಿ ಎಂದು ಆಶೀರ್ವಾದವನ್ನು ಮಾಡುತ್ತಾನೆ.

ವೀರಭದ್ರನು ತನ್ನ ಈ ಮೇಲಿನ ಕಾರ್ಯಗಳಿಂದಾಗಿ ಭೂಲೋಕದಲ್ಲಿ ದೈವವಾಗಿ ಉದ್ಭವ ಗೊಳ್ಳುತ್ತಾನೆ. ಕರ್ನಾಟಕದಾದ್ಯಂತ ದೇವಾಲಯಗಳು ಹುಟ್ಟಿಕೊಂಡು, ಆರಾಧನೆಗೊಳ್ಳುತ್ತಿದ್ದಾನೆ. ವೀರಭದ್ರ ದೇವಾಲಯಗಳ ಮುಂದುಗಡೆ ಅಗ್ನಿಕುಂಡವಿರುತ್ತದೆ. ವರ್ಷಕ್ಕೊಂದು ಬಾರಿ ಅಗ್ನಿಕುಂಡ ನಡೆಯುತ್ತದೆ. ಆಗ ಭಕ್ತರು ಅಗ್ನಿಯನ್ನು ಹಾಯುತ್ತಾರೆ ಅಥವಾ ತುಳಿಯುತ್ತಾರೆ. ಇದು ವೀರಭದ್ರನು ದಕ್ಷಯಾಗವನ್ನು ನಾಶ ಮಾಡಿದ ಸಂಕೇತವನ್ನು ಪ್ರತಿಬಿಂಬಿಸುತ್ತವೆ. ಹಾಗೂ ವೀರಶೈವರ ಮದುವೆಗಳಲ್ಲಿ ನಡೆಯುವ ಗುಗ್ಗುಳಕ್ಕೂ ಇದೇ ಅರ್ಥ. ವೀರಭದ್ರನು ವೀರಶೈವ ಸಮಾಜದಲ್ಲಿರುವ ಪಂಚಗೋತ್ರ ಗಳಲ್ಲಿರುವ ವೀರನಂದಿ, ಭೃಂಗಿ, ವೃಷಭ ಮತ್ತು ಸ್ಕಂದ ಇವುಗಳಲ್ಲಿ ಒಂದಾದ ವೀರಗೋತ್ರಕ್ಕೆ ಅಧಿಪತಿಯಾಗಿದ್ದಾನೆ. ಪಂಚಪೀಠಗಳಲ್ಲೊಂದಾದ ಶ್ರೀಮದ್ ಭಗವತ್ಪಾದ ರೇಣುಕಾಚಾರ್ಯರು ಪರಂಪರಾಗತವಾದ ಮಠಗಳಲ್ಲಿ ವೀರಭದ್ರ ಮೂರ್ತಿಯು ಆರಾಧ್ಯ ದೇವತೆಯಾಗಿದೆ. ಇಂದಿನ ವೀರಶೈವ ಧರ್ಮಕ್ಕೂ ಮತ್ತು ವೀರಭದ್ರದೇವರಿಗೂ ಇರುವ ನಿಕಟ ಸಂಬಂಧ, ಶ್ರೀ ರೇಣುಕಾಚಾರ್ಯರ ಮಠಗಳಾದ ಶ್ರೀ ಶಿವಗಂಗಾ ಮೇಲಣಗವಿ ವೀರ ಸಿಂಹಾಸನಮಠ, ಶ್ರೀ ರಂಭಾಪುರಿ ವೀರಸಿಂಹಾಸನ ಮಠ, ಶ್ರೀ ಸುತ್ತೂರು ವೀರ ಸಿಂಹಾಸನಮಠಗಳಿಂದ ತಿಳಿದುಬರುತ್ತದೆ.

ಅಧ್ಯಾಯ - ೬

# ವೀರಭದ್ರ ದೈವದ ಸಾಂಸ್ಕೃತಿಕ ಚರಿತ್ರೆ

ವೀರಭದ್ರನು ಶಿವನ ಗಣ ದೇವತೆಗಳಲ್ಲಿ ಅತಿ ಮುಖ್ಯನಾದವನು. ಅಲ್ಲದೆ ಶಿವನ ಮೂರು ಮಂದಿ ಪುತ್ರರಲ್ಲಿ ಒಬ್ಬನೆಂದು ಪರಿಗಣಿತನಾಗಿದ್ದಾನೆ. ಇವನ ಅವತಾರಗಳು ಶಿವನ ಪಂಚವಂಶ ಲೀಲೆಗಳಲ್ಲಿ ಹನ್ನೆರಡನೆ ಲೀಲೆ ಎಂದು, ಶಿವ ಪುರಾಣಗಳಲ್ಲಿ ಮತ್ತು ಶಿವಾಗಮಗಳಲ್ಲಿ ಹೇಳಿದೆ. ವೀರಭದ್ರನ ದಕ್ಷ ಯಾಗವನ್ನು ನಾಶ ಮಾಡುವ ಸಲುವಾಗಿ ಶಿವನ ಹಣೆಗಣ್ಣಿನಿಂದ ಜನಿಸಿದನೆಂದು ಪ್ರತೀತಿ ಇದೆ. ಕೆಲವು ಗ್ರಂಥಗಳಲ್ಲಿ ಶಿವನು ಪತ್ನಿ ವಿಯೋಗದಿಂದುಂಟಾದ ಕೋಪದಿಂದ ತನ್ನ ಜಡೆಯನ್ನು ಶಿಖರಕ್ಕೆ ಅಪ್ಪಳಿಸಲು ಆದರಿಂದ ವೀರಭದ್ರನು ಜನಿಸಿದನೆಂದು ಹೇಳುತ್ತಾರೆ. ಶೈವ ಧರ್ಮದ ಅಂಗವಾದ ವೀರಶೈವ ಧರ್ಮಗಳಲ್ಲಿ ವೀರಭದ್ರನಿಗೆ ಅಗ್ರಸ್ಥಾನವಿದೆ. ಅಲ್ಲದೆ ವೇದ ಪ್ರಾಚೀನವಾದ ಶೈವ ಧರ್ಮದಲ್ಲಿ ಈತನು ಬಹುಮುಖ್ಯ ವ್ಯಕ್ತಿ. ದಕ್ಷಿಣ ಭಾರತದಲ್ಲಿ ಪ್ರಸಿದ್ಧವಾದ ಹಲವು ವೀರಭದ್ರ ದೇವಾಲಯಗಳಿವೆ. ಅವುಗಳಲ್ಲಿ ಅತಿಮುಖ್ಯವಾದವು ಶ್ರೀಶೈಲದ ನಾಗಲೋಟ, ಕಂಚಿಯ ಕಲ್ಲುಮಠ, ನಾಗಮಂಗಲದ ವೀರಭದ್ರ, ರಾಚೋಟಿಯ ವೀರಭದ್ರ, ಬೀರೂರು ವೀರಭದ್ರ, ಬೆಂಗಳೂರಿನ ಪ್ರಳಯಕಾಲ ವೀರಭದ್ರ, ಓರಂಗಲ್ಲಿನ ವೀರಭದ್ರ, ಕಾರ್ಕಳದ ವೀರಭದ್ರ, ಕೆಳದಿಯ ವೀರಭದ್ರ, ಗೋಕರ್ಣದ ವೀರಭದ್ರ, ಸಿಂಗಟಾಲೂರಿನ ವೀರಭದ್ರ, ಹೊಸಪೇಟೆಯ ಸಣ್ಣಕ್ಕಿ ವೀರಭದ್ರ, ಹಂಪಿಯ ಮಾತಂಗ ಮತ್ತು ಉದ್ದಾನ ವೀರಭದ್ರ, ಕಣವಿ ವೀರಭದ್ರ ಮೊದಲಾದವುಗಳನ್ನು ಉದಾಹರಿಸಬಹುದು. ವೀರಭದ್ರನ ಬಗೆಗೆ ಅನೇಕ ಐತಿಹ್ಯಗಳು, ಪುರಾಣ ಕಥೆಗಳು ಮತ್ತು ಪವಾಡಗಳು ಸಿಗುತ್ತವೆ. ಅವುಗಳು ಹೀಗೆ ಇವೆ;

೧) ಮೊಟ್ಟ ಮೊದಲನೆಯ ಪವಾಡವೆಂದರೆ; ದಕ್ಷಬ್ರಹ್ಮನ ಯಜ್ಞ ಕುಂಡವನ್ನು ನಾಶಮಾಡಿ ದಕ್ಷನ ಶಿರಚ್ಛೇದನವನ್ನು ಮಾಡಿ ಅವನಿಗೆ ಕುರಿಯ ತಲೆಯನ್ನು ಇಟ್ಟಂತಹ ಪವಾಡವನ್ನು ನಾವು ಇಲ್ಲಿ ನೋಡಬಹುದು. ಮೊದಲು ವೀರಭದ್ರನು ದಕ್ಷನ ಯಜ್ಞಶಾಲೆಗೆ ಹೋಗುತ್ತಾನೆ. ಕೈಯಲ್ಲಿ ಖಡ್ಗ ತ್ರಿಶೂಲ, ಬಿಚ್ಚುಗತ್ತಿ, ಬಿದುರಗತ್ತಿ, ಚಂದ್ರಬಾಣ, ಸೂರ್ಯಬಾಣ, ಅಗ್ನಿಬಾಣ ಇವುಗಳನ್ನೆಲ್ಲಾ ಹಿಡಿದುಕೊಂಡು ಬರುವಾಗ ಭೂಮಿಯು ಇಬ್ಭಾಗವಾಯಿತು. ಸಪ್ತಕುಲ ಪರ್ವತಗಳು ಅಲ್ಲಾಡಿದವು. ಆದಿಶೇಷನ ತಲೆ ಬಾಗಿತು. ವಿಷ್ಣು ಈ ಭೂಮಿಯನ್ನು ಹೊರಲಾರದೆ ಹೊರಳಾಡಿದನು. ಆಗ ವೀರಭದ್ರ ದೇವರು ಯಜ್ಞ ಶಾಲೆಗೆ ಬರುವ ಸಂಭ್ರಮದಲ್ಲಿ ಯಾಗಶಾಲೆಯನ್ನೇ ಹೊಕ್ಕು ಅಲ್ಲಿ ಕಾಯುತ್ತಿರುವ ಭೈರವನನ್ನು ಕಾಲಿನಿಂದ ಒದ್ದು, ಚೌಡೇಶ್ವರಿಯ ಕಿವಿಯನ್ನು ಕಿತ್ತು ಲಕ್ಷ್ಮೀದೇವಿಯ ಮುಂದಲೆಯನ್ನು ಮತ್ತು ಸರಸ್ವತಿಯ ಮೂಗನ್ನು ಕೊಯ್ದು ವಿಘ್ನೇಶ್ವರನ ಹೊಟ್ಟೆಯನ್ನು ಒಡೆದನು. ಆಗ ವಿಘ್ನೇಶ್ವರನು ಅಲ್ಲೇ ಇದ್ದ ಹಾವನ್ನು ಹೊಟ್ಟೆಗೆ ಸುತ್ತಿಕೊಂಡು ಹೋಗುವನು. ಸೂರ್ಯ ಚಂದ್ರಾದಿಗಳು ದಿಕ್ಕು ದೆಸೆ ಇಲ್ಲದೆ ಪರಾರಿಯಾದರು. ಪರಾರಿಯಾದವರನ್ನು ಹಿಡಿದು ತಂದು, ಸೂರ್ಯನ ಹಲ್ಲು ಮುರಿದನು.

ಚಂದ್ರನನ್ನು ಸದೆಬಡಿದನು. ವೀರೇಶನ ಬಾಣದಿಂದ ವಿಷ್ಣುವನ್ನು ಕೆಡವಲು ಹರಿಸುರ ಬ್ರಹ್ಮಾದಿಗಳು ದಿಕ್ಕೆಟ್ಟು ಓಡಲು ಪ್ರಾರಂಭಿಸಿದರು. ಇದೆಲ್ಲವನ್ನು ನೋಡುತ್ತಾ ನಿಂತಿರುವ ದಕ್ಷಬ್ರಹ್ಮನು ವೀರಭದ್ರನ ಹತ್ತಿರ ಬಂದು ನೀನು ಯಾರು, ನೀನು ಯಾರ ಬಸುರಿನಿಂದ ಬಂದಿರುವೆ ಎಂದು ಕೇಳುತ್ತಾನೆ. ಆಗ ವೀರಭದ್ರನು ನಾನು ಶಿವನ ರೌದ್ರಾವತಾರವನ್ನು ತಾಳಿದಾಗ ಬಂದಿರುವಂತಹ ಬೆವರಿನಿಂದ ಹುಟ್ಟಿದವನು ಎಂದು ಹೇಳುತ್ತಾನೆ. ಇಲ್ಲಿಗೆ ಬಂದ ಕಾರಣವೇನು?, ನನ್ನ ಯಜ್ಞವನ್ನು ನಾಶ ಮಾಡಿದ ಉದ್ದೇಶವೇನು? ಎಂದು ಕೇಳಿದನು. ಆದಕ್ಕೆ ವೀರಭದ್ರನು ನನ್ನ ತಂದೆಯ ಪಾಲಿನ ಹರ್ವಿಭಾಗವನ್ನು ಕೊಡಬೇಕು (ಹರ್ವಿಭಾಗ = ಉಲ್ಪಿ : ಗೋಧಿಹಿಟ್ಟು, ಬೆಲ್ಲ, ಅಕ್ಕಿ, ಬೇಳೆ, ಒಂದು ಕೊಬ್ರಿ ಬಟ್ಟಲು, ಅಡಿಕೆ ಎಲೆ) ಎಂದು ಕೇಳಿದನು. ದಕ್ಷನು ಆ ಸ್ಮಶಾನ ಕಾಯುತ್ತಿರುವ ಬೂದಿ ಬಡುಕನ ಮಗನಾದ ಬಾಯಿ ಬಡುಕನನ್ನು ಕತ್ತು ಹಿಡಿದು ನೂಕಿರಿ ಎಂದನು. ಆಗ ವೀರಭದ್ರನಿಗೆ ಕೋಪ ಮಿತಿ ಮೀರಿತು. ಇನ್ನು ತಡ ಮಾಡಕೂಡದು ಎಂದು ತನ್ನ ಕೈಯಲ್ಲಿದ್ದ ಗರಗಸ ಕತ್ತಿಯಿಂದ ದಕ್ಷಬ್ರಹ್ಮನ ಶಿರವನ್ನು ಕಡಿದನು. ಉಳಿದ ಎಲ್ಲಾ ದೇವತೆಗಳು ಅದನ್ನು ಆಶ್ಚರ್ಯಕರದಿಂದ ನೋಡುತ್ತಿರುವಾಗ, ದಕ್ಷಬ್ರಹ್ಮನ ಹೆಂಡತಿ 'ಪ್ರಸುತಾದೇವಿ' ಬಂದು ವೀರಭದ್ರನ ಕಾಲಿಗೆ ಬಿದ್ದು, ಹೇ ದೇವಾ ನನ್ನ ಗಂಡನ ದುರಹಂಕಾರದ ಮಾತಿನಿಂದ ಅವನ ಅಂತ್ಯವನ್ನು ಕಂಡುಕೊಂಡ. ಆದರೆ ನನಗೆ ನನ್ನ ಮುತ್ತೈದೆಯ ಭಾಗ್ಯವನ್ನು ಕಿತ್ತುಕೊಳ್ಳಬೇಡ. ನನ್ನನ್ನು ಸುಮಂಗಲಿಯನ್ನಾಗಿ ಮಾಡು ತಂದೆ ಎಂದು ಪರಿಪರಿಯಾಗಿ ಬೇಡಿಕೊಂಡಳು. ಆಗ ದಕ್ಷನ ರುಂಡವು ಯಜ್ಞದಲ್ಲಿ ಸುಟ್ಟು ಬೂದಿಯಾಗಿರುತ್ತದೆ. ಅದರ ಬದಲಾಗಿ ವೀರಭದ್ರನು ಅಲ್ಲಿದ್ದ ಒಂದು ಕುರಿಯ ತಲೆಯನ್ನು ಕಡಿದು, ಅವನು ಮುಂಡಕ್ಕೆ ಜೋಡಿಸಿ, ಜೀವದಾನವನ್ನು ಮಾಡುತ್ತಾನೆ. ಅಲ್ಲಿಂದ ವೀರಭದ್ರನು ದಕ್ಷಬ್ರಹ್ಮನನ್ನು ಶಿವನ ಸಮ್ಮುಖದಲ್ಲಿ ಹೆಡೆಮುರಿ ಕಟ್ಟಿ ತಂದು ನಿಲ್ಲಿಸುತ್ತಾನೆ. ದಕ್ಷಬ್ರಹ್ಮನು ಶಿವನನ್ನು ವಿವಿಧ ನಾಮಾವಳಿಗಳಿಂದ ಪ್ರಾರ್ಥಿಸುತ್ತಾನೆ. ಆಗ ದಯಾಮಯನಾದ ಶಿವನು ದಕ್ಷಬ್ರಹ್ಮನನ್ನು ಕ್ಷಮಿಸುತ್ತಾನೆ. ದಕ್ಷಬ್ರಹ್ಮನ ಯಜ್ಞವನ್ನು ನಾಶಮಾಡಿ ಅವನಿಗೆ ಬುದ್ಧಿ ಕಲಿಸಿದ ತನ್ನ ಪುತ್ರನಾದ ವೀರಭದ್ರನ ಶೌರ್ಯವನ್ನು ಮೆಚ್ಚಿ ಅವನನ್ನು ಪ್ರಶಂಸಿಸುತ್ತಾನೆ. ಇದು ವೀರಭದ್ರನ ಅವತಾರದ ಪೌರಾಣಿಕ ಕಥೆ.

೨. ವ್ಯಾಳಾಸುರನೆಂಬ ರಾಕ್ಷಸ ಬ್ರಹ್ಮನಿಂದ ವರಪಡೆದು ಸಕಲ ಲೋಕಗಳಿಗೆ ಮೃತ್ಯು ಸ್ವರೂಪನಾಗಿ ನಿಂತಿದ್ದನು. ಎಲ್ಲ ಮುನಿಗಳು, ಗರಡರು, ಗಂದರ್ವ, ಯಕ್ಷ ಕಿಂಕರರು ಅಲ್ಲದೆ ಮುವತ್ಮೂರು ಕೋಟಿ ದೇವತೆಗಳು ಗಂಗಾಧರನ ಹತ್ತಿರ ಬಂದು ವ್ಯಾಳಾಸುರನೆಂಬ ರಾಕ್ಷಸನ ಬಗೆಗೆ ಹೇಳುತ್ತಾರೆ. ನಮಗೆ ಸಕಲ ಗುಣಗಳಿದ್ದರೂ ಕೂಡ ಇಂದ್ರನ ವಚನವನ್ನು, ಅಗ್ನಿಯ ನಾಲಿಗೆಯನ್ನು, ಯಮನ ದಂಡವನ್ನು ವಾಯುವಿನ ಗದೆಯನ್ನು, ಕುಬೇರನ ಖಡ್ಗವನ್ನು, ಅನೇಕ ದೇವತೆಗಳ ಶಕ್ತಿಯನ್ನು ಕುಂಠಿತಗೊಳಿಸಿದ್ದಾನೆ. ಅವನಿಂದ ನಮಗೆ ತುಂಬಾ ತೊಂದರೆಯಾಗುತ್ತಿದೆ ಎಂದು ದೇವಾನು ದೇವತೆಗಳು ಹೇಳುತ್ತಾರೆ. ಆಗ ಶಿವನು ತನ್ನ ಮಗನಾದ ಶ್ರೀ ವೀರಭದ್ರನನ್ನು ಕರೆದು, ನೀನು ಹೋಗಿ ದುಷ್ಟನಾದ ವ್ಯಾಳಾಸುರನೆಂಬ ರಾಕ್ಷಸನನ್ನು ಸಂಹಾರ ಗೈದು ಸಕಲ ಜಗತ್ತನ್ನು ಉದ್ದಾರ ಮಾಡಿ ಬಾ ಎಂದು ಅಪ್ಪಣೆ ಕೊಡುತ್ತಾನೆ. ಶರಭವತಾರಿಯಾದ ವೀರಭದ್ರನು ಆರ್ಭಟಿಸಿ ವೀರ ಕೇಕೆಯನ್ನು ಹಾಕುತ್ತಾ ಹೋಗುತ್ತಿರುತ್ತಾನೆ. ಆಗ

ನಕ್ಷತ್ರಗಳು ಉದುರಿದವು. ಸೂರ್ಯಚಂದ್ರರಿಗೆ ದಿಕ್ಕು ತೋಚದಂತಾಯಿತು. ಬ್ರಹ್ಮಾಂಡವು ನಡುಗಿತು. ಸಮುದ್ರವು ಧ್ರುವಲೋಕದ ಕಡೆಗೆ ಹಾರಿತು. ವೀರಭದ್ರನ ಬರುವಿಕೆಯನ್ನು ಕಂಡ ವ್ಯಾಳಸುರನ ಎದೆಯು ನಡುಗತೊಡಗಿತು. ಆದರೂ ಧೈರ್ಯಗೆಡದ ಸಿಂಹದ ಗವಿಯೊಳಗೆ ನರಿಯು ಬರುತ್ತಿದೆ ಎಂದು ಹೇಳುತ್ತಾನೆ. ಎಲ್ಲ ಶಕ್ತಿಯನ್ನು ಕುಂಠಿತಗೊಳಿಸಿದ ಈ ಬಹದ್ದೂರನ ಮುಂದೆ ಯಾರ ಆಟವೂ ನಡೆಯಲಾರದೆಂದು ಹೇಳುತ್ತಿರುತ್ತಾನೆ. ವೀರಭದ್ರನು ರಾಕ್ಷಸನ ರಟ್ಟೆ ಹಿಡಿದು ಗುದ್ದಿದನು. ವ್ಯಾಳಾಸುರನು ವೀರಭದ್ರನ ರಟ್ಟೆ ಹಿಡಿಯಲಾಗಿ ಪುನಃ ವೀರಭದ್ರನು ಅವನಿಗೆ ಗುದ್ದಿದನು. ಹೀಗೆ ನಡೆಯುತ್ತಿರುವಂತಹ ಯುದ್ಧದಲ್ಲಿ ರಾಕ್ಷಸ ಸಮುದ್ರವಾದರೆ ವೀರಭದ್ರನು ಅಗಸ್ತ್ಯನಾಗುತ್ತಾನೆ. ಅವನು ಸಿಂಹನಾದರೆ ಕೂಡಲೇ ವೀರಭದ್ರ ಶರಭನಾಗಿ ಸಿಂಹವನ್ನು ಕೊಂದನು.

ಇದನ್ನೆಲ್ಲಾ ನೋಡುತ್ತಿದ್ದ ಸಕಲ ದೇವತೆಗಳು, ಆಕಾಶದಿಂದ ಹೂವಿನ ಸುರಿಮಳೆ ಗೈದರು. ಗಂದರ್ವ ಸ್ತ್ರೀಯರು ನರ್ತನ ಮಾಡಿದರು. ಸಕಲ ದೇವಾನು ದೇವತೆಗಳು ಜಯ ಘೋಷಣೆ ಮಾಡಿದರು. ಮೂವತ್ಮೂರು ಕೋಟಿ ದೇವತೆಗಳು ಶ್ರೀ ವೀರಭದ್ರನಿಗೆ ಹೂವಿನ ಹಾರವನ್ನು ಹಾಕಿದರು. ಪಾರ್ವತಿ ಪರಮೇಶ್ವರರು ತುಂಬಾ ಸಂತೋಷಪಟ್ಟು, ಪರಮೇಶ್ವರನು ವೀರಭದ್ರನಿಗೆ ರತ್ನದ ಸಿಂಹಾಸನದ ಮೇಲೆ ಕೂಡಿಸಿ ಹೂವಿನ ಮಳೆಯನ್ನೇ ಸುರಿಸಿದನು.

೩. ಆದಿ ಬ್ರಹ್ಮನ ಮಗ ಕಶ್ಯಪ ಬ್ರಹ್ಮ. ಅವನ ಮಗನೆ ಹಿರಣ್ಯ ಕಶ್ಯಪ. ಅವನು ವರ ಪಡೆದು ಅನೇಕ ದೇವತೆಯನ್ನು ಕಾಡುತ್ತಿದ್ದಾಗ ದೇವತೆಗಳೆಲ್ಲರೂ ವಿಷ್ಣುವಿನ ಹತ್ತಿರ ಮೊರೆ ಹೋಗುವರು. ಆಗ ವಿಷ್ಣುವು ನರಸಿಂಹನ ಅವತಾರವೆತ್ತಿದನು. ಅವನು ಹೊಸ್ತಿಲ ಮೇಲೆ ಕುಳಿತು ಹಿರಣ್ಯಕಶ್ಯಪನನ್ನು ತನ್ನ ತೊಡೆಯ ಮೇಲೆ ಹಾಕಿಕೊಂಡು ಹೊಟ್ಟೆಯನ್ನು ಬಗೆದು ರಕ್ತವನ್ನು ಕುಡಿದನು. ಅದರ ರುಚಿಯನ್ನು ನೋಡಿದ ನರಸಿಂಹನು ಎಲ್ಲರನ್ನು ಬೆನ್ನುಹತ್ತಿ ಸಂಹಾರ ಮಾಡಿ ರಕ್ತವನ್ನು ಹೀರ ತೊಡಗಿದನು. ಆಗ ದೇವಾನು ದೇವತೆಗಳು ಪ್ರಾಣಕ್ಕೆ ಹೆದರಿ ಶಿವನಲ್ಲಿಗೆ ಓಡಿ ಬಂದರು. ನರಸಿಂಹನನ್ನು ಬಗ್ಗಿಸಲು ಯಾರಿಂದಲೂ ಸಾಧ್ಯವಿಲ್ಲ ಎಂದು ಹೇಳಿದರು. ಶಿವನ ಅಪ್ಪಣೆಯಂತೆ ವೀರಭದ್ರನು ಶರಭಾವತಾರವನ್ನು ತಾಳಿ ನರಸಿಂಹನ ಸೊಕ್ಕನ್ನು ಅಡಗಿಸಲು ಹೋಗುತ್ತಾನೆ. ನರಸಿಂಹನನ್ನು ಗಟ್ಟಿಯಾಗಿ ಹಿಡಿದು ರಕ್ತವನ್ನು ಬಾಯಿಂದ ವಾಂತಿ ಮಾಡಿಸಿದನು. ಬಳಿಕ ವಿಷ್ಣುವು ತನ್ನ ತೊಗಲು ಶಿವನಿಗಿರಲು ಮುಖವು ವೀರಭದ್ರನಿಗಿರಬೇಕು ಎಂದು ಬೇಡಿಕೊಂಡನು. ಶಿವನು ಆಗಲಿ ಎಂದು ಅನುಗ್ರಹಿಸಿದನು. ವಿಷ್ಣು ಮುಂದುವರೆದು ಶ್ರೀ ವೀರಭದ್ರನ ಪಾದ ಸೇವೆಯನ್ನು ಮಾಡಿದನು. ವೀರಭದ್ರನು ಮೊದಲು ದಕ್ಷ ಯಜ್ಞಕ್ಕೆ ಹೋದಾಗ ಅಲ್ಲಿ ವಿಷ್ಣುವು ತನ್ನ ಹರ್ವಿಭಾಗ (ಗೋಧಿ ಹಿಟ್ಟು, ಬೆಲ್ಲ, ಬೇಳೆ, ಅಕ್ಕಿ, ಅಡಿಕೆ, ಎಲೆ, ಒಂದು ಕೊಬ್ರಿ, ಬಟ್ಟಲು)ವನ್ನು ತೆಗೆದುಕೊಂಡ ಮತ್ತು ಶಿವನ ಹರ್ವಿಭಾಗವನ್ನು ಕೇಳುತ್ತಿರುವಾಗ ಅದನ್ನು ವೀರಭದ್ರನು ಕಂಡು ನೀನು ಶಿವನ ಹರ್ವಿಭಾಗವನ್ನು ತೆಗೆದುಕೊಂಡು ಹೋಗಬೇಡವೆಂದು ಹೇಳಿದನು. ವಿಷ್ಣುವು ಅದು ಸಾಧ್ಯವಿಲ್ಲವೆಂದನು. ಆಗ ವೀರಭದ್ರನು ವಿಷ್ಣುವನ್ನು ಗದೆಯಿಂದ ಎದೆಗೆ ಹೊಡೆದನು. ಅವನ ಎದೆಯ ಮೇಲಿದ್ದ ಕಸ್ತುಭ ರತ್ನವು ಒಡೆದು ಅವನ ಹೆಂಡತಿಯಾದ ಲಕ್ಷ್ಮಿಗೆ ಬಡಿಯಿತು. ಅವಳು ಮೂರ್ಛೆ ಹೋಗಿ

ನೆಲಕ್ಕೆ ಉರುಳಿದಳು. ವಿಷ್ಣುವು ವೀರಭದ್ರನ ಹೊಡೆತದಿಂದ ನೆಲಕ್ಕೆ ಉರುಳಿದನು. ನಂತರ ಸ್ವಲ್ಪ ಸಮಯದ ನಂತರ ವಿಷ್ಣುವು ಮೂರ್ಛೆಯಿಂದ ಎದ್ದನು. ತನ್ನ ಕೈಯಲ್ಲಿದ್ದ ಚಕ್ರವನ್ನು ವೀರಭದ್ರನಿಗೆ ಬಿಟ್ಟನು. ವೀರಭದ್ರನು ಅದನ್ನು ಹಿಡಿದು ಚಪ್ಪಟೆಯಾಗುವಂತೆ ನೆಲಕ್ಕೆ ಒಗೆದನು. ವಿಷ್ಣುವು ಆಗ ಹೆದರಿ ಜಿಂಕೆಯ ರೂಪತಾಳಿ ಓಡಿ ಹೋದನು. ವೀರಭದ್ರನು ಆ ಜಿಂಕೆಗೆ ತನ್ನ ಬಾಣಗಳನ್ನು ಬಿಡಲಿಕ್ಕೆ ಹತ್ತಿದನು. ವಿಷ್ಣುವು ಆಗ ಹೆದರಿ ಕೈ ಮುಗಿದು ತಪ್ಪಾಯಿತು. ಶಿವನಿಗೆ ಸಲ್ಲಬೇಕಾದ ಹರ್ವಿಭಾಗವನ್ನು ನಾನು ತೆಗೆದುಕೊಳ್ಳುವುದಿಲ್ಲ. ಅದು ಶಿವನಿಗೆ ಸಲ್ಲಬೇಕು. ನನ್ನನ್ನು ಕ್ಷಮಿಸು ಎಂದು ಹೇಳುತ್ತಾನೆ. ತನ್ನ ತಪ್ಪನ್ನು ಒಪ್ಪಿಕೊಂಡ ಪರಿಣಾಮವಾಗಿ ಅವನು ದಿನಾಲು ಒಂದು ಸಾವಿರ ತಾವರೆಗಳನ್ನು ತಂದು ಶ್ರೀ ವೀರಭದ್ರನ ಪಾದಗಳಿಗೆ ಇಟ್ಟು ಪೂಜಿಸುವ ವ್ರತ ಹಿಡಿದನು. ಆಗ ಒಂದು ದಿನ ಒಂದು ತಾವರೆ ಕಡಿಮೆ ಬಿತ್ತು. ಅದಕ್ಕೆ ಬದಲಾಗಿ ವಿಷ್ಣು ತನ್ನ ಒಂದು ಕಣ್ಣನ್ನು ಕಿತ್ತು ವೀರಭದ್ರನ ಪಾದಗಳ ಮೇಲಿಟ್ಟು ಪೂಜಿಸಿದನು. ತನ್ನ ಭಕ್ತಿಯ ನಿಷ್ಠೆಯನ್ನು ತೋರಿದನು. ಇದರಿಂದ ವೀರಭದ್ರನು ಶಾಂತವಾಗಿ ವಿಷ್ಣುವೇ ನಿನ್ನ ಜೀವಕ್ಕೆ ಇನ್ನು ಭಯವಿಲ್ಲ. ನಿನ್ನ ಭಕ್ತಿಗೆ ಮೆಚ್ಚಿದ್ದೇನೆ. ನಿನಗೆ ಪ್ರಾಣ ರಕ್ಷಣೆ ಮಾಡಿದ್ದೇನೆ. ನೀನು ಇನ್ನು ಮೇಲೆ ಭಯಪಡಬೇಡವೆಂದು ಭರವಸೆಯನ್ನು ಕೊಟ್ಟನು. ಇದೆಲ್ಲಾ ಆದ ಮೇಲೆ ಲಕ್ಷ್ಮಿಗೆ ಜ್ಞಾನ ಬರುತ್ತದೆ. ಅವಳನ್ನು ಕ್ಷಮಿಸಿ ಅವಳ ತುರುಬನ್ನು ವೀರಭದ್ರನು ಸರಿಪಡಿಸಿದನು. ಅಮಂಗಳೆಯಾದ ಲಕ್ಷ್ಮಿಯನ್ನು ಪುನಃ ಸುಮಂಗಳೆಯನ್ನಾಗಿ ಮಾಡಿದನು. ಹೀಗೆ ವಿಷ್ಣು ವೀರಭದ್ರನ ಪಾದ ಪೂಜೆಯನ್ನು ಮಾಡುತ್ತಾ ಮುಂದುವರೆದನು.

೪. ಅತಿಯಾಗಿ ಮೆರೆಯುತ್ತಿರುವ ಬ್ರಹ್ಮ ಮತ್ತು ಸರಸ್ವತಿಯರ ಗರ್ವವನ್ನು ಇಳಿಸುತ್ತಾನೆ. ಸರಸ್ವತಿಯು ಸಕಲ ದೇವಾನು ದೇವತೆಗಳಿಗೆ ವಿದ್ಯೆಯನ್ನು ಹೇಳಿ ಕೊಡುವಳು ಎಂದು ವಿದ್ವಜನರು ಕೊಂಡಾಡುತ್ತಿದ್ದರು. ಅವಳು ತನ್ನ ವಿದ್ಯೆಯ ಬಲದಿಂದ ಶಿವನ ಮಹತ್ವವನ್ನು ಕಡೆಗಣಿಸಿರುವಳೆಂದು ನಿಶ್ಚಯಿಸಿದರು. ಭೂಮಿಯನ್ನು ಕಾಗದವನ್ನಾಗಿ ಮಾಡಿ, ಸುರತರುಗಳನ್ನೇ ಲೆಕ್ಕಣಿಕೆಯನ್ನು ಮಾಡಿ, ಏಳು ಸಮುದ್ರಗಳನ್ನು ಮನೆಯನ್ನಾಗಿ ಮಾಡಿ, ಬ್ರಹ್ಮ ಕಲ್ಪ ಕೋಟಿಯಾಗ ವರ್ಷಗಳಲ್ಲಿಯೂ ಬರೆದು ಏನು ಕಾಣಲಾರದೆ ಹೋದ ಅವಳ ವಿದ್ಯೆಯ ಮಹತ್ವವೇನು ಎಂದು ಎಲ್ಲರು ಯೋಚಿಸುತ್ತಿರುತ್ತಾನೆ. ಎಲ್ಲಾ ದೇವಾನು ದೇವತೆಗಳು ಶಿವನನ್ನು ಪೂಜಿಸುತ್ತಿರುವಾಗ, ಎಲ್ಲವನ್ನು ಧಿಕ್ಕರಿಸಿ ವಿದ್ಯೆಯ ಮೂರ್ತಿಯೇ ನಾನೆಂದು ಮಹಾಗರ್ವದಿಂದ ಸರಸ್ವತಿಯು ದಕ್ಷಬ್ರಹ್ಮನ ಯಜ್ಞಕ್ಕೆ ಹೋಗಿದ್ದಳು. ಬುದ್ಧಿ ತಪ್ಪಿದ ಹಾಗೂ ಮಹಾ ಗರ್ವಿಷ್ಟಳಾದ ಸರಸ್ವತಿಯ ಮೂಗನ್ನೇ ವೀರಭದ್ರ ಕೊಯ್ದು ಬಿಟ್ಟನು. ತಲೆಯಿಲ್ಲದ ಬ್ರಹ್ಮ ಸತಿಗೆ ಈಗ ಮೂಗಿಲ್ಲ ಎಂದು ಎಲ್ಲಾ ದೇವಾನು ದೇವತೆಗಳು ನಗುತ್ತಾ ಅತೀ ಸಂತೋಷದಿಂದ ಕುಣಿದಾಡಿದ್ದರು. ತಲೆಯಿಲ್ಲದ ಗಂಡ ಮೂಗು ಇಲ್ಲದ ಹೆಂಡತಿ ಎಂದು ಇಡೀ ಲೋಕಕ್ಕೆ ಪ್ರಸಿದ್ಧವಾಗಿ ಇವರದು ಒಂದು ಬಾಳುವೆಯಾ ಎಂದು ಪ್ರಪಂಚದ ಜನರು ಮಾತನಾಡಿಕೊಳ್ಳುತ್ತಿದ್ದರು.

೫) ಭಾರತದಲ್ಲಿ ಚೋಳ ಪಟ್ಟಣವಿತ್ತು, ಅದು ತುಂಬಾ ಪ್ರಸಿದ್ಧವಾದ ಪಟ್ಟಣ. ಇದರೊಳಗಡೆ ಕರವೂರೆಂಬ ಗ್ರಾಮವಿತ್ತು. ಈ ಗ್ರಾಮದೊಳಗೆ ಪಗಲೋಳನೆಂಬ ರಾಜನು ಇದ್ದನು. ಅವನು ಬಹಳ ಜನರಿಗೆ ಬೇಕಾಗಿದ್ದನು. ಅವನು ರಾಜ್ಯದಲ್ಲಿ ಎಲ್ಲಾ ಪ್ರಜೆಗಳನ್ನು ತನ್ನ ಮಕ್ಕಳೆಂದು ತಿಳಿದು ಅವರ ಹಿತವನ್ನೇ ಬಯಸುತ್ತಿದ್ದನು. ಹೀಗಿರುವಾಗ ಒಮ್ಮೆ ಆ ಪಟ್ಟಣಕ್ಕೆ ಏಣಾಧಿನಾಥನೆಂಬ ಶಿವಭಕ್ತನು ಬಂದು ಯಾವುದೋ ಒಂದು ತೊಂದರೆಯಲ್ಲಿ ಸಿಲುಕಿ ಶಿವನ ಧ್ಯಾನದಲ್ಲಿರುವಾಗ ಒಂದು ದಿನ ಅವನ ಕನಸಿನಲ್ಲಿ ಶ್ರೀ ವೀರಭದ್ರ ದೇವರು ಬಂದು ಒಂದು ಖಡ್ಗವನ್ನು ಕೊಟ್ಟನು. ಆದರಿಂದ ಅವನಿಗೆ ವೀರಶ್ರೀ ಸಂಚಾರವಾಯಿತು. ಇದರಿಂದ ಏಣಾದಿನಾಥ ತುಂಬಾ ಹರ್ಷದಿಂದ ವೀರಭದ್ರನ ಭಕ್ತನಾದನು.

೬) ವೀರಭದ್ರನು ಋಷಿಮುನಿಗಳ ಶಾಪದಿಂದ ಮಡಿವಾಳ ಹೊಟ್ಟೆಯಲ್ಲಿ ಹುಟ್ಟಿ ಪವಾಡ ಮಾಡುತ್ತಾನೆ. ದಕ್ಷಬ್ರಹ್ಮನ ಶಿರ ಕಡಿದು ಬರುವಾಗ ಅವನ ದೇಹವೆಲ್ಲಾ ರಕ್ತ ಮಾಂಸಗಳಿಂದ ಕೂಡಿತ್ತು. ಕೈಲಾಸಕ್ಕೆ ಬರುವಾಗ ಶಿವನ ಸಭೆಯೊಳಗೆ ಕುಳಿತಿರುವಂತಹ ಅನೇಕ ಋಷಿಮುನಿಗಳಿಗೆ ತಾಗಿಸುತ್ತಾ ಹೋದನು. ಆಗ ಋಷಿಮುನಿಗಳು ಎಲ್ಲೆ ಹುಡುಗನೇ ನಮ್ಮನ್ನೆಲ್ಲಾ ಮೈಲಿಗೆ ಮಾಡಿದೆಯಲ್ಲಾ ಎಂದು ನಿಂದಿಸಿದರು. ತಮ್ಮ ಕೈಯಲ್ಲಿದ್ದ ಕಮಂಡಲದೊಳಗಿನ ನೀರನ್ನು ವೀರಭದ್ರನ ಮೇಲೆ ಎರಚುವರು. ಆಗ ವೀರಭದ್ರನು ಪರಮೇಶ್ವರನ ಪಾದಕ್ಕೆ ನಮಸ್ಕರಿಸಿ ತಂದೆ ನನಗೆ ಎಲ್ಲಾ ಋಷಿಮುನಿಗಳು ಮತ್ತು ದೇವತೆಗಳು ಶಾಪವನ್ನು ಕೊಟ್ಟಿದ್ದಾರೆ ಎಂದನು. ಏನು ಮಾಡಲಿ ಎಂದು ಕೇಳಿದಾಗ ಶಿವನು ಮಗು ಇದು ಅನಿವಾರ್ಯವಾಗಿದೆ. ಅದಕ್ಕೆ ನೀನು ಮಡಿವಾಳರ ಮನೆಯಲ್ಲಿ ಹುಟ್ಟಿ ಶರಣರ ಬಟ್ಟೆಯನ್ನು ಮಡಿ ಮಾಡಿಕೊಡು ಎಂದು ಹೇಳುವನು. ವೀರಭದ್ರನು ತಂದೆಗೆ ದೀರ್ಘದಂಡ ನಮಸ್ಕಾರ ಮಾಡಿದನು. ಕೆಲವು ವರ್ಷಗಳ ನಂತರ ವೀರಭದ್ರನು ಈಗಿನ ಬಿಜಾಪುರ ಜಿಲ್ಲೆಯ ಹಿಪ್ಪರಗಿ ಎಂಬ ಊರಿನಲ್ಲಿ ಪರ್ವತಯ್ಯನೆಂಬ ಮಡಿವಾಳನ ಮಗನಾಗಿ ಜನಿಸಿದನು. ತಂದೆ ತಾಯಿ ಬಂಧು ಮಿತ್ರರು ಸೇರಿ ಈ ಮಗುವಿಗೆ ಮಡಿವಾಳ ಮಾಚಿದೇವರೆಂದು ನಾಮಕರಣ ಮಾಡಿದರು. ಕಾಲ ಕಳೆದಂತೆ ಮಾಚಿದೇವರು ಕಲ್ಯಾಣದ ಶರಣರ ಬಟ್ಟೆಗಳನ್ನು ಮಡಿ ಮಾಡಿ ಮನದ ಮಲೀನತೆಯನ್ನು ಮಡಿ ಮಾಡಿದ್ದಲ್ಲದೆ ಕೊನೆಯ ಕಾಲದಲ್ಲಿ ದೇವರ ಹಿಪ್ಪರಗಿ ಎಂಬ ಕ್ಷೇತ್ರದಲ್ಲಿ ಲಿಂಗೈಕ್ಯನಾದನು (ಕಮಲಾ ಹೆಮ್ಮಿಗೆ: ೨೦೦೦;೨೮).

೭) ವೀರಭದ್ರನು ಕುರಬರ ಜನಾಂಗದಲ್ಲಿ ಬೀರಲಿಂಗನಾಗಿ ಹುಟ್ಟುವನು. ವೀರಭದ್ರನು ಶಿವನ ಅಪ್ಪಣೆಯಂತೆ ದಕ್ಷಾವತಿಯೆಂಬ ಪಟ್ಟಣದಲ್ಲಿ ದಕ್ಷನೆಂಬ ರಾಜನ ಯಜ್ಞವನ್ನು ನಾಶ ಮಾಡಲು ಕಳುಹಿಸಿರುವಂತಹ ಸಂದರ್ಭದಲ್ಲಿ ವೀರಭದ್ರನು ದಕ್ಷನ ರುಂಡವನ್ನು ಚಂಡಾಡಿದನು. ಆಗ ದಕ್ಷನ ರಕ್ತದ ಒಂದೊಂದು ಕಣಗಳಿಂದ ಒಂದೊಂದು ಕುರಿಗಳಾಗಿ ಆ ಯಜ್ಞ ನಡೆಯುವಂತೆ ಸ್ಥಳದಲ್ಲಿ ಓಡಾಡಲು ಪ್ರಾರಂಭಿಸಿದವು. ಆಗ ಅವುಗಳನ್ನು ಹೊಡೆದುಕೊಂಡು ಹೋಗು ಎಂದು ಶಿವನು ಪಾರ್ವತಿಗೆ ಅಪ್ಪಣೆಯನ್ನು ಕೊಟ್ಟನು. ಪಾರ್ವತಿಯು ಆ ಯಜ್ಞದಿಂದ ಹೊರಗಡೆಗೆ ಹೊಡೆದುಕೊಂಡು ಬಂದು ಒಂದು ಹುತ್ತವನ್ನು ನಿರ್ಮಿಸಿ ಆ ಕುರಿಗಳನ್ನು ಅದರೊಳಕ್ಕೆ ಹಾಕಿದಳು. ಅದಕ್ಕೆ ತನ್ನ ಮೂಗಿನ ಮೂಗುತಿಯನ್ನು ನೆಟ್ಟಳು. ಕಾಲ ಕ್ರಮೇಣ ಅದು ಮುತ್ತುಗದ ಗಿಡವಾಗಿ ಹುಟ್ಟಿ ಈ ಭೂಮಿಯನ್ನೇ

ಆವರಿಸಿತು. ಹೀಗೆ ಇರುವಂತಹ ಸಂದರ್ಭದಲ್ಲಿ ಆ ಭೂಮಿಯ ಮಾಲಿಕ ಭೂಮಿಯನ್ನು ಉತ್ತಿ ಭಿತ್ತಿ ಬೆಳೆಗಳನ್ನು ತೆಗೆಯೋಣವೆಂದುಕೊಂಡನು. ಮನೆಯವರು ಎಷ್ಟು ಬೇಡ ಬೇಡ ಎಂದರು ಕೇಳದೇ ಮುತ್ತುಗದ ಗಿಡವನ್ನು ಮತ್ತು ಹುತ್ತವನ್ನು ಹರಗಲು ಆಗ ಅಲ್ಲಿದ್ದ ಎಲ್ಲಾ ಕುರಿಗಳು ಓಡಿ ಹೋಗಲು ಪ್ರಾರಂಭಿಸಿದವು. ಕುರುಬರು ಬೀರಲಿಂಗನೆಂದು ನಂಬಿರುವ ವೀರಭದ್ರನು ಅಲ್ಲಿಗೆ ಬಂದನು. ಕುರಿಗಳನ್ನು ಒಂದುಗೂಡಿಸಿ, ಆ ಹೊಲವನ್ನು ಹರಗಲು ಬಂದಿರುವಂತಹ ಪದಮಗೊಂಡ ಎಂಬ ಮನುಷ್ಯನಿಗೆ ಕುರಿಗಳನ್ನು ಕಾಯಲು ಹೇಳಿದನು. ಅವನಿಗೆ ಕುರಿಗಳ ಜೊತೆಗೆ ದೇಶ ಸಂಚಾರಿಯಾಗಿ ಹೋಗು ಎಂದು ಹೇಳಿದನು. ಅದರಂತೆ ಕುರಿಗಳನ್ನು ಕಾಯುತ್ತಾ, ಹೋಗುತ್ತಿರುವಾಗ ಒಂದು ದಿನ ಕಾಡಿನಲ್ಲಿ ಕುರಿಗಳನ್ನು ಮೇಯಿಸುತ್ತಿರುವಾಗ ದೂರದಿಂದ ಬೆಂಕಿಯ ಹೊಗೆ ಕಾಣಿಸುತ್ತಿರುತ್ತದೆ. ಅಲ್ಲಿ ಹೋಗಿ ನೋಡಿದಾಗ ಸುಂದರವಾದ ಹುಡುಗಿಯು ಕಾಣಿಸುತ್ತಾಳೆ. ಆಗ ಪದಮಗೊಂಡ ನೀನು ಯಾರು ಎಂದು ಕೇಳಿದಾಗ ಆ ಹುಡುಗಿ ಇಲ್ಲಿ ಒಂದು ಹೆಣ್ಣು ರಾಕ್ಷಸ ವಾಸವಾಗಿದೆ. ಆ ರಾಕ್ಷಸಿ ಈ ದೇಶದ ರಾಜನ ಹತ್ತಿರ ದಿನ ಬಿಟ್ಟು ದಿನ ಒಂದು ನರಬಲಿಗೆ ಹೋಗುತ್ತಿತ್ತು. ಹೀಗಿರುವಾಗ ಒಂದು ದಿನ ನನ್ನ ಸರದಿ ಬಂದಾಗ. ನನ್ನ ತಂದೆ ತುಂಬಾ ವ್ಯಥೆಯನ್ನು ಪಟ್ಟಾಗ ನಾನು ನನ್ನ ತಂದೆಗೆ ಬುದ್ದಿವಾದ ಹೇಳಿ, ನಾನು ಆ ರಾಕ್ಷಸಿಯ ಹತ್ತಿರ ಬಂದೆನು. ನನ್ನ ಬುದ್ಧಿವಾದವನ್ನು ಕೇಳಿದ ರಾಕ್ಷಸಿ ನನ್ನ ಬಗ್ಗೆ ಕರುಣೆ ಬಂದು ನನ್ನನ್ನು ಇಲ್ಲಿ ಸಾಕಿತು ಎಂದು ಆ ಹುಡುಗಿ ಕತೆಯನ್ನು ಹೇಳಿತು. ನೀನು ಇಲ್ಲಿಂದ ಬೇಗ ಹೋಗು. ಇಲ್ಲವೆಂದರೆ ನನ್ನ ತಾಯಿ ಬಂದು ನಿನ್ನನ್ನು ತಿಂದು ಬಿಡುವಳು. ಆಗ ಪದಮಗೊಂಡನು ನಿನ್ನ ತಾಯಿಯ ಸಾವು ಯಾವುದರಲ್ಲಿ ಇದೆ ಎಂದು ಕೇಳು ಎಂದನು. ಹಾಗೆ ಆಗಲಿ ಎಂದು ಆ ಹುಡುಗಿ ಹೇಳಿ ಕಳುಹಿಸುತ್ತಾಳೆ.



ಅಷ್ಟರೊಳಗೆ ಅವಳ ತಾಯಿ ಬರುತ್ತಿರುವ ಹೊತ್ತಿಗೆ ಮಗಳು ನಾಟಕೀಯವಾಗಿ ಅಳಲು ಪ್ರಾರಂಭಿಸಿದಳು. ಅಲ್ಲಿಗೆ ತಾಯಿ ಬಂದು ನಿನ್ನ ಅಳುವಿಗೆ ಕಾರಣವೇನು ಎಂದು ಕೇಳಿದಳು. ನೀನು ಹೀಗೆ ದಿನಾಲು ಎಲ್ಲೆಂದರಲ್ಲಿ ತಿರುಗಲು ಹೋದಂತಹ ಸಂದರ್ಭದಲ್ಲಿ ಅಲ್ಲಿ ನೀನು ತೀರಿಕೊಂಡರೆ ನನ್ನ ಗತಿ ಏನು ಎಂದು ಕೇಳಿದಳು. ರಾಕ್ಷಸಿ ಇಲ್ಲ ಮಗು, ನನ್ನ ಮರಣವು ಅಲ್ಲಿ ಎಲ್ಲೂ ಇಲ್ಲ ಇಲ್ಲೇ ಇದೇ ನೋಡು. ಅಲ್ಲಿ ಕಾಣುತ್ತಿರುವ ಕಾಂಚಾಳ ಗಿಡ, ಅದರ ಮೇಲೆ ಒಂದು ಕಾಗೆ ಇದೆಯಲ್ಲಾ ಆ ಕಾಗೆ ಸತ್ತರೆ ಆ ಮರ ಬೀಳುತ್ತದೆ. ಆ ಮರ ಬಿದ್ದ ತಕ್ಷಣ ನನಗೆ ಸಾವು. ನೀನು ಏನು ಚಿಂತೆ ಮಾಡಬೇಡ ಎಂದು ಹೇಳಿ ರಾಕ್ಷಸಿ ತನ್ನ ಆಹಾರ ಹುಡುಕಲು ಹೊರಗೆ ಹೋಗುವುದು.

ಅದು ಹೊರಗೆ ಹೋದ ತಕ್ಷಣ ಪದಮಗೊಂಡ ಬರುತ್ತಾನೆ. ಎಲ್ಲಾ ವಿಷಯವನ್ನು ತಿಳಿಯುತ್ತಾನೆ. ನಂತರ ಆ ಕಾಗೆಯನ್ನು ಮರದ ತುದಿಯಿಂದ ಹೇಗೆ ಬಿಡಸಬೇಕು ಎನ್ನುವಂತಹ ಯೋಚನೆಯನ್ನು ಮಾಡುತ್ತಿರುತ್ತಾನೆ. ಅಷ್ಟರೊಳಗೆ ಆ ಕಾಗೆ ದಿನಾಲು ಸತ್ತ ಹೆಣಗಳನ್ನು ತಿನ್ನಲು ಮರಬಿಟ್ಟು ಕೆಳಗಡೆ ಇಳಿಯುತ್ತಿತ್ತು. ಅದನ್ನು ಕಂಡು ಹಿಡಿದ ಪದಮಗೊಂಡ ಒಂದು ದಿನ ಸತ್ತ ಹೆಣದಂತೆ ಬಿದ್ದಾಗ ಆ ಕಾಗೆ ಅವನನ್ನು ತಿನ್ನಲು ಬಂದಾಗ ಆ ಕಾಗೆಯ ಕಾಲನ್ನು ಹಿಡಿದು ಕುತ್ತಿಗೆಯನ್ನು ತಿರುವಲು ಕಾಗೆ ಅಲ್ಲೇ ಸತ್ತಿತ್ತು. ಮರ ಉರುಳಿತು, ರಾಕ್ಷಸಿ ತೀರಿಕೊಂಡಿತು. ನಂತರ ಬೀರಲಿಂಗ (ವೀರಭದ್ರ) ಬಂದು



ಪದಮಗೊಂಡನಿಗೂ ಮತ್ತು ರಾಕ್ಷಸಿ ಮಗಳಿಗೂ, ಅಲ್ಲೇ ಕುರಿಗಳ ಉಣ್ಣೆಯಿಂದ ದಾರವನ್ನು ಮಾಡಿ ಪದಮಗೊಂಡನಿಂದ ಆ ಹುಡುಗಿಯ ಕೊರಳಿಗೆ ತಾಳಿ ಕಟ್ಟಿಸುತ್ತಾನೆ. ಹೀಗೆ ಕಟ್ಟಿಕೊಂಡ ಹುಡುಗಿಯನ್ನು ತನ್ನ ಮನೆಗೆ ಕರೆದುಕೊಂಡು ಹೋದಾಗ ಮನೆಯವರು ವಿರೋಧಿಸುವರು.

ತಾಯಿಯು ತಮ್ಮನ ಮಗಳನ್ನು ಮನೆಯಲ್ಲಿ ತಂದು ಪದಪಗೊಂಡನಿಗೆ ಮಾಡಿದರಾಯಿತು ಎಂದು ಕೊಂಡಿರುತ್ತಾರೆ. ಮನೆಯಲ್ಲಿ ನಿಜಸಂಗತಿ ಹೇಳುತ್ತಾನೆ. ನಿಜ ಸಂಗತಿ ತಿಳಿದ ಹಿರಿಯರೆಲ್ಲರೂ ಕೂಡಿ ಆ ಮನೆಯ ಸೊಸೆಯನ್ನಾಗಿ ಮಾಡಿಕೊಳ್ಳುತ್ತಾರೆ. ಗುರುಹಿರಿಯರು ಒಂದಾಗಿ ಅವನಿಗೆ ತಾಯಿ ತಮ್ಮನ ಮಗಳ ಜೊತೆಗೂ ಮದುವೆ ಮಾಡಿಸುತ್ತಾರೆ. ಇವಳಿಗೆ ಮನೆಯಲ್ಲಿ ಇರುವ ಹತ್ತಿಯ ನೂಲಿನಿಂದ ತಾಳಿ ಕಟ್ಟಿಸುತ್ತಾರೆ. ಅಂದಿನಿಂದ ಇಂದಿನವರೆಗೆ ಹತ್ತಿಯಿಂದ ತಾಳಿ ಕಟ್ಟಿಸಿಕೊಂಡವಳ ಹೊಟ್ಟೆಯಲ್ಲಿ ಜನಿಸಿದವರೆಲ್ಲಾ ವೀರಶೈವರು. ವೀರಭದ್ರ ದೇವರ ಭಕ್ತರು. ಕುರಿ ಉಣ್ಣೆ ದಾರದ ತಾಳಿ ಕಟ್ಟಿಸಿಕೊಂಡವಳ ಹೊಟ್ಟೆಯಲ್ಲಿ ಹುಟ್ಟಿದವರೆಲ್ಲಾ ಕುರುಬ ಜನಾಂಗದವರು. ಬೀರಲಿಂಗ ಇವರ ಆರಾಧ್ಯ ದೈವ ಎಂದು ಹೇಳುವರು.

೮) ಹರಮುನಿದರು ಗುರು ಕಾಯುವನು ಎನ್ನುವ ವಚನದಲ್ಲಿ ವೀರಭದ್ರನ ಪವಾಡ ತಂದೆ ಮಗನ ಯುದ್ಧದಲ್ಲಿ ಆಗುವಂತಹ ಅನಾಹುತಗಳನ್ನು ಇಲ್ಲಿ ನೋಡಬಹುದು.

ಒಂದು ದಿವಸ ಪಾರ್ವತಿ ಪರಮೇಶ್ವರ ಹಾಗೂ ಸಕಲ ದೇವಾನುದೇವತೆಗಳು ಸಭೆಯನ್ನು ಮಾಡುತ್ತಿರುತ್ತಾರೆ. ನಾರದನು ಆ ಸಭೆಯಲ್ಲಿ ಶಿವನಿಗೊಂದೇ ನಮಸ್ಕರಿಸಿ ಪಾರ್ವತಿಗೆ ನಮಸ್ಕಾರ ಮಾಡುವುದಿಲ್ಲ. ಆಗ ಪಾರ್ವತಿ ದೇವಿಯು ಸಿಟ್ಟಿನಿಂದ ಎಲೈ ನಾರದಮುನಿ ಪರಮೇಶ್ವರನಿಗೆ ನಮಸ್ಕರಿಸಿ, ನನ್ನನ್ನು ನೋಡಿ ನಮಸ್ಕರಿಸಲಿಲ್ಲವೆಂದು ಕಿಡಿ ಕಾರುತ್ತಾಳೆ. ಆಗ ನಾರದನು ತಾಯಿ ದಯವಿಟ್ಟು ಕ್ಷಮಿಸಿ ಎಂದು ಬೇಡಿಕೊಂಡನು. ಆಗ ಪಾರ್ವತಿದೇವಿ ಹಾಗಾದರೆ ನನಗೆ ನೀನು ಒಂದು ವಚನವನ್ನು ನಡೆಸಿಕೊಡಬೇಕು ಎಂದು ಕೇಳುತ್ತಾಳೆ. ನಾರದನು ಆಗಲಿ ತಾಯಿ ಅದು ಏನು ಎಂಬುದನ್ನು ಹೇಳಿರಿ ಎನ್ನುತ್ತಾನೆ. ನೀನು ಭೂಲೋಕಕ್ಕೆ ಹೋಗಿ 'ಹರ ಮುನಿದರೂ ಗುರು ಕಾಯುವ' ಎಂಬ ವಚನವನ್ನು ಸ್ಥಿರಪಡಿಸಿ ಬಾ ಎಂದು ಹೇಳಲು, ಆಗಲಿ ಮಹಾ ಪ್ರಸಾದವೆಂದು ಭೂಲೋಕಕ್ಕೆ ಬಂದನು.

ಆಗ ಭೂಲೋಕದಲ್ಲಿ ಶ್ರೀರಾಮಚಂದ್ರನು ಸ್ವಯಂವರದಲ್ಲಿ ಸೀತಾದೇವಿಯನ್ನು ಗೆದ್ದ ಸಂತೋಷವನ್ನು ಆಚರಿಸುತ್ತಾನೆ. ಜನಸಾಮಾನ್ಯರು ಬೇಡಿದ್ದನ್ನು ನೀಡುತ್ತಾ ಇರುವನು. ಆ ಸಂದರ್ಭದಲ್ಲಿ ರಾಮನ ಪರಮಭಕ್ತನಾದ ಮಾರುತಿಯು ಅಯೋಧ್ಯೆಯತ್ತ ಹೋಗುತ್ತಿರುತ್ತಾನೆ. ಮಾರ್ಗದಲ್ಲಿ ನಾರದಮುನಿಯು ಭೆಟ್ಟಿಯಾದನು. ಮಾರುತಿಯು ನಾರದಮುನಿಗೆ ನಮಸ್ಕರಿಸಿದನು. ನಾರದನು ಎಲೈ ಮಾರುತಿ ನನ್ನದೊಂದು ಕೆಲಸವಿದೆ. ನೀನು ಅದನ್ನು ನಡೆಸಿಕೊಡಬೇಕು ಎಂದು ಕೇಳುತ್ತಾನೆ. ಆಗ ಮಾರುತಿ ಅದು ಎಂತಹ ಕೆಲಸವೇ ಆಗಲಿ ನಾನು ಮಾಡುವೆನು ಎಂದು ಹೇಳುವನು. ಆಗ

ನಾರದನು ನಿನ್ನ ಪ್ರಭು ರಾಮಚಂದ್ರನ ಬಳಿಗೆ ಹೋಗಿ ನನಗೆ ಅಷ್ಟಲಿಂಗ ಭಕ್ತಿಯನ್ನು ಕೊಡಿ ಎಂದು ಕೇಳು ಎಂದು ಹೇಳಿಕೊಡುವನು. ಮಾರುತಿಯು ಅಲ್ಲಿಂದ ತೀವ್ರವಾಗಿ ಹಾರುತ್ತಾ ಅಯೋಧ್ಯೆ ತಲುಪಿದನು. ಅಲ್ಲಿ ಶ್ರೀರಾಮಚಂದ್ರ ಸೀತಾದೇವಿಯನ್ನು ಸ್ವಯಂವರದಲ್ಲಿ ಗೆದ್ದಿರುವ ಸಂತೋಷವನ್ನು ಆಚರಿಸುತ್ತಿರುವ ಸಂದರ್ಭದಲ್ಲಿ ಮಾರುತಿ ಅಲ್ಲಿಗೆ ಹೋದಾಗ ಶ್ರೀರಾಮನಿಗೆ ಮಾರುತಿಯನ್ನು ನೋಡಿ ಮುಖ ಅರಳಿ ಪ್ರಸನ್ನವಾಯಿತು. ಅಯೋಧ್ಯೆ ಎಲ್ಲಾ ಜನರು ತಮಗೆ ಏನುಬೇಕು ಅದನ್ನೆಲ್ಲಾ ಬೇಡಿ ತೆಗೆದು ಕೊಂಡಿದ್ದಾರೆ. ನಿನಗೆ ಏನು ಬೇಕು ಕೇಳು ಎಂದಾಗ ಮಾರುತಿಯು ನನಗೆ ಮುತ್ತು ರತ್ನಗಳು ಬೇಡ, ರಾಜ್ಯದ ಸುಖ ಸಂಪತ್ತು ನನಗೆ ಬೇಡ, ನನಗೆ "ಅಷ್ಟಾಲಿಂಗ ಮುಕ್ತಿಯಂ ಕೊಡಿರಿ" ಎಂದನು. ಆಗ ರಾಮಚಂದ್ರ ಈ ಕೆಲಸ ನನ್ನಿಂದ ಸಾಧ್ಯವಿಲ್ಲ. ಇದಕ್ಕಾಗಿ ಗುರುಗಳಾದ ವಸಿಷ್ಠರಲ್ಲಿ ಹೋಗಿ ಕೇಳಿರಿ ಎಂದನು. ಆಗ ಮಾರುತಿ ವಾಯುವೇಗದಿಂದ ಗುರುಳಾದ ವಸಿಷ್ಠರ ಹತ್ತಿರ ಹೋಗಿ ಕೇಳುವನು. ವಸಿಷ್ಠರು ಹೇ ಪ್ರಾಣ ದೇವನಾದ ಮಾರುತಿ ಈ ವರವನ್ನು ನನ್ನ ಕೈಯಲ್ಲಿಯೂ ಕೊಡಲು ಆಗುವುದಿಲ್ಲ. ಅದಕ್ಕಾಗಿ ನೀನು ಪಂಪಾವನ ಹೇಮಕೂಟಕ್ಕೆ ಹೋಗು. ತುಂಗಭದ್ರ ನದಿಯಲ್ಲಿ ಸ್ನಾನ ಮಾಡಿ ಮಡಿಯುಟ್ಟು ಶ್ರೀ ವೀರಭದ್ರನನ್ನು ಕುರಿತು ತಪಸ್ಸನ್ನು ಮಾಡು ಎಂದು ಸಲಹೆಕೊಡುವರು. ಹಾಗೆ ಆಗಲಿ ಎಂದು ಹೇಮಕೂಟಕ್ಕೆ ಹೋಗಿ ಕಠೋರ ತಪಸ್ಸನ್ನು ಮಾಡಲು ತೊಡಗಿದನು. ಆಗ ವೀರಭದ್ರನು ಮೆಚ್ಚಿ ಮಾರುತಿ ನಿನ್ನ ಘೋರ ತಪಸ್ಸಿಗೆ ಕಾರಣವೇನು ಎಂದು ವೀರಭದ್ರನು ಕೇಳಿದನು. ಮಾರುತಿ ಗುರುವೇ ನನಗೆ ಇಷ್ಟಾನಂದ ಮುಕ್ತಿಯನ್ನು ದಯತಪಾಲಿಸು ಎಂದು ಕೇಳಿದನು. ಆಗ ವೀರಭದ್ರನು ಮಾರುತಿಯ ಕೈಯಲ್ಲಿ ಇಷ್ಟಲಿಂಗವನ್ನು ಕೊಟ್ಟು ಮಾರುತಿ ಇದನ್ನು ನೀನು ಮೂರು ಹೊತ್ತು ಪೂಜಿಸುತ್ತಾ ಹೋಗು ಎಂದನು. ಆಗಲಿ ದೇವಾ ಎಂದು ಮಾರುತಿಯು ದಿನಾಲು ಮೂರು ಹೊತ್ತು ಪೂಜೆ ಮಾಡುತ್ತಾ ಹೋದನು. ಅಂದಿನಿಂದ ಮಾರುತಿಯು ರುದ್ರ ವೀರಭದ್ರ ದೇವರ ಪರಮ ಶಿಷ್ಯನಾದನು.

ಇತ್ತ ಗೌತಮ ಋಷಿಯ ಆಶ್ರಯದಲ್ಲಿ ಶಿವಯೋಗಿಯೋರ್ವನು ಇಷ್ಟಲಿಂಗವನ್ನು ಕಳೆದುಕೊಂಡು ಜೀವನದಲ್ಲಿ ಜಿಗುಪ್ಸೆ ಬಂದು ಆತ್ಮಹತ್ಯೆಯನ್ನು ಮಾಡಿಕೊಳ್ಳಲು ಹೋಗುತ್ತಾನೆ. ಆಗ ಅಲ್ಲಿಗೆ ವೀರಭದ್ರ ದೇವರು ಪ್ರತ್ಯಕ್ಷನಾಗಿ ಅವನಿಗೆ ಇಷ್ಟಲಿಂಗವನ್ನು ಮರಳಿಕೊಟ್ಟನು. ಈ ಸನ್ನಿವೇಶವನ್ನು ನೋಡಿ ಸರ್ವರೂ ಸಂತೋಷಪಟ್ಟರು. ಅಲ್ಲಿ ಹರ್ಷಿತನಾದ ಮಾರುತಿಯು ಭಜನೆ ಸಂಕೀರ್ತನೆ ನಡೆಸಿದ್ದನು. ಇದನ್ನೆಲ್ಲಾ ನೋಡಿ ಪರಮೇಶ್ವರನು ತುಂಬಾ ಸಂತೋಷಪಟ್ಟನು.

ಪರಮೇಶ್ವರನು ಎಲ್ಲಾ ಕಾರ್ಯಕ್ರಮಗಳು ಭೂಲೋಕದಲ್ಲಿ ಮುಗಿದ ಮೇಲೆ ಮಾರುತಿಗೆ ನನ್ನನ್ನು ಕೈಲಾಸಕ್ಕೆ ಕಳುಹಿಸಿ ಬಾ ಎಂದನು. ಆಗ ವಾಯುಪುತ್ರನು ಸಂತೋಷದಿಂದ ಒಂದು ಭುಜದಲ್ಲಿ ಶಿವನನ್ನು ಮತ್ತೊಂದು ಭುಜದಲ್ಲಿ ಪಾರ್ವತಿಯನ್ನು ಕುಳ್ಳಿರಿಸಿಕೊಂಡು ಆಕಾಶದ ಕಡೆಗೆ ಹಾರುತ್ತಾ ಹೊರಟನು. ದಾರಿಯಲ್ಲಿ ಅವನಿಗೆ ವೀರಭದ್ರನ ಅಪ್ಪಣೆಯಂತೆ ಲಿಂಗ ಪೂಜೆಯನ್ನು ಮಾಡಿಕೊಳ್ಳುವ ಸಮಯವಾಯಿತು ಎಂದುಕೊಂಡು ಅನಿವಾರ್ಯವಾಗಿ ಶಿವನು ಪಾರ್ವತಿಯರನ್ನು ಕೆಳಗೆ ಇಳಿಸಿದನು. ದೇವಾ ಪರಶಿವ ಮೂರ್ತಿಯೇ ನನಗೆ ಲಿಂಗಪೂಜೆಯ ಸಮಯವಾಗಿದೆ. ಅದಕ್ಕಾಗಿ ನಾನು ಪಂಪ ಸರೋವರಕ್ಕೆ ಹೋಗಿ

ಸ್ನಾನ ಮಾಡಿ ಪೂಜೆಯನ್ನು ಮಾಡಿಕೊಂಡು ಬರುವೆನು ನನಗೆ ಅಪ್ಪಣೆ ಕೊಡಿ ಎಂದು ಕೇಳಿದನು. ಅದಕ್ಕೆ ಶಿವನು ಮಾರುತಿ ಲಿಂಗ ಮೂರ್ತಿ ನಾನೇ ಇಲ್ಲಿರುವಾಗ ನನಗೇಕೆ ಪ್ರತ್ಯೇಕ ಪೂಜೆ ಮಾಡಬೇಕು ಎಂದನು. ನನ್ನ ಪರಮ ಗುರುವಾದ ವೀರಭದ್ರನ ಅಪ್ಪಣೆಯಂತೆ ಪೂಜೆಯಾಗಬೇಕಲ್ಲವೆ ಎಂದನು. ಅದಕ್ಕೆ ಶಿವನು ಗುರುವಿನ ಗುರು ತಾನಾದ್ದರಿಂದ ಬೇರೆ ಪೂಜೆ ಏಕೆ ಎಂದನು. ಅದಕ್ಕೆ ಮಾರುತಿ ಒಪ್ಪುವುದಿಲ್ಲ. ನನ್ನ ಗುರುವಿನ ಆಜ್ಞೆಯನ್ನು ನಾನು ಮೀರಲಾರೆ ಎಂದು ಪಂಪ ಸರೋವರದ ಹೇಮಕೂಟಕ್ಕೆ ತೆರಳಿದನು. ಇದರಿಂದ ಕೋಪಗೊಂಡ ಶಿವನು ಮಾರುತಿಯ ಅರಿವಿಗೆ ಬಾರದಂತೆ ಅದನ್ನು ಮಾಯ ಮಾಡಿದನು. ಇತ್ತ ಮಾರುತಿಯು ತುಂಗಭದ್ರೆಯಲ್ಲಿ ಸ್ನಾನಮಾಡಿ ನಾರುಮಡಿಯನ್ನು ತೊಟ್ಟು ತನ್ನ ಲಿಂಗದ ಕರಡಿಗೆಯನ್ನು ತೆರೆದು ನೋಡಿದನು. ಲಿಂಗ ಕಾಣುವುದಿಲ್ಲ. ಆದಕ್ಕೆ ಮಾರುತಿಯು ನಾನು ಸ್ನಾನ ಮಾಡುವಾಗ ಲಿಂಗವು ನದಿಯಲ್ಲಿ ಬಿದ್ದುಬಿಟ್ಟಿದೆ ಎಂದು ನದಿಯನ್ನೆಲ್ಲಾ ಜಾಲಾಡಿದನು. ಆದರೂ ಆ ಲಿಂಗ ಸಿಗಲಿಲ್ಲ. ಭೂಮಿಯಲ್ಲಿ ಎಲ್ಲಾದರೂ ಸಿಡಿದು ಹೋಗಿದೆ ಎಂದು ಭೂಮಿಯನ್ನೆಲ್ಲಾ ಸೀಳಿ ನೋಡಿದನು. ಅಲ್ಲಿಯೂ ಲಿಂಗ ಕಾಣದೇ ಹೋದಾಗ ಬೆಟ್ಟಗುಡ್ಡಗಳನ್ನು ಬಗೆದು ಕಾತುರದಿಂದ ಹುಡುಕಿದನು. ಅಲ್ಲಿಯೂ ಲಿಂಗ ದೊರಕಲಿಲ್ಲ. ಆಗ ಮಾರುತಿಯು ವೀರಭದ್ರ ದೇವರನ್ನು ಕುರಿತು ಘೋರ ತಪಸ್ಸನ್ನು ಮಾಡಲು ಕುಳಿತನು. ತಪಸ್ಸಿಗೆ ಮೆಚ್ಚಿ ಶ್ರೀ ವೀರಭದ್ರ ದೇವನು ಪ್ರತ್ಯಕ್ಷನಾದಾಗ ಮಾರುತಿಯು ತನ್ನ ಅಳಲನ್ನು ಹೇಳಿಕೊಂಡನು. ವೀರಭದ್ರನ ಮನ ಕರಗಿ ಭಕ್ತ ಶ್ರೇಷ್ಠ ಹೆದರಬೇಡ. ನಿನ್ನ ಇಷ್ಟಲಿಂಗ ಎಲ್ಲಿದ್ದರೂ ಸಂಜೆಯೊಳಗೆ ತಂದು ಕೊಡುವೆ ಎಂದನು. ಮಾರುತಿಯು ಸಮಾಧಾನ ಮಾಡಿಕೊಂಡನು. ಮುಂದೆ ವೀರಭದ್ರ ತನ್ನ ಅಗ್ನಿ ನೇತ್ರ (ಶಿವನ ಅಗ್ನಿ ನೇತ್ರ-ಮೂರನೇ ಕಣ್ಣಾದರೆ, ವೀರಭದ್ರನ ಅಗ್ನಿ ನೇತ್ರ ಎಂದರೆ ಸಿಟ್ಟಿನಿಂದ ಕೂಡಿದ ಕಣ್ಣುಗಳು)ವನ್ನು ತೆರೆದು ಇಷ್ಟಲಿಂಗವನ್ನು ಹುಡುಕಲು ಹೇಳುತ್ತಾನೆ. ಆಗ ವೀರಭದ್ರನು ಬಿಟ್ಟ ನೇತ್ರ ತ್ರಿಲೋಕಗಳನ್ನು ನಡುಗಿಸಿದವು. ಕೈಲಾಸದಲ್ಲಿದ್ದ ಪಾರ್ವತಿ ಪರಮೇಶ್ವರರು ಇದನ್ನೆಲ್ಲಾ ನೋಡುತ್ತಾ ಕುಳಿತಿರುತ್ತಾರೆ. ಪಾರ್ವತಿಯು, ಸ್ವಾಮಿ ತ್ರಿಲೋಕವೂ ವೀರಭದ್ರನ ಉರಿ ನೇತ್ರದಿಂದ ಸುಟ್ಟು ಹೋಗುತ್ತಿದೆ. ನೀನು ಇನ್ನು ತಮಾಷೆಯನ್ನು ನೋಡುತ್ತಾ ಹಾಗೆ ಕುಳಿತಿದ್ದಿಯಲ್ಲಾ ಎನ್ನುತ್ತಾಳೆ. ಮಾರುತಿಯ ಇಷ್ಟಲಿಂಗವನ್ನು ಕೊಟ್ಟು ಬಿಡು ಎಂದಳು. ಶಿವನು ತನ್ನ ಮೂರನೇ ಕಣ್ಣನ್ನು ವೀರಭದ್ರನ ಅಗ್ನಿ ನೇತ್ರದೊಂದಿಗೆ ಯುದ್ಧಕ್ಕಾಗಿ ಕಳುಹಿಸಿದನು. ಈ ಯುದ್ಧದಿಂದ ದೇವಾನು ದೇವತೆಗಳು ಪಾರ್ವತಿಯ ಹತ್ತಿರ ಬಂದು ನಮಗೆ ಈ ಯುದ್ಧದಿಂದ ಉಳಿಗಾಲವಿಲ್ಲ ಎಂಬ ಆತಂಕವನ್ನು ವ್ಯಕ್ತಪಡಿಸಿದರು. ಆಗ ಶಂಕರನು ಪ್ರತ್ಯಕ್ಷನಾಗಿ ಮಾರುತಿ ನಿನ್ನ ಇಷ್ಟಲಿಂಗ ಎಲ್ಲಿದೆ ತೋರಿಸು ಎಂದನು. ಮಾರುತಿಯು ಹೇ ದೇವಾ ನನ್ನ ಗುರುವಿನ ಅಪ್ಪಣೆಯಿಲ್ಲದೆ ಅದು ಅಸಾಧ್ಯ ಎನ್ನುವನು. ಆಗ ವೀರಭದ್ರ ಭಕ್ತ ಶ್ರೇಷ್ಠನಾದ ಮಾರುತಿ ಶಿವನಿಗೆ ರೋಮಕ್ಕೆ ಒಂದರಂತೆ ಕೋಟಿ ಲಿಂಗವನ್ನು ಮಾಡಿ ತೋರಿಸು ಎಂದನು. ಮಾರುತಿಯು ವೀರಭದ್ರನ ಮಾತಿನಂತೆ ಕೋಟಿ ಲಿಂಗವನ್ನು ತೋರಿಸಿದನು. ಅಂದಿನಿಂದ "ಹರ ಮುನಿದರೂ ಗುರು ಕಾಯುವ" ಎನ್ನುವ ಈ ಸಿದ್ಧಾಂತವು ಸ್ಥಿರವಾಗಿ ಉಳಿಯಿತು.

ವೀರಭದ್ರನು ಪ್ರಮುಖವಾಗಿ ಶೈವ ಮತ್ತು ವೀರಶೈವರ ಆರಾಧ್ಯ ದೈವ ಪುರುಷ. ಶಿವನ ಮತ್ತು ದಕ್ಷಬ್ರಹ್ಮರ ನಡುವಿನ ವೈಷಮ್ಯದಲ್ಲಿ ಶಿವನ ಅಪೇಕ್ಷೆಯಂತೆ ಜನ್ಮತಾಳುವ ವೀರಭದ್ರ, ಶಿವನ ಅಣತಿಯಂತೆ

ದಕ್ಷನನ್ನು ಕೊಂದ ನಂತರ ಪ್ರಮುಖ ಯುದ್ಧ ದೈವಾಗಿ ಕಾಣಿಸಿಕೊಂಡಿದ್ದಾನೆ. ಚಾಲುಕ್ಯರ ಕಾಲದಿಂದ ಆರಂಭವಾದ ವೀರಭದ್ರ ಮೂರ್ತಿಯ ಪ್ರತಿಷ್ಠಾಪನೆ ವಿಜಯನಗರದ ಕಾಲದಲ್ಲಿ ವ್ಯಾಪಕವಾಗಿರುವುದನ್ನು ದೇವಸ್ಥಾನಗಳಿಂದ ಮತ್ತು ಹೇರಳವಾಗಿ ಕಾಣುತ್ತಿರುವ ಮೂರ್ತಿ ಶಿಲ್ಪಗಳಿಂದ ಕಂಡುಬರುತ್ತದೆ. ವಿಜಯನಗರದ ಆಳ್ವಿಕೆಯಲ್ಲಿ ಯುದ್ಧ ದೇವತೆಗಳಾದ ವೀರಭದ್ರ ಮತ್ತು ಆಂಜನೇಯ ಹೆಚ್ಚಿನ ಪ್ರಾಮುಖ್ಯತೆಯನ್ನು ಹೊಂದಿರುವುದು ತಿಳಿದುಬರುತ್ತದೆ.

ವೀರಶೈವ ಜನಾಂಗದ ಮನೆದೇವತೆಯಾದ ವೀರಭದ್ರ ಹಲವು ರೀತಿಯಲ್ಲಿ ಆರಾಧನೆಗೊಳ್ಳುತ್ತಿದ್ದಾನೆ. ಈತನ ಪ್ರೀತ್ಯರ್ಥವಾಗಿ 'ಗುಗ್ಗಳ ಸೇವೆ'ಯನ್ನು ನಡೆಸುವ ಭಕ್ತರು ವೀರಗಾಸೆ, ಪುರವಂತರ ಕುಣಿತ ಮುಂತಾದ ಕಲಾಸೇವೆಗಳನ್ನು ಅರ್ಪಿಸುತ್ತಾರೆ. ಪುರಾಣದಲ್ಲಿ ಬರುವ ಈ ವೀರಭದ್ರ ಅವತಾರದ ಬಗ್ಗೆ ಮತ್ತು ಅವನ ಹಾವಭಾವಗಳನ್ನು ಈ ಪುರವಂತರು ಮತ್ತು ಭಕ್ತರು ಕುಣಿತದ ರೂಪದಲ್ಲಿ ಪ್ರದರ್ಶಿಸುತ್ತಾರೆ. ಈ ಕುಣಿತದಲ್ಲಿ ಸಮಾಳವನ್ನು ಉಪಯೋಗಿಸುತ್ತಾರೆ. ಈ ಕುಣಿತವನ್ನು ಶಿವರಾತ್ರಿ, ಗೌರೀಹಬ್ಬ, ಯುಗಾದಿ ಹಬ್ಬಗಳಲ್ಲದೆ ಮದುವೆಯ, ಗೃಹ ಪ್ರವೇಶದ ಸಮಯದಲ್ಲಿ ಗಂಗೆಯನ್ನು ತರುವ ಸಮಯದಲ್ಲೂ ಸಹ ನೋಡಬಹುದು. ಈ ವೀರಭದ್ರನ ಕುಣಿತವು ವೀರಶೈವ ಜನಾಂಗದವರ ಮತ್ತು ವಿಶ್ವಕರ್ಮ ಜನಾಂಗದವರ ಸಾಂಸ್ಕೃತಿಕ ಬದುಕಿನ ಅವಿಭಾಜ್ಯ ಅಂಗವೆಂಬಂತೆ ಪ್ರತೀತವಾಗಿದೆ. ಈ ವೀರಭದ್ರನ ಕುಣಿತ ಒಬ್ಬ ಕಲಾವಿದನ ಪ್ರತಿಭಾಶಕ್ತಿ ಮತ್ತು ಸಾಮರ್ಥ್ಯಗಳನ್ನು ಪ್ರತಿ ಬಿಂಬಿಸುತ್ತವೆ.

ವೀರಗಾಸೆ ಒಂದು ಸಾಮೂಹಿಕ ಕುಣಿತವಾಗಿದೆ. ಈ ಕುಣಿತವು ಜಾತ್ರೆ, ದೇವರ ಮೆರವಣಿಗೆ, ಹಬ್ಬ-ಹುಣ್ಣಿಮೆ, ಮದುವೆ ಮತ್ತು ಗೃಹ ಪ್ರವೇಶದ ಸಂದರ್ಭದಲ್ಲಿ ನಡೆಯುತ್ತದೆ. ವೀರಭದ್ರನನ್ನು ಮನೆ ದೇವರನ್ನಾಗಿ ನಂಬುವವರು ಈ ವೀರಗಾಸೆಯನ್ನು ನಡೆಸುತ್ತಾರೆ. ಇದು ಒಂದು ವೈಶಿಷ್ಟ್ಯಪೂರ್ಣವಾದ ಆಚರಣೆಯೇ ಆಗಿದೆ. ಈ ವೀರಗಾಸೆಯನ್ನು ಸಾಮಾನ್ಯವಾಗಿ ವೀರಭದ್ರ ದೇವರ ಒಕ್ಕಲಿನವರು ತಮ್ಮ ಹಿರಿಯ ಮತ್ತು ಕಿರಿಯ ಮಗನ ಮದುವೆಯಲ್ಲಿ ಮಾತ್ರ ನಡೆಸುತ್ತಾರೆ. ಈ ವೀರಗಾಸೆ ಕುಣಿತದಲ್ಲಿ ಕನಿಷ್ಠ ಎಂಟು ಮಂದಿ ಇರುತ್ತಾರೆ. ಇವರು ತಲೆಗೆ ಪೇಟ, ಹಣೆಗೆ ವಿಭೂತಿ, ಕೊರಳಿಗೆ ರುದ್ರಾಕ್ಷಿ ಹಾಗೂ ನಾಗಾಭರಣ, ಎದೆಗೆ ವೀರಭದ್ರ ದೇವರ ಹಲಗೆ, ಸೊಂಟಕ್ಕೆ ದಕ್ಷಬ್ರಹ್ಮನ ಶಿರವನ್ನು ಕಟ್ಟಿಕೊಳ್ಳುತ್ತಾರೆ. ಮೈಮೇಲೆ ಕಾವಿ, ಜುಬ್ಬ ಮತ್ತು ಕಾವಿಯ ಕಾಸಿಗೆ ಹಾಕುತ್ತಾರೆ. ಕಾಸೆ ಕಟ್ಟಿದವರೇ ಈ ಕಲೆಯ ಪ್ರಮುಖ ಕಲಾವಿದರಾಗಿರುತ್ತಾರೆ. ವೀರಗಚ್ಚೆಯೇ ವೀರಕಾಸೆಯಾಗಿ ನಂತರ ವೀರಗಾಸೆಯಾಗಿರಬಹುದು ಎಂಬುದು ಅಭಿಪ್ರಾಯ. ಬಲಗೈಯಲ್ಲಿ ಕಬ್ಬಿಣದ ಅಥವಾ ಮರದ ಖಡ್ಗ ಮತ್ತು ಎಡಗೈಯಲ್ಲಿ ಕರವಸ್ತ್ರ ಇರುತ್ತದೆ. ಇವರ ಕುಣಿತಕ್ಕೆ ಸರಿಯಾಗಿ ಸಮಾಳ, ಮುಖ ವೀಣೆ, ಕಂಚಿನ ತಾಳಗಳನ್ನು ಉಪಯೋಗಿಸುತ್ತಾರೆ. ವೀರಗಾಸೆಯ ಕಲಾವಿದರಲ್ಲಿ ಒಬ್ಬ ಮುಂದೆ ಬಂದು ಒಡಪುಗಳನ್ನು ಹೇಳುವವನಿಗೆ ಹೂಗುಟ್ಟುವ ಮೂಲಕ ಪ್ರತಿಕ್ರಿಯಿಸುತ್ತಾರೆ ಮತ್ತು ಹುರಿದುಂಬಿಸುತ್ತಾರೆ. ಇಷ್ಟೇ ಅಲ್ಲದೆ ಸಮಾಳದಿಂದ ಹೊರಹೊಮ್ಮುವ ಶಬ್ದದ ಅಬ್ಬರಕ್ಕೆ ತಕ್ಕಂತೆ ಎಲ್ಲರೂ ರೌದ್ರತೆಯಿಂದ ಕುಣಿಯುತ್ತಾರೆ. ಈ ವೀರಗಾಸೆ ಕುಣಿತಗಳಲ್ಲಿ ಒಂದು ಪ್ರಾಂತ್ಯದಿಂದ ಇನ್ನೊಂದು ಪ್ರಾಂತ್ಯಕ್ಕೆ ವ್ಯತ್ಯಾಸ ಕಂಡುಬರುತ್ತದೆ. ಉತ್ತರ ಕರ್ನಾಟಕದಲ್ಲಿ ವೀರಗಾಸೆ, ಕಾಸೆ ಕುಣಿತಗಳಿಗೆ ಪುರವಂತಿಕೆ ಎಂದು ಕರೆಯುತ್ತಾರೆ. ಹಾಗೂ

ಪುರವಂತಿಕೆಯ ಕಲಾವಿದರನ್ನು ಪುರವಂತರು ಎಂದು ಕರೆಯುತ್ತಾರೆ. ಈ ಹೆಸರಿನ ಕೆಲವೊಂದು ಕುಟುಂಬಗಳು ಉತ್ತರ ಕರ್ನಾಟಕದಲ್ಲಿ ಹೇರಳವಾಗಿರುವರು. ಕಾಸೆ ಕುಣಿತ, ವೀರಗಾಸೆ ಮತ್ತು ಪುರವಂತಿಕೆ ಕಲೆಗಳು ವ್ಯತ್ಯಾಸಕ್ಕಿಂತ ಸಾಮ್ಯತೆ ಇರುವುದೇ ಹೆಚ್ಚು. ಈ ಕಲೆಗಳು ಹೆಚ್ಚಾಗಿ ಧಾರ್ಮಿಕ ಸಂದರ್ಭಧಲ್ಲಿ ಜರುಗುತ್ತವೆ.

ವೀರಭದ್ರ ಕುಣಿತ ಮತ್ತು ಕಾಸೆ ಕುಣಿತಗಳು ಬಹಳ ಪ್ರಾಚೀನವಾದವು ಮತ್ತು ಶೈವ ಪಂಥಕ್ಕೆ ಸೇರಿದ್ದು ಒಂದು ಕಾಲದಲ್ಲಿ ದಕ್ಷಿಣ ಭಾರತದಾದ್ಯಂತ ಪಸರಿಸಿದ್ದು, ವೈಷ್ಣವ ಪಂಥಕ್ಕೆ ವಿರೋಧಿಯಾಗಿದ್ದುದು ತಿಳಿದುಬರುತ್ತದೆ. ವಿಷ್ಣು ಮತ್ತು ಇತರ ದೇವತೆಗಳನ್ನು ಸೋಲಿಸುವುದರ ಮೂಲಕ ಶಿವನ ಶೌರ್ಯವನ್ನು ಹೇಳುವುದೇ ಇಲ್ಲಿಯ ಮುಖ್ಯ ನೆಲೆಯಾಗಿದೆ. ಪುರವಂತಿಕೆಯ ಸಂಪ್ರದಾಯದಲ್ಲಿ ತಾಂತ್ರಿಕ ಪದ್ಧತಿಯಾದ ಶಸ್ತ್ರ ಹಾಕಿಸಿಕೊಳ್ಳುವುದು ವಿಶೇಷವಾದದ್ದು. ಇದನ್ನು ಗುಗ್ಗುಳ ಎಬ್ಬಿಸುವುದು ಎನ್ನಲಾಗುತ್ತದೆ. ದೇಹದ ವಿವಿಧ ಭಾಗಗಳಿಗೆ ಶಸ್ತ್ರಗಳನ್ನು ಚುಚ್ಚಿಕೊಂಡು ಕುಣಿಯುವುದೇ ಶಸ್ತ್ರ ಪವಾಡ. ಈ ಎಲ್ಲ ಕಲೆಗಳು ಇಂದಿಗೂ ನಡೆಯುತ್ತವೆ ಮತ್ತು ಜನಪ್ರಿಯವಾಗಿವೆ.

ಪುರಾಣಗಳಾದ ಕೂರ್ಮ, ವರಹ, ಭಾಗವತಗಳಲ್ಲಿ ವೀರಭದ್ರನು ಅವತಾರದ ಕಥೆ ತುಂಬಾ ಕುತೂಹಲಕಾರಿಯಾಗಿದೆ. ಎರಡು ಪ್ರಬಲ ಸಂಸ್ಕೃತಿಗಳಾದ ಆರ್ಯ ಮತ್ತು ದ್ರಾವಿಡ ಸಂಸ್ಕೃತಿಗಳ ಸಮ್ಮೇಳನ ಪೂರ್ವದ ಸಂಘರ್ಷದ ಸಂದರ್ಭದಲ್ಲಿ ಈ ವೀರಭದ್ರನ ಕಲ್ಪನೆ ಜನ್ಮ ತಾಳಿದೆ ವೀರಭದ್ರ ಒಬ್ಬ ಯಜ್ಞ ವಿರೋಧಿ ಮತ್ತು ವೈದಿಕ ವಿಚಾರ ವಿರೋಧಿಯಾದ ಉಗ್ರ ದೇವತೆ ಎಂಬ ನಂಬಿಕೆ ಪ್ರಚಲಿತವಾಗಲು ಕಾರಣವಾಯಿತು. ಈ ಪೌರಾಣಿಕ ವಿವರಗಳಿಂದ ಇಲ್ಲಿ ವಿಶೇಷವಾಗಿ ಗಮನಿಸಬೇಕಾದ ಸಂಗತಿ ಎಂದರೆ ದ್ರಾವಿಡ ಸಂಸ್ಕೃತಿಯ ಪ್ರಮುಖ ದೇವತೆ ಶಿವ ಮತ್ತು ಆರ್ಯ ಸಂಸ್ಕೃತಿಯ ಪ್ರತೀಕವಾದ ಯಜ್ಞಗಳ ಸಂಬಂಧ ಯಜ್ಞ ಪ್ರಭಲ್ಯದ ವೇದಕಾಲದಲ್ಲಿ ಇಂದ್ರ, ವರುಣ ಮತ್ತು ಅಗ್ನಿ ಮೊದಲಾದವರೇ ಪ್ರಮುಖ ಯಜ್ಞ ದೇವತೆಗಳೆನ್ನಿಸಿದರು. ವೇದಗಳಲ್ಲಿ ಶಿವನ ಉಲ್ಲೇಖ ಬರುವುದಿಲ್ಲ. ರುದ್ರನ ಉಲ್ಲೇಖ ಬರುತ್ತದೆ. ಈ ರುದ್ರನೇ ನಂತರ ಶಿವನೆಂದು ಪರಿಗಣಿತನಾಗಿದ್ದಾನೆ. ಹೀಗೆ ವೈದಿಕ ದೇವತೆಗಳ ಶ್ರೇಣಿಯಲ್ಲಿ ತಡವಾಗಿ ಸ್ಥಾನಪಡೆದುಕೊಂಡ ಶಿವನಿಗೆ ಯಜ್ಞ ಪ್ರಾಬಲ್ಯದ ಆ ಕಾಲದಲ್ಲಿ ಇಂದ್ರಾದಿ ದೇವತೆಗಳಂತೆ ಸರ್ವ ಮಾನ್ಯ ಯಜ್ಞ ದೇವತೆಯ ಸ್ಥಾನ ದೊರೆಯಲಿಲ್ಲ. ಈ ಕಾರಣದಿಂದಾಗಿ ಕೆಲವರು ಯಜ್ಞ ಮಾಡುವಾಗ ಶಿವನ ಹೆಸರಿನಿಂದ ಯಜ್ಞಕ್ಕೆ ಹವಿರ್ಭಾಗವನ್ನು ಅರ್ಪಿಸುತ್ತಿರಲಿಲ್ಲ. ಇದು ಘರ್ಷಣೆಗೆ ಎಡೆ ಮಾಡಿಕೊಟ್ಟ ಮುಖ್ಯ ಕಾರಣವಾಗಿದೆ. ಇದೇ ಸಂದರ್ಭದಲ್ಲಿ ಶಿವನಿಗೂ ಯಜ್ಞಾಹುತಿಯನ್ನು ಕೊಡಬೇಕೆಂದು ಶಿವಭಕ್ತರಾದ ಕೆಲವರು ವಾದಿಸುತ್ತಾರೆ. ಕೂರ್ಮ ಪುರಾಣದಲ್ಲಿ ಶಿವನಿಗೆ ಯಜ್ಞಾಹುತಿ ಕೊಡದಿರುವುದು ತಪ್ಪು ಎಂದು ದದೀಚಿ ಮಹರ್ಷಿ ಪ್ರಚೇತನಿಗೆ ಉಪದೇಶಿಸುವುದು ಮತ್ತು ವರಹಾ ಪುರಾಣದಲ್ಲಿ ರುದ್ರನು ಯಜ್ಞಕ್ಕೆ ಶಿವನಿಗೆ ಸಲ್ಲತಕ್ಕ ಹವಿರ್ಭಾಗವನ್ನು ನೀಡಲು ಒತ್ತಾಯಿಸುವುದು ಇದಕ್ಕೆ ನಿದರ್ಶನವಾಗಿದೆ. ಆದರೆ ಈ ಹಿನ್ನೆಲೆಯಲ್ಲಿ ನೋಡಿದರೆ ವೀರಭದ್ರನು ಯಜ್ಞ ವಿರೋಧಿಯಾಗಿರಲಿಲ್ಲ ಮತ್ತು ಶಿವನಿಗೆ ಹವಿರ್ಭಾಗ ಸಲ್ಲಿಸದಿರುವುದು ತಪ್ಪು ಎಂದು ಅಂತಹ ಯಜ್ಞಗಳನ್ನು ಶಿವನ ಅಣತಿಯ ಮೇರೆಗೆ ನಾಶ ಮಾಡಿದ ಉಗ್ರದೇವತೆಯಾಗಿದ್ದಾನೆ.

ಅಧ್ಯಾಯ ೭

# ವೀರಭದ್ರ ದೈವ ಕುರಿತ ಸಾಹಿತ್ಯ

ವೀರಭದ್ರನು ಅವತಾರ ಪುರುಷನಾಗಿ ಜನಿಸಿ ದಕ್ಷಬ್ರಹ್ಮನ ಯಜ್ಞವನ್ನು ನಾಶ ಮಾಡುವುದರ ಜೊತೆಗೆ ಹಲವಾರು ಪವಾಡಗಳನ್ನು ಮಾಡುತ್ತಾನೆ. ಈತನು ವೀರಶೈವ ಸಮುದಾಯದ ಆರಾಧ್ಯ ದೈವವಾಗಿ ಪೂಜೆಗೆ ಒಳಪಟ್ಟಿದ್ದಾನೆ. ಜೊತೆಗೆ ಈತನ ಬಗೆಗೆ ಹಲವಾರು ಸಂಪ್ರದಾಯ ಆಚರಣೆಗಳನ್ನು ನೆರವೇರಿಸುತ್ತಾರೆ. ಈತನನ್ನು ಹಾಡಿ ಹೊಗಳುವುದಕ್ಕಾಗಿ ಪುರವಂತರು, ಹಾಗೂ ವೀರಗಾಸೆ ಸಂಪ್ರದಾಯದವರಿದ್ದಾರೆ. ಈ ವೀರಭದ್ರನ ಕತೆ ವೀರಗಾಸೆಯೆಂಬ ಜನಪದ ಕುಣಿತವಾಗಿ ಬೆಳೆದುಬಂದಿದೆ. ಈ ವೀರಗಾಸೆ ಕುಣಿತಕ್ಕೂ ಪುರವಂತರ ಕುಣಿತಕ್ಕೂ ಹಲವಾರು ವ್ಯತ್ಯಾಸಗಳಿದ್ದರೂ ಮೂಲ ಪ್ರೇರಣೆ ಪೌರಾಣಿಕ ಕತೆಯೇ.

## ಶಿಷ್ಟ ಸಾಹಿತ್ಯ:

ಜನಪದರಲ್ಲಿ ವೀರಭದ್ರನ ಸಂಸ್ಕೃತಿ ಮಹತ್ವ ಪಡೆಯುವುದರ ಜೊತೆಗೆ ಶಿಷ್ಟ ಸಾಹಿತಿಗಳು ಸಹ ವೀರಭದ್ರನ ಅವತಾರ, ಆಚರಣೆ, ಗುಗ್ಗುಳ ಆಚರಣೆ ಮುಂತಾದವುಗಳನ್ನು ಕುರಿತಂತೆ ಸಾಹಿತ್ಯ ರಚಿಸಿರುವುದನ್ನು ಕಾಣಬಹುದು. ರಾಘವಾಂಕನು ರಚಿಸಿರುವ 'ವೀರೇಶ ಚರಿತೆ'ಯಲ್ಲಿ ವೀರಭದ್ರನ ಚರಿತ್ರೆಯನ್ನು ಸವಿಸ್ತಾರವಾಗಿ ಹೇಳುತ್ತಾನೆ. ಈ ಚರಿತೆಗೆ ಮಹಾಕವಿ ಹರೀಶ್ವರನ ರಘಟಾ ಪ್ರಬಂಧದಲ್ಲಿರುವ ವೀರಭದ್ರ ದೇವರ ರಗಳೆ ಅತೀ ಮುಖ್ಯವಾದ ಆಧಾರ ಗ್ರಂಥ. ಮಹಾಕವಿ ರಾಘವಾಂಕನು ಬರೆದ ವೀರೇಶ ಚರಿತೆಯಲ್ಲಿ ವೀರಭದ್ರನನ್ನು ವೀರ ಕುಲಾಧೀಶ್ವರ. ಹಲಗೆಯ ಗಂಡುಗಲಿ, ನಡುನೆತ್ತಿಯಲಿಂಗ ಎಂದು ಬಣ್ಣಿಸಿದ್ದಾನೆ. ಚನ್ನಬಸವ ಪುರಾಣದಲ್ಲಿ ವೀರಭದ್ರನಿಗೆ ಸಾವಿರ ಮುಖ, ಎರಡು ಸಾವಿರ ಹಸ್ತ, ಮೂರು ಸಾವಿರ ನೇತ್ರಗಳ ಬಗ್ಗೆ ಹೇಳಿದೆ. ಕೆಲವು ಕಡೆ ಏಕಮುಖ, ಚತುರ್ಭುಜ, ಏಕಮುಖ, ಮೂವತ್ತೆರಡು ಭುಜ ಹಾಗೂ ಪಂಚಮುಖ, ಸಹಸ್ರಭುಜ ಎಂದು ಹೇಳಿದೆ. ಇದಲ್ಲದೆ ಕೂರ್ಮ ಪುರಾಣ, ವರಹಾ ಪುರಾಣ, ಭಗವತ ಪುರಾಣದಲ್ಲಿ ವಿವರಿಸಲಾಗಿದೆ. ಹಂಪೆಯ ಸ್ಥಳ ಪುರಾಣವಾದ ಪಂಪಾ ಮಹಾತ್ಮೆಯಲ್ಲಿ, ಪಂಪಾ ಕ್ಷೇತ್ರ ನಿವಾಸದಲ್ಲಿ ಅಸುರರ ಉಪಟಳದಿಂದ ತಮ್ಮನ್ನು ರಕ್ಷಿಸಬೇಕೆಂದು ಶಿವನನ್ನು ಪ್ರಾರ್ಥಿಸಿದಾಗ ಶಿವನು ವೀರಭದ್ರ ಮತ್ತು ಭದ್ರ ಕಾಳಿಯರಿಗೆ ಅಸುರರನ್ನು ಶಿಕ್ಷಿಸಿ ನಂತರ ಪಂಪಾ ಕ್ಷೇತ್ರದ ದಕ್ಷಿಣ ದಿಕ್ಕಿನಲ್ಲಿ ನೆಲೆಸಲು ಆಜ್ಞಾಪಿಸಿದನೆಂಬ ವೃತ್ತಾಂತವಿದೆ.

ಈ ಮೇಲೆ ಹೇಳಿದ ಸಾಹಿತ್ಯ ಕೃತಿ ಹಾಗೂ ಪುರಾಣಗಳಲ್ಲಿ ವೀರಭದ್ರನ ವಿಚಾರವು ಈ ರೀತಿಯಾಗಿದೆ. ಮಹಾಕವಿ ರಾಘವಾಂಕನು ವಿರಚಿಸಿದ 'ವೀರೇಶ ಚರಿತೆ' ಯಲ್ಲಿ ವೀರಭದ್ರನ ಚರಿತ್ರೆಯನ್ನು ಸವಿಸ್ತಾರವಾಗಿಹೇಳುತ್ತಾನೆ. ಈ ಚರಿತೆಗೆ ಮಹಾಕವಿ ಹರೀಶ್ವರನ ರಘಟಾ ಪ್ರಬಂಧದಲ್ಲಿರುವ '' ವೀರಭದ್ರ ದೇವರ ರಗಳೆ'' ಅತಿ ಮುಖ್ಯವಾದ ಆಧಾರ ಗ್ರಂಥ. ರಾಘವಾಂಕನ ಗುರುವಾದ ಹರಿಹರನು ವೀರಭದ್ರ

ದೇವರ ರಗಳೆಯನ್ನು ಲಲಿತ ರಗಳೆಯಲ್ಲಿ ಬರೆದರೆ, ರಾಘವಾಂಕನು ವೀರಭದ್ರ ಚರಿತ್ರೆಯನ್ನು ಉದ್ದಂಡ ಷಟ್ಪದಿಯಲ್ಲಿಬರೆದಿದ್ದಾನೆ. ಈ ಕಾವ್ಯದಲ್ಲಿ ೧೨೭ ಪದ್ಯಗಳಿಂದ ಕೂಡಿದೆ, ೨ ಸಂದಿಗಳಿವೆ. ವೀರಭದ್ರ ದೇವರ ರಗಳೆಯನ್ನು ಉದ್ದಂಡ ಷಟ್ಪದಿಯಲ್ಲಿ ಬರೆದಿದ್ದಾನೆ. ಶಿವ ದ್ವೇಶಿಯಾಗಿ ಯಾಗವನ್ನು ನಡೆಸುತ್ತಿದ್ದ ದಕ್ಷ ಬ್ರಹ್ಮನನ್ನು ಶಿವನ ಹಣೆಗಣ್ಣಿನಲ್ಲಿ ಹುಟ್ಟಿದ ವೀರಭದ್ರನು ನಾಶಮಾಡಿದ ಕಥೆ ಇಲ್ಲಿ ಚಿತ್ರಿತವಾಗಿದೆ. ಈ ಕಥೆಯು ಸ್ಕಂದ ಪುರಾಣ, ಶಿವ ಪುರಾಣ, ವಾಯು ಪುರಾಣ, ಲಿಂಗ ಪುರಾಣದಲ್ಲಿ ಅಭಿವರ್ಣಿತವಾಗಿದೆ.

ಮೊದಲು ಈ ವೀರಭದ್ರನ ಚರಿತ್ರೆಯನ್ನು ಕನ್ನಡದಲ್ಲಿ ಬರೆದವನು ಹರಿಹರನು. ಅನಂತರ ಇದನ್ನು ಷಟ್ಪದಿಯ ಶೈಲಿಯಲ್ಲಿ ರಾಘವಾಂಕ, ಮುಂದೆ ಕವಿ ವೀರಭದ್ರ ರಾಜನು ಕ್ರಿ.ಶ. ೧೫೨೦ರಲ್ಲಿ ''ವೀರಭದ್ರ ವಿಜಯ' ಎಂಬ ಗ್ರಂಥವನ್ನು ಚಂಪೂ ಶೈಲಿಯಲ್ಲಿ ರಚಿಸಿರುವುದು ತಿಳಿದುಬರುತ್ತದೆ. ಮಹಾ ಕವಿ ಷಡಕ್ಷರ ದೇವನು ಕ್ರಿ.ಶ. ೧೬೫೫ರಲ್ಲಿ ''ವೀರಭದ್ರದಂಡಕ'' ಎಂದು ಬರೆದಿರುವನು. ಹಾಗೆಯೇ ತೆಲುಗಿನಲ್ಲಿ ಒಮ್ಮೆರ ಪೊತನಾಮತ್ಯನೆಂಬ ಮಹಾಕವಿಯು ''ವೀರಭದ್ರ ವಿಜಯಮು'' ಎಂಬ ಚಂಪೂ ಗ್ರಂಥವನ್ನು ಬರೆದಿದ್ದಾನೆ. ಇದು ಆಂಧ್ರ ಸಾಹಿತ್ಯದಲ್ಲಿ ಸುಪ್ರಸಿದ್ಧವಾಗಿದೆ. ವೀರೇಶ ಚರಿತೆಯು ವೀರರಸದ ದೇವತೆಯಾದ ವೀರಭದ್ರನಿಗೆ ಅನುಗುಣವಾದ ಶೈಲಿಯಿಂದ ಮತ್ತು ಗ್ರಂಥಕ್ಕೆ 'ಮೀಸಲು ಕವಿತೆ'' ಎಂಬ ಮತ್ತೊಂದು ಹೆಸರಿಸುತ್ತಾನೆ. ಈ ಗ್ರಂಥದ ಪದ್ಯಗಳನ್ನು ಓದುವಾಗ ಒಂದು ಬಗೆಯ ಗತಿಯ ಆವೇಶವು, ಸ್ಫೂರ್ತಿಯು ಉಂಟಾಗುತ್ತದೆ. ಅಲ್ಲದೆ ಈ ಚರಿತೆಯ ಛಂದಸ್ಸಿಗೆ ದಂಡಿನ ಶಿಬಿರದ ಪ್ರತಿಯಲ್ಲಿ ''ಮೀಸಲು ಕವಿತೆ'' ಎಂದು ಹೇಳಿದೆ. ವೀರೇಶ ಚರಿತೆಯನ್ನು ಬರೆದ ಮಹಾಕವಿ ರಾಘವಾಂಕನು ಹರಿಹರನ ಶಿಷ್ಯನೆನಿಸಿ ಹಂಪೆಯ ವಿರೂಪಾಕ್ಷನ ಸಾನಿಧ್ಯವನ್ನು ಪಡೆದು ಗುರು ಪದ್ಮರಸನ ಅನುಗ್ರಹಕ್ಕೆ ಪಾತ್ರನಾದುದು ನಮಗೆ ತಿಳಿದುಬರುತ್ತದೆ.

ಈ ವೀರೇಶ ಚರಿತ್ರೆಯನ್ನು ರಾಘವಾಂಕನು ಓರಂಗಲ್ಲಿಗೆ ಹೋಗಿ ಅಲ್ಲಿ ವೀರೇಶನ ಮುಂದೆ ನಿಂತು ರಚಿಸಿದ್ದಾನೆಂದು ಎಂಟನೆಯ ಸಂದಿಯಲ್ಲಿ ''ಕಖತಿನಾಮಂ ವೀರೇಶ್ವರ ಚರಿತಂ, ಬಗಗಿ ಕೃತಿಪತಿಯೆ ಓರಂಗಲ್ಲಿನ ವೀರೇಶವರನೀ ಕೃತಿಗೆ ಸಹಗುರು ಸದ್ಭಕ್ತ ಸಮೂಹಂ ಕಖಿಲೆಯಂ ಮುದದಿಂ ಪೇಳುವನು ಯತಿಪತಿ ಹಂಪೆಯ ಹರಿದೇವರ ಕಾರುಣ್ಯದ ಸುತ ಶಿವ ಕವಿ ಭೃತ್ಯಂ ಹಂಪೆಯ ರಾಘವಾಂಕ ಪಂಡಿತನೆಸಲೀ ಕೃತಿಯಂ ವೆಚ್ಚದ ಸಜ್ಜನರಾರೀವಸುಧಾ ಚಕ್ರದೊಳು'', ಈ ಕಾವ್ಯದ ಅಧಿಪತಿ ಓರಂಗಲ್ಲಿನ ವೀರಭದ್ರಸ್ವಾಮಿ, ಈ ವಿಚಾರವನ್ನು ಭೈರವೇಶ್ವರ ಕಾವ್ಯದ ಕಥಾಮಣಿ ಸೂತ್ರದಲ್ಲಿಯು, ಚನ್ನಬಸವ ಪುರಾಣದಲ್ಲಿ ಪ್ರಸ್ತಾಪಿಸಲಾಗಿದೆ. ಆದ್ದರಿಂದ ರಾಘವಾಂಕನು ಓರಂಗಲ್ಲಿಗೆ ಹೋಗಿ, ಅಲ್ಲಿ ಈ ವೀರೇಶಚರಿತೆಯನ್ನು ರಚಿಸಿರುವುದಾಗಿ ತಿಳಿದುಬರುತ್ತದೆ. ಆಗಿನ ಸಮಯದಲ್ಲಿ ಓರಂಗಲ್ಲಿನಲ್ಲಿ ಆಳುತ್ತಿದ್ದ ರಾಜ ಪ್ರತಾಪರುದ್ರನು ವೀರಶೈವ ಧರ್ಮದ ಅಭಿಮಾನಿಯಾಗಿದ್ದನು. ಇವನು ಓರಂಗಲ್ಲಿನಲ್ಲಿ ವಿದ್ಯಾಮಂದರಿವೆಂಬ ಸಂಸ್ಥೆಯನ್ನು ಸ್ಥಾಪಿಸಿ ಅದಕ್ಕೆ 'ಶಿವದೇವನು' ಅಧ್ಯಕ್ಷನಾಗಿದ್ದನು. ರಾಘವಾಂಕನು ಅಲ್ಲಿಗೆ ಹೋಗಿ ವೀರೇಶ ಚರಿತೆಯನ್ನು ರಚಿಸಿ ವೀರೇಶನನ್ನು ಸಾಕ್ಷಾತ್ಕಾರ ಮಾಡಿಕೊಂಡು ಪ್ರತಾಪರುದ್ರನ ಮೆಚ್ಚುಗೆಯನ್ನು ಪಡೆದಿರುವುದು ತಿಳಿದುಬರುತ್ತದೆ.

"ವೀರೇಶ ಚರಿತ್ರೆಯು" ಒಂದು ಚಿಕ್ಕ ಖಂಡ ಕಾವ್ಯ. ರಾಘವಾಂಕ ಕವಿಯ ಪಾಂಡಿತ್ಯದ ಮೀಸಲು ಗವಿತೆಯಿದು. ಇದರಲ್ಲಿ ನಾವಿನ್ಯತೆಯನ್ನು, ಹೊಸ ಪ್ರಯೋಗಗಳನ್ನೂ ಕಾಣಬಹುದು. ವಾರ್ಧಕ ಷಟ್ಪದಿಯ ಚರಗಳಲ್ಲಿ ಬರುವ ಐದೈದು ಮಾತ್ರೆಯ ೪ ಗಣಗಳಿಗೆ ಪ್ರತಿಯಾಗಿ ನಾಲ್ಕು ನಾಲ್ಕು ಮಾತ್ರೆಯ ೫ ಗಣಗಳನ್ನು ಪ್ರಯೋಗಿಸುವನು. ವೀರೇಶ ಚರಿತ್ರೆ ಉದ್ದಂಡ ಷಟ್ಪದಿಯಾಗಿ ಹೆಸರು ಪಡೆದಿದೆ. ಒಟ್ಟಿನಲ್ಲಿ ಶ್ರೇಷ್ಠ ಕಥನ ಕಾವ್ಯ, ಭವ್ಯ ಕಾವ್ಯ ಇದಾಗಿದೆ. ಶ್ರೀ ರಾಘವಾಂಕ ಕವಿ ತನ್ನ ಮನೆ ದೇವರಾದ ಹಂಪೆಯ ಉದ್ದಾನ ವೀರಭದ್ರ ಸ್ವಾಮಿಯ ನೆನಹಿನಲ್ಲಿ ಕೃತಿ ರಚಿಸಿದ್ದಾರೆ.

ಈ ಭೂಮಿಯಲ್ಲಿ ಶಿವನಿಗೆ, ಶಿವಭಕ್ತರಿಗೆ ನಾಲಿಗೆಯನ್ನು ಮತಿಯನ್ನೂ ಮಾರಿಕೊಳ್ಳಬೇಕೆಂದು ಹರಿಹರ ರಾಘವಾಂಕರ ಇಚ್ಛೆಯಾಗಿತ್ತು. ಇದನ್ನು ಮರೆತು ಬ್ರಹ್ಮ, ಹರಿ, ಇಂದ್ರ ಎಂಬ ಉಡುಕಳಿ ದೇವರುಗಳನ್ನು ಸ್ತುತಿಸಿದರೆ ಶಿವ ದೂಷಕನಿಗೆ ದೋಷ ತಗಲುತ್ತದೆಯಂತೆ. ಅಂತೆಯೇ ರಾಘವಾಂಕನಾಶ ರಹಿತನೂ, ಭಕ್ತ ರಕ್ಷಕನೂ, ಮೋಕ್ಷ ಪ್ರದನೂ, ಹೊಟ್ಟೆಯೊಳಗೇ ಬ್ರಂಹ್ಮಾಂಡವುಳ್ಳವನೂ, ಮರುವಿನ ಮರುಳಾಟದ ಲೋಕಗಳನ್ನು ಹುಡಿಗೈದ ನರಸಿಂಹನ ಹಣೆಯ ಲಿಪಿಯನ್ನು ಅಳಿಸಿದವನೂ ಆದ ಆ ವೀರಭದ್ರನ ಲೀಲಾ ಕಥೆಯನ್ನು ಹೇಳಿ ಪುಣ್ಯ ಪಡೆದನೆಂದು ತಿಳಿದುಬರುತ್ತದೆ.

**ದಕ್ಷಯಜ್ಞ :** ವೀರೇಶನ ಅವತಾರಕ್ಕೆ ಆತನ ಅಜ್ಜ ದಕ್ಷಬ್ರಹ್ಮನೇ ಕಾರಣ. ದಕ್ಷಬ್ರಹ್ಮ ಪ್ರಸೂತಿಯ ಗಂಡ ಮತ್ತು ಪ್ರಸೂತಿಯು ಶತ ರೂಪೆಯ ಮಗಳು. ಇವನು ಋಷಿ ಶ್ರೇಷ್ಠನೆಂದು ಕರೆಯಲ್ಪಟ್ಟಿದ್ದಾನೆ. ದಕ್ಷ ಬ್ರಹ್ಮನಿಗೆ ಅರವತ್ತು ಮೂರು ಜನ ಹೆಣ್ಣು ಮಕ್ಕಳು ಹುಟ್ಟಿದರು. ಇವರಲ್ಲಿ ಕೊನೆಯ ಮಗಳೇ ದಾಕ್ಷಾಯಣಿ. ಇವಳು ಮಹಾ ವ್ಯಕ್ತಿಯಾಗುವ ಚಿನ್ಹೆ ಚಿಕ್ಕವಳಿದ್ದಾಗಲೇ ಕಂಡು ಬಂದವು. ಸದಾಶಿವ ಲಿಂಗಪೂಜೆ ಶಿವಮಂತ್ರ ಪಠಣೆ. ಅವಳ ವೈಶಿಷ್ಟ್ಯವಾಗಿತ್ತು. ಅವಳ ಮನೋಗತದಂತೆ ದಾಕ್ಷಾಯಣಿಯನ್ನು ದಕ್ಷಬ್ರಹ್ಮ ಶಂಕರನಿಗೆ ಕೊಟ್ಟು ವಿವಾಹ ಮಾಡಿದ. ಉಳಿದ ೬೨ ಮಂದಿ ಹೆಣ್ಣು ಮಕ್ಕಳನ್ನು ಅನೇಕ ದೇವತೆಗಳಿಗೆ ಲಗ್ನ ಮಾಡಿಕೊಟ್ಟ. ಹೀಗೆ ದಕ್ಷಬ್ರಹ್ಮ ದೇವಾನು ದೇವತೆಗಳ ಮಾವನೆನಿಸಿದ.

ಒಂದು ಸಲ ದಕ್ಷಬ್ರಹ್ಮ ಸಕಲ ಅಳಿಯಂದಿರನ್ನು ಸಂದರ್ಶಿಸುವ ಸಲುವಾಗಿ ಪಯಣಿಸಿದ. ಎಲ್ಲಾ ಹೆಣ್ಣು ಮಕ್ಕಳು ತಮ್ಮ ತಂದೆ ಬಂದಿರುವನೆಂಬ ಆನಂದದಿಂದ ವಿವಿಧ ಭಕ್ಷಭೋಜ್ಯಗಳನ್ನು ತಯಾರಿಸಿ ತೃಪ್ತಿಪಡಿಸುತ್ತಿದ್ದರು. ದಕ್ಷನ ಆನಂದಕ್ಕೆ ಮೇರೆಯಿಲ್ಲದಾಯಿತು. ಸಂತಸದ ಹಿಗ್ಗಿನಲ್ಲಿ ಮೈಮರೆತ ಸಚ್ಚಿದಾನಂದತ್ವವನ್ನು ಮರೆತು 'ಅಹಂಬ್ರಹ್ಮಸ್ಮಿ' ಎಂಬಂತಾದ. ಒಬ್ಬೊಬ್ಬರ ಗೃಹದಲ್ಲಿ ೨,೩ ದಿವಸಗಳಿದ್ದು, ಮಾರನೇದಿನ ಮತ್ತೊಬ್ಬ ಮಗಳ ಮನೆಗೆ ಹೋಗುತ್ತಿದ್ದ. ಕೊನೆಯದಾಗಿ ಕೊನೆಯ ಪುತ್ರಿಯ ಮನೆಗೆ ಹೋಗುವ ಸಂದರ್ಭ ಬಂತು.

ಸರಸಿಜಭವ (ಬ್ರಹ್ಮ), ಸರಸಿಜಲೋಚನ (ವಿಷ್ಣು), ಸರಸಿಜಿಪ (ಚಂದ್ರ), ಸರಸಿಜ ಮಿತ್ರ (ಸೂರ್ಯ) ಮೊದಲಾದ ದೇವತೆಗಳಿಂದ ದಕ್ಷ 'ಸನುಮಾನದ' ವಂದನೆಯನ್ನು ಉಪಚಾರವನ್ನು, ಹರಕೆಯನ್ನು, ಅಭಿಷೇಕವನ್ನು, ಅಕ್ಷತೆಯನ್ನು, ಉಡುಗೊರೆಯನ್ನು ಅತ್ಯುತ್ಸಾಹದಿಂದ ಸ್ವೀಕರಿಸಿದ. ದೇವಾನುದೇವತೆಗಳಿಂದ ಮೃತನಾದ ಪರಮನನ್ನು (ಶಿವ) ಕೊಂಬಾಸಕ್ತಿಯಿಂದ ಎರಗಿಸಿ ದಕ್ಷ ಸರಸರನೇ ಸಭೆಗೆ ಬಂದ.

ಕೈಲಾಸದಲ್ಲಿ ಶಿವನು ಮಹಾಭಕ್ತರ ಸಮೂಹದಲ್ಲಿ ಕಂಗೊಳಿಸುತ್ತಿದ್ದನು. ಕೈಲಾಸವಾದರೂ ಬೆಳದಿಂಗಳ ರಾಶಿಯಂತೆ ವಿಷಯಗೊರಳಿನ ಕೀರ್ತಿಲತೆಯಂತೆ, ಭಾಗ್ಯದ ಹೆಬ್ಬೆಳೆಯಂತೆ, ವಸುಧೆಯ ಸಂತೆಯಂತೆ ಶೋಭಿಸುತ್ತಿತ್ತು. ನವಮಣಿಯ ಸಿಂಹಾಸನದಲ್ಲಿ ಕಲ್ಪವೃಕ್ಷದಂತಹ ಶಿವನು ಭಕ್ತರ ಸನ್ಮಾನವನ್ನು ಸ್ವೀಕರಿಸುತ್ತಿದ್ದನು.

ಭಾರತ (ಸರಸ್ವತಿ) ವೀಣಾವಾದನ ಮಾಡುವಳು ತುಂಬರ, ನಾರದ, ನಂದಿ ಮುಂತಾದವರು ಒಳ್ಳೆ ಬೆಡಗಿನ ನೃತ್ಯ ಮಾಡುವರು. ರಂಭೆಯ ಲಾವಣ್ಯದ ಸೊಗಸು, ಭೃಂಗೀಶನ ನೃತ್ಯ, ಬ್ರಹ್ಮನ ವೇದ ಬೋಧನೆ, ಚಂಡೇಶನ ಭಕ್ತಿ ಮೊದಲಾದ ಮಹಿಮರ ಭಕ್ತಿಯ ಸಾಗರದ ನಡುವೆ ಸುಖಸಾಗರವನ್ನೂ ಭವದೂರನೂ, ಮಹಿಮಾಗಾರನೂ ಮೆರೆಯುತ್ತಿದ್ದ.

ಆನೆಯ ಬಾಲದ ಹೊಡೆತದಿಂದ ಶರಧಿಯ ತೆರೆಗಳಲ್ಲಿ ಚೆಲ್ಲುವ ಮಣಿಗಳು, ಶ್ವೇತ ದ್ವೀಪವನ್ನು ಅಣಕಿಸುತ್ತಿವೆ. ಶೋಭಾಯಮಾನವಾದ ದ್ವೀಪಕಲ್ಪದ ಉತ್ತರಭಾಗ ರಮಣೀಯವಾಗಿತ್ತು. ಆ ಭಾಗದ ಅಂತ್ಯದಲ್ಲಿ ಶಶಿಬಿಂಬದ ತೊಟ್ಟಿಲಂತೆ ಬೆಳದಿಂಗಳ ಘಟ್ಟಿಯಂತೆ ವಿಷಕಂಠನ ಕೀರ್ತಿಲತೆಯಂತೆ, ಭಕ್ತರ ಭಾಗ್ಯದ ಹೆಬ್ಬೆಳೆಯಂತೆ ವಸುಧೆಯ ಸಂತೆಯಂತೆ ಶಿವನ ಕೈಲಾಸ ಶೋಭಿಸುತ್ತಿತ್ತು.

ಇಂಥ ಸಮಯದಲ್ಲಿ ಕೆಂಡದ ತೊಡಿಗೆಗೆ ಮನವಿಟ್ಟರಗಿನ ಪುತ್ಥಳಿಯಂತೆ ಶಿವನನ್ನು 'ಎರಗಿಸಿ' ಕೊಳ್ಳುವ ಭರವಸೆಯಲ್ಲಿ ದಕ್ಷ ಬರುತ್ತಾನೆ. ಇವನ ಗರ್ವವನ್ನು ಕಂಡ 'ಶಿವ' ನೋಡಿಯೂ ನೋಡದಂತೆ ಇದ್ದ.

ದಕ್ಷನಿಗೋ ಹೇಗಾದರೂ ಶಿವನನ್ನು ಪಾದದೆಡೆಗೆ ಕೆಡವಿಸಿಕೊಳ್ಳಬೇಕೆಂಬ ಹೆಬ್ಬಯಕೆ ಈ ಮನೋಸ್ಥಿತಿಯನ್ನು ವರ್ಣಿಸುವಾಗ ಕವಿ ಕೊಡುವ ಸಾದೃಶ್ಯ 'ಅರಗಿನ ಪುತ್ಥಳಿ ಕೆಂಡದ ತೊಡಿಗೆಗೆ ಮನವಿಟ್ಟಂತಾಯ್ತು' ಎಂದು.

ದೇವಾನುದೇವತೆಗಳಿಂದ ಆದರಿಸಲ್ಪಟ್ಟ ದಕ್ಷ ಮದವೇರಿ ಹೋಗಿದ್ದ. ಶಿವ ಸಭೆಯಲ್ಲಿ ಅಂಥ ಆದರ ಸಿಗಲಿಲ್ಲ. ಮರುಳ ಶಂಕರ ಆದರಿಸದಿದ್ದರೆ, ಮಗಳು ಆದರಿಸಲೆಂಬ ಬಿಂಕದಿಂದ ಮಗಳ ಕಡೆ ನೋಡಿದ. 'ಪತಿ ಆದರಿಸದವರನ್ನು ಆದರಿಸುವುದು ಸತಿಗೆ ಅಷ್ಟು ಹಿತವಲ್ಲವೆಂದು' ದಾಕ್ಷಾಯಣಿಯೂ ಸುಮ್ಮನಿದ್ದಳು. ತನ್ನನ್ನು ಅವಮಾನಗೊಳಿಸಿದ ಶಿವ ಶಿವೆಗೆ ತಕ್ಕ ಪ್ರತಿಕಾರ ಮಾಡದಿದ್ದರೆ, ತಾನು ದಕ್ಷನೇ ಅಲ್ಲವೆಂದು ಘುಡಿಘುಡಿಸಿ ಕೋಪಾವೇಶದಲ್ಲಿ ಮುಂದೇನಾಗುವದೆಂಬುದನ್ನು ಅರಿಯದೆ ಇದ್ದ ದಕ್ಷನ ರೀತಿಯೇ ''ಚೇತರಿಸಿದ ಚಿಂತಾ ಚಿತ್ರದಂತೆ ಸ್ಮೈವೆರಗಿನ ಸಾಕಾರದಂತೆ ಕೋಪದ ಕರುವಿನ ಕಂದೆರವೆಯಂತೆ'' ಇದ್ದ ದಕ್ಷ ಕೆಡುಕನ್ನೇ ಚಿಂತಿಸುತ್ತಿದ್ದ.

ತಾನೊಂದು ಯಜ್ಞ ಮಾಡಿ ಶಿವನ ದೇವತ್ವವನ್ನು ಸುಡುವುದಾಗಿಯೂ, ಓಲಗದಲ್ಲಿ ತನ್ನನ್ನು ಮನ್ನಿಸದಿದ್ದ ಅಮರರ ತಲೆ ಕಡಿಯುವುದಾಗಿಯೂ, ನಿರ್ಧರಿಸಿದ ಕೂಡಲೇ ಮಂತ್ರಿ ವಿದಗ್ಧನನ್ನು ಕರೆಯಿಸಿ ರುದ್ರನ ಸರ್ವೇಸ್ವರತ್ವವನ್ನು ಪಡೆಯಲು ಮಹಾಯಾಗವನ್ನು ನಡೆಸಬೇಕು. ಅದಕ್ಕಾಗಿ ತಕ್ಕ ಸಿದ್ಧತೆಗಳನ್ನು ಮಾಡಲು ಹೇಳಿದ. ಆದಕ್ಕೆ ವಿದಗ್ಧನ ಸೂಚನೆಯಿಂತಿದೆ.

'' ಎಲ್ಲಾ ವಸ್ತುಗಳನ್ನು ಧರೆ ಪಡೆಯಬಲ್ಲುದು. ಆದರೆ ಧರೆಯನ್ನೇ ಪಡೆಯಬಲ್ಲ ಸುವಸ್ತುಗಳೇ ಇಲ್ಲ. ಹೀಗಿರುವಾಗ ಶಿವನೊಲಿದರೆ ಯಾಗ, ಸಹಸ್ರ ಫಲವನ್ನು ಕೊಡಬಲ್ಲದು. ಅದನ್ನು ಬಿಟ್ಟು ಶಿವನಿಲ್ಲದೆ ಯಾಗವು ಶಿವ ಪದವಿಯನ್ನು ಕೊಡಲಾರದು. ಆದ್ದರಿಂದ 'ಹೊಲಸದ ಕಾರ್ಯವನ್ನು ಮಾಡುವುದು ಸರಿಯಲ್ಲ' ಎಂಬ ಸೂಚನೆಯನ್ನು ಕೇಳಿದ ದಕ್ಷ ಕಿಡಿಕಿಡಿಯಾದ.

''ಹೇಳಿದಷ್ಟೆ ಮಾಡು, ಕೇಳಿದಷ್ಟೆ ನುಡಿ, ಇಲ್ಲವಾದರೆ ಕೆಡುಹುತ್ತೇನೆಂದು'' ಗರ್ಜಿಸಿದ, ಇದರಿಂದ ಉಪಾಯವಿಲ್ಲದೆ ವಿದಗ್ಧಯಾಗ ಸಿದ್ಧತೆಗೆ ಅಣಿಯಾದ. ಕಾಶಿಗೆ ಪಶ್ಚಿಮದಲ್ಲಿ 'ಕನಖಳ' ಪುರದಲ್ಲಿ ಯಾಗಶಾಲೆ ನಿರ್ಮಿತವಾಯ್ತು. ಯಜ್ಞ ವೇದಿಕೆಯನ್ನು ಡಮರುಗಾಕಾರದಲ್ಲಿ ಸಿದ್ಧಪಡಿಸಿದರು. ಯಜ್ಞಕ್ಕೆ ಬೇಕಾದ 'ಹೊಸಮರ' ಸುರಭಿ, ಕಪಾಲ, ಉಲೂಖ, ಮೃಗಾಜಿನ, ಸರ್ಪಿ, ಸೋಮ, ಕುಶ, ಮಹಾವಿರಣಿ, ವಿಶಾಣ, ಶಂಖ, ಶಶಕ, ಬಾಧಿರ, ಉಪಶಮಿ, ಪಶು, ಶಸ್ತ್ರ, ರಜ್ಜು ಮೊದಲಾದ ಸಾಮಗ್ರಿಗಳನ್ನು ಶೇಖರಿಸಿದರು. ಯಜ್ಞ ಮುಖ್ಯಸ್ಥರಾದ ಹೋತೃ, ಸದಸ್ಯ, ಬ್ರಹ್ಮ ಅಧ್ವರ್ಯು ಮೊದಲಾದವರನ್ನು ಕರೆ ತಂದರು.

ಈ ಯಜ್ಞಕ್ಕೆ ಶಿವನನ್ನು ಬಿಟ್ಟು ಎಲ್ಲಾ ದೇವಾನು ದೇವತೆಗಳಿಗೆ ಆಮಂತ್ರಣ ಕಳಿಸಿದರು. ಕರೆದರೆ ಬಾರದಿರುವವರನ್ನು ಕೊಂದಿಕ್ಕುವುದಾಗಿ ದಕ್ಷ ಸಾರಿದ, ಈ ಯಜ್ಞಕ್ಕೆ ಹರಿವಾಣೀಶ್ವರ, ದಿಗಧೀಶ್ವರರು, ದೇವತೆಗಳು, ವಿದ್ಯಾಧರರು, ಕಿನ್ನರರು, ಖೇಚರರು, ಗರುಡರು, ಉರಗರು, ಗುಹ್ಯಕರು, ಗಂಧರ್ವರು, ಮರುದ್ಗಣರು ತುರುಗಾನನರು ಮುಂತಾದವರೆಲ್ಲರೂ ಆಗಮಿಸಿದರು.

ಯಜ್ಞದ ಗದ್ದುಗೆಯ ಮೇಲೆ ಹರಿಯೇ ಕುಳಿತರಲೆಂದು ತೀರ್ಮಾನ ಮಾಡಿದರು. ಮಹಾ ಶಿವಭಕ್ತನೂ ಎರಡನೇ ಶಂಕರನಂತಿರುವವನೂ ಆದ ದಧೀಚಿಗೆ ಯಜ್ಞಕ್ಕೆ ಶಿವಬಂದಿದ್ದಾನೆಂದು ಸುಳ್ಳು ಹೇಳಿ ಕರೆತಂದರು. ಯಜ್ಞ ಸಭೆಯಲ್ಲಿ ಶಿವ ಕಾಣಬಹುದೆಂದು ಆತುರದಿಂದ ಅತ್ತಿತ್ತ ಕಣ್ಣಾಡಿಸಿದ 'ಯಜ್ಞದ ವಡೆಯನೂ, ಜಗತ್ಪತಿಯೂ ಆದ ಶಂಕರನೆಲ್ಲಿ? ಎಂದು ಅಬ್ಬರಿಸಿದ. ಅದಕ್ಕೆ ದಕ್ಷ ಪ್ರತ್ಯುತ್ತರವಾಗಿ 'ಶಿವನು ಅಪವಿತ್ರ ಮೂಳೆಗಳನ್ನು, ಚರ್ಮಗಳನ್ನೂ ಅಲಂಕರಿಸಿಕೊಂಡು ಸುಡುಗಾಡಿನಲ್ಲಿ ವಾಸಿಸುವನೆಂದು' ಕಟು ನುಡಿದ.

ಶಿವ ನಿಂದೆಯನ್ನು ಕೇಳಿದ ದಧೀಚಿಗೆ ಕಣ್ಣಿನಲ್ಲಿ ಕಿಡಿಗೆದರಿ ಉರಿವ್ಯಾಪಿಸಿತು. ನುಡಿ ಸಿಡಿಲಾಗಿ ಮೊಳಗಿತು. ಹುಬ್ಬು ಗಂಟಿಕ್ಕಿ ತುಟಿ ಅಳ್ಳಾಡಿತು. ಪೂಸಿದ ವಿಭೂತಿ ಕರಗಿತು. ಕೈಯೊಳಗಿನ ಕಮಂಡಲದ ನೀರು ಕುದಿಯಿತು. ಮೈ ಕೈ ಕೂದಲು ನಿಮಿರಿದವು. ಯೋಗ ದಂಡವು ಜಾರಿತು. ಸಿಟ್ಟಿನಿಂದ ''ದಕ್ಷ ನಿನ್ನ ಯಾಗ ನಡೆಯದಿರಲಿ, ನಿನ್ನ ತಲೆ ಹುಡಿಯಾಗಲಿ' ಎಂದು ಶಪಿಸಿದ.

ಅಲ್ಲಿಗೆ ಬಂದ ಅಗಸ್ತ್ಯ, ವಸಿಷ್ಠ, ಭೃಗು, ಗೌತಮ, ಉಪಮನ್ಯು ಮೊದಲಾದವರು '' ಇದು ನಿಂದೆಯ ಯಜ್ಞವೆಂಬುದು ನಮಗೆ ತಿಳಿಯಲಿಲ್ಲ. ಶಿವಬಂದನೆಂದು ತಿಳಿದೇ ನಾವು ಬಂದೆವು. ನಾವು ಈ ಶಾಪಕ್ಕೆ ತುತ್ತಾಗಲಾರೆವು ಎಂದು ದಧೀಚಿ ಋಷಿಯೊಂದಿಗೇ ನಡೆದು ಹೋದರು. ಈ ವೇಳೆಯಲ್ಲಿ ಸುಮಾರು ೩೨ ಸಾವಿರ ಜನ ಶಾಪಕ್ಕೊಳಗಾದರು. ಈ ವಿಚಾರವನ್ನು ನಾರದರು, ಶಿವನಿಗೆ ಹೇಳಲು ಸರ್ರನೆ ಬಂದರು. ದಕ್ಷನ ದಾಕ್ಷಿಣ್ಯಕ್ಕೆ ಕಟ್ಟು ಬಿದ್ದವರೆಲ್ಲರೂ ಯಜ್ಞ ಮಾಡಲು ಸಿದ್ಧರಾದರು. ದಕ್ಷನ ಯಜ್ಞಾಚರಣೆ ಹೊಲಗೇರಿಯ ಗದ್ದಲದಂತಿತ್ತು. ಹೇಗೆಂದರೆ ''ಯಜ್ಞಶ್ರೇಷ್ಠರೆಲ್ಲರೂ ಹೋದರೆ ಹೋಗಲಿ. ವಿಘ್ನ ಪ್ರಾಯಶ್ಚಿತ್ತವಂ ಮಾಡು ಭಯೋರಣಿಯೋಳ್ಮೆ ಥನಿಯ ಪೊಸೆ, ಘ್ನತವನ್ನು ಅರ್ಪಿಸು. ಯೂಪಸ್ಥಂಭವನ್ನು(ಪಶು ಕಟ್ಟಿ ಹಾಕುವ ಕಂಬ) ಪೂಜಿಸು, ಸೋಮದ್ರವವನ್ನು ಕುಡಿಯಲು ಅಣಿಮಾಡು, ಗಾಯತ್ರಿ ಅನುಷ್ಟುಪ್, ಜಗತೀ ಶಕ್ವರಿ, ಯತಿಶಕ್ತರಿ, ಯುಷ್ಣಿಕ್ಕುಪದೀಕ್ಷನ ಮೊದಲಾದ ಮಂತ್ರಗಳಿಂದ ಇಂಧನವನ್ನು ಸುಡಿರಿ'' ಎಂದು ದಕ್ಷ ಧೈರ್ಯದಿಂದಲೇ ಘರ್ಜಿಸಿದ.

ಯಜ್ಞಪಶುವನ್ನು ಬಲಿಕೊಡಲು ಹಲವರು ''ಶಸ್ತ್ರವನ್ನು ಮಸೆ, ಯೂಪಸ್ತಂಭವನ್ನು ಪೂಜಿಸು, ಪಶು ಅರಚದಂತೆ ಗಂಟಲನ್ನು ಮುರಿಯಿರಿ'' ಅದರ 'ಪಲಲವನ್ನು' ತೆಗೆ, ಅದರ ರಕ್ತವನ್ನು ಬಸಿ, ವಡೆಯನ್ನು ಸುಲಿ, ಬೆಂಕಿಯಲ್ಲಿ ಕಾಯಿಸು, ಆಹುತಿಯನ್ನು ಕೊಡು ಮೊದಲಾದ ಗಡಿಬಿಡಿ ಗದ್ದಲವಾಗಿ ಆ ಯಜ್ಞ ಸಭೆ ಹೊಲೆಗೇರಿಯಂತಿತ್ತು. (ಟಿಪ್ಪಣಿ:ಪಲ(ಸಂ) ಮಾಂಸ ಲವ(ಸಂ) ಕತ್ತರಿಸು, ಚೂರು ತುಣುಕು, ಕೂದಲು ಉಣ್ಣೆ).

ನಾರದರ ಮುಖಾಂತರ ಶಿವೆ ತನ್ನ ತಂದೆಯ ಯಾಗದ ವಿಚಾರವನ್ನು ತಿಳಿದುಕೊಂಡಳು. ಕುಪಿತಳಾದ ಶಿವೆ ದಕ್ಷನಿಗೆ ಬುದ್ಧಿ ಹೇಳುವುದಾಗಿ ಶಿವನಿಗೆ ತಿಳಿಸಿದಳು. ಕೇಳದಿದ್ದರೆ ಯಜ್ಞವನ್ನು ನಾಶ

ಮಾಡುವುದಾಗಿ ಸೂಚಿಸಿದಳು. ಅದಕ್ಕೆ ಶಿವ "ಬೇಡ ಅವನು ಮನ್ನಿಸುವಂತವನಲ್ಲ" ಎಂದರೆ ಶಿವೆ "ಶಿವನಿಗಲ್ಲದ ಖಳನ ಮನ್ನಣೆಯನ್ನು ತಾನೂ ಬಯಸುವಳಲ್ಲ" ಅವನ ಅವಿಚಾರವನ್ನು ಬಯಲಿಗೆಳೆದು ಬರುವೆ. ತನ್ನನ್ನು ಕಳಿಸಿ ಕೊಡಲೇಬೇಕೆಂದು ಆಗ್ರಹ ಮಾಡಿದ್ದಕ್ಕಾಗಿ, ಶಿವನು ಅವಳನ್ನು ರುದ್ರಕನ್ನಿಕೆಯರೊಡನೆ ಪುಷ್ಪಕ ವಿಮಾನದಲ್ಲಿ ಕಳುಹಿಸಿಕೊಟ್ಟನು.

ಆ ಸಮಯದಲ್ಲಿ ದಕ್ಷನಮುಖ ಶಿವಕಳೆಯಿಲ್ಲದೆ ಶವಕಳೆಯಂತಿತ್ತು. ಚಂದ್ರನಿಲ್ಲದ ರಾತ್ರಿಯಂತಿತ್ತು. ಭಾಸ್ಕರನಿಲ್ಲದ ಬಾನಿನಂತಿತ್ತು. ಕರೆಯದಲೇ ಬಂದ ಮಗಳನ್ನು ದಕ್ಷ ಮನ್ನಿಸಲಿಲ್ಲ, ಆದರಿಸಲಿಲ್ಲ. ತನ್ನ ವೈರಿಯ ಹೆಂಡತಿ ತನ್ನ ಮಗಳೇ ಆಗಿದ್ದರೂ, ವೈರತ್ವದಿಂದಲೇ ದಾಕ್ಷಾಯಣಿಯನ್ನು ಉಪೇಕ್ಷಿಸಿದ. ಅವಳು ತಂದೆಯೆಂಬ ಅಭಿಮಾನದಿಂದ ಎದುರಿಗೆ ಬಂದು ನಿಂತರೆ, ಬೇರೆಡೆಗೆ ಮುಖತಿರುಗಿಸುತ್ತಿದ್ದ.

ಶಿವನ ಸಹ ಧರ್ಮಿಣಿಯಾದ ದಾಕ್ಷಾಯಣಿ ಗಂಡನ ನಿಂದೆಯನ್ನು ಕೇಳಿ ತಂದೆಯಿಂದ ಅವಮಾನಿತಳಾಗಿ, ಅಪಮಾನ ಜ್ವಾಲೆಯಿಂದ ಪರಿತಪಿಸಿ ಹೋದಳು. ಯಜ್ಞಶಾಲೆಯಲ್ಲಿದ್ದ ವಿಷ್ಣು, ಇಂದ್ರ, ಅಗ್ನಿ, ವರುಣ, ಕುಬೇರ ಮೊದಲಾದ ದೇವತೆಗಳ ಸಾಕ್ಷಿಯಾಗಿ ದಕ್ಷನ ಸಂಬಂಧವಾದ ಶರೀರವನ್ನು ಧರಿಸಲಾರದೆ ತಂದೆಯನ್ನು ಶಪಿಸಿ ಯೋಗ ಮಾರ್ಗದಿಂದ ಪ್ರಾಣವನ್ನು ನಿಲ್ಲಿಸಿ, ಅಗ್ನಿಕುಂಡವನ್ನು ದಿಟ್ಟಿಸಿ ನೋಡಿದರು. ಉರಿಯು ಗಗನವನ್ನು ವ್ಯಾಪಿಸಿತು. ಆಗ ದಾಕ್ಷಾಯಣಿ ಅಗ್ನಿಮುಖದಿಂದ ಆಕಾಶಕ್ಕೆ ಹಾರಿದಳು.

ಈಗ ಜಗನ್ಮಾತೆ ಪುಟವಿಟ್ಟ ಚಿನ್ನದಂತಾಗಿ ಮಹಾ ಸತಿಯಾಗಿದ್ದಾಳೆ. ಶಿವನಡೆಗೈತಂದು ಯಾಗ ಶಾಲೆಯಲ್ಲಿ ನಡೆದ ವೃತ್ತಾಂತವನ್ನು ತಿಳಿಸಿದಳು. ಆ ವಿಷಯವನ್ನು ಕೇಳಿ ಶಿವ ಪ್ರಳಯ ಭೈರವನಂತಾದನು. ಪ್ರಳಯ ಕಾಲದ ಜ್ವಾಲೆಯ ಮುಚ್ಚಳ ತೆಗೆಯುವಂತೆ ಶಿವನ ನಡುಗಣ್ಣೆವೆಯು ಒಡೆಯಿತು. ಅದರಿಂದ ಪ್ರಚಂಡವಾದ ಕಿಡಿಗಳು ಕೆದರಿ ಉರಿ ಆಕಾಶವನ್ನು ವ್ಯಾಪಿಸಿತು. ಅದರ ಮಹಾಕಾಶದಿಂದ ಶಿವನ ಜಡೆಯಲ್ಲಿ ಗಂಗೆ ಚುಯ್ಯಂದು ಕಾಯ್ದು ಉಕ್ಕಿತು, ಇದರಿಂದ ತಲೆಯಲ್ಲಿದ್ದ ಚಂದ್ರ ಕರಗಿ ಹೋದನು, ಆ ಭೀಕರ ವಾತಾವರಣದ ಹಿನ್ನೆಲೆಯಲ್ಲಿ ಶಿವನ ಹಣೆಗಣ್ಣಿನಿಂದ ವೀರ ಕುಲಾಧೀಶ್ವರ ವೀರಭದ್ರನು ಕಾಣಿಸಿಕೊಂಡ.

ಆತನ ಮೈ ಬಣ್ಣ ಬೆಂಕಿಯಂತಿತ್ತು. ತಲೆಯಲ್ಲಿ ನಿಡು ಜಡೆಯ ಮುಡಿ ನಡುನೆತ್ತಿಯಲ್ಲಿ ಲಿಂಗ ಮಕುಟ ಮಣಿ ಕುಂಡಲಾದಿ ಆಭರಣಗಳಿಂದ ಭವ್ಯವಾಗಿ ತೋರುತ್ತಿದ್ದಾನೆ. ಆತನಿಗೆ ಪಂಚಮುಖ ಸಹಸ್ರಭುಜ, ಉಡುಗೆಯ ಚಲ್ಲಣ ಕೈಗಳಲ್ಲಿ ಅನಂತ ದಿವ್ಯಾಯುಧಗಳನ್ನು ಹಿಡಿದಿದ್ದಾನೆ. ಆತನ ಕಣ್ಣುಗಳು ಉರಿ ಕಾರುತ್ತಿವೆ. ಕಣ್ಣಲ್ಲಿ ಕೆಂಡದ ನೋಟವಿದೆ. ಆತ ಹಿಡಿದಿರುವ ದಿವ್ಯಾಯುಧ ಪ್ರಳಯ ಕಾಲದ ಬೆಂಕಿಯಿಂದ ಕಾಯಿಸಿ, ರಾಹು ಕೇತುಗಳೆಂಬ ಇಕ್ಕಳಿನ ಸಹಾಯದಿಂದ ಹಿಡಿದು, ಅಂಧಕಾಸುರನ ಎದೆಗಲ್ಲಿನ ಮೇಲೆ ವಜ್ರದ ಚಮ್ಮಟಿಗೆಯಿಂದ ಹೊಡೆದು, ಕ್ರೂರ ಸರ್ಪದ ವಿಷದ ನೀರನ್ನುಣಿಸಿ, ಸೂರ್ಯ

ಮಂಡಲದಲ್ಲಿ ಮಸೆದು ಎಳೆ ಮಿಂಚಿನಲ್ಲಿ ಪುಗೊಟ್ಟು ಮಾಡಿದ ಉಗ್ರ ರೂಪದಂತಿದೆ. ತಂದೆ ಪರಶಿವನನ್ನು ಕುರಿತು 'ಭೂಮಿಯನ್ನು ಬೆಯಲೋ? ಆದಿಶೇಷನನ್ನು ಕೊಲ್ಲಲೋ? ಗಗನವನ್ನೊಡೆಯಲೋ? ಕುಲಗಿರಿಗಳನ್ನು ಹುಡಿಗೈಯಲೋ? ಜಲಧಿಯನ್ನು ಕುರಿಯಲೋ?'' ಎಂದು ಘುಡುಘುಡಿಸಿ ಅಬ್ಬರಿಸಿನಿಂದ, ಆಗ ಶಂಕರ ''ವೇದ ವಿರೋಧಿಯಾದ ದಕ್ಷನನ್ನು ಸದೆಬಡಿ'' ಎಂದು ಆಜ್ಞಾಪಿಸಿದ. ''ಮಲೆ ತೊಡೆ ಕೊಲ್ಲು ಶರಣೆನೆ ಕಾಪಾಡು'' ಎಂದು ವಿವೇಕವನ್ನು ತಿಳಿಸಿದ.

ಮಹಾ ಕುತಂತ್ರಿಯಾದ ದಕ್ಷನ ಯಜ್ಞ ವಿನಾಶ ಕಾಲದಲ್ಲಿ ವಿವೇಕದಿಂದಲೇ ವರ್ತಿಸಬೇಕೆಂದು ಶಿವ-ವೀರನಿಗೆ ಸೂಚಿಸಿದ. ಇಂಥ ವೀರನ ಅದ್ಭುತ ಪ್ರತಾಪದ ತಮಣೆಗೆ ವೀರೋಚಿತ ಹೆಂಡತಿ ಅವಶ್ಯವೆಂದು ಶಿವ ಯೋಚಿಸಿದ. ವೀರಭದ್ರ ಆರ್ಭಟದಲ್ಲಿರುವಾಗ ಶಿವ ಸನ್ನಿಧಿಯಲ್ಲೊಬ್ಬ ಸತಿ ಆಕಸ್ಮಿಕವಾಗಿ ಅವತರಿಸಿದಳು. ಅವಳೇ ಭದ್ರಾಣಿ. ಉರಿಕಾರುವ ಮೂರು ಕಣ್ಣುಗಳಿಂದಲೂ ನಂಜನ್ನು ಹೊರ ಸೂಸುವ ಉರಿ ಮೊಗದಿಂದಲೂ, ಧೀರ ಪ್ರತಾಪದಿಂದ ಶೋಭಿಸಿದಳು. ಇಂಥ ವೀರ ರಮಣಿಯನ್ನು ವೀರೇಶನಿಗೆ ಶಿವ ಲಗ್ನ ಮಾಡಿದ. ಅಲ್ಲಿದ್ದ ಶಿವಗಣ ವೀರದಂಪತಿಗಳಿಗೆ ಸದಮಳ ಸೇನೆಯನ್ನಿಕ್ಕ ಹರಸಿತು.

ವೀರಭದ್ರ ಅಂಥ ವೀರ, ಭಯಾನಕ ಹೆಂಡತಿಯ ಕೈಹಿಡಿದು, ಅಸಂಖ್ಯಾತ ಭೂತಗಣದೊಂದಿಗೆ ಪುಂಖಾನು ಪುಂಖ ಸೈನ್ಯ ಬಲದೊಂದಿಗೆ ಯಜ್ಞ ವಿನಾಶಕ್ಕೆ ಹೊರಟ. ಈತನ ಬಾರೀ ಸೈನ್ಯದ ಅಬ್ಬರಕ್ಕೆ ಆದಿಶೇಷನ ಹೆಡೆ ಮಣಿಯಿತು. ಸೈನ್ಯದ ಉರವಣಿಗೆಗೆ ದಿಗ್ಗಜಗಳು ದಿಕ್ಕು ಪಾಲಾದವು. ವೀರಭದ್ರನ ಸೈನ್ಯದ ಪಾದ ಘಾತಕ್ಕೆ ಬೆಟ್ಟಗಳು ಹಿಟ್ಟಾದವು. ಆ ಸೈನ್ಯ ಕುಲಗಿರಿಗಳನ್ನೇ ಕೈ ಗುಂಡುಗಳನ್ನಾಗಿಯೂ, ಬ್ರಹ್ಮಾಂಡಗಳನ್ನೆ ಹೊಡೆದಾಡಲಿಕ್ಕೆ ಕೈ ಚೆಂಡುಗಳನ್ನಾಗಿಯೂ ದಿಗ್ಗಜಗಳ ದಂತಗಳನ್ನೇ ಪಿಲ್ಲಣಿಗೆಗಳನ್ನಾಗಿಯೂ, ಮಾಡಿಕೊಂಡು ಸೂರ್ಯಚಂದ್ರರನ್ನು ಬಡಿವ ತಾಳಗಳನ್ನಾಗಿ ಮಾಡಿಕೊಂಡು ವೀರಭದ್ರನ ಕೆಲ ಬಲದಲ್ಲಿ ನಡೆದುಬಂತು.

ವೀರಭದ್ರನ ಸೈನ್ಯ ನೋಡಿ ದೇವಾನುದೇವತೆಗಳ ಎದೆ ಹೊಡೆಯಿತು, ಈತನ ಆರ್ಭಟಕ್ಕೆ ಸೊಕ್ಕಡಗಿ ದೇವತೆಗಳು ಕಂಗಾಲಾಗಿ ತಮ್ಮ ತಮ್ಮಲ್ಲಿಯೇ ಕಿತ್ತಾಡಿಕೊಂಡರು. ವಿಷ್ಣುವು ಗಾಬರಿಯಾಗಿ ತನ್ನ ಚಕ್ರವನ್ನು ಬ್ರಹ್ಮನ ತಲೆಗಿಟ್ಟನು. ಇಂದ್ರನು ವರುಣನನ್ನು ಹೊಡೆದ ವರುಣ ಕುಬೇರನನ್ನು ಹೊಡೆದ. ಇದೆಲ್ಲಾ ಶಿವಮಾಯೆ, ಭೂತಗಣ ವಿಷ್ಣುವಿನ ಚಕ್ರವನ್ನು ದೀಪಕ್ಕೆ ಮುತ್ತಿಕ್ಕಿ ಬೀಳುವ ಪತಂಗದಂತೆ ಕೆಳಕ್ಕೆ ಬೀಳಿಸಿದವು. ದೇವಾನುದೇವತೆಗಳು ದಿಕ್ಕುಪಾಲಾಗಿ ಓಡಿ ಹೋದರು. ವಿಷ್ಣು ಜಿಂಕೆ ರೂಪ ತೊಟ್ಟು ಓಡಿ ಹೋದ. ವೀರೇಶನ ಸೈನಿಕರು ಯಜ್ಞಶಾಲೆಯಲ್ಲಿ ಲಗ್ಗೆ ಮಾಡಿದರು. ವೀರೇಶ ಘುಡುಘುಡಿಸಿ ಯಜ್ಞ ದೀಕ್ಷಿತನಾದ, ದಕ್ಷನ ತಲೆಯನ್ನು ಕತ್ತರಿಸಿ ಅಗ್ನಿ ಕುಂಡದಲ್ಲಿ ಹಾಕಿ ಸುಟ್ಟುಬಿಟ್ಟ. ವೀರಭದ್ರನ ಕಿಂಕರರು ವಾಣಿಯ ಕಿವಿಯನ್ನು ಕೊಯ್ದರು. ಮುನಿಗಳ ಮೀಸೆಗೆ ಬೆಂಕಿ ಹಚ್ಚಿದರು. ದೇವ ಸ್ತ್ರೀಯರನ್ನು ಸೆರೆ ಹಿಡಿದರು.

ದಕ್ಷನ ಪತ್ನಿ ಪರಿಪರಿಯಿಂದ ಬೇಡಿದುದರಿಂದ, ಅಜಪಶುವಿನ ತಲೆಯನ್ನು ಕತ್ತರಿಸಿ, ದಕ್ಷನ ಮುಂಡಕ್ಕೆ ಕೂಡಿಸಿ ಜೀವದಾನ ಮಾಡಿದ, ಅಂದಿನಿಂದ ದಕ್ಷನ ಮುಖ ಯಜ್ಞ ಕುರಿಯ ಮುಖವಾಯ್ತು. ವೀರಭದ್ರ ಮತ್ತು ಅವನ ಕಿಂಕರರು ಕೈಲಾಸಕ್ಕೆ ಬಂದು ಇದು ದಕ್ಷನ ಕಿರೀಟ, ಇದು ಕಾಲನ ತೋಳು, ಇದು ಇಂದ್ರನ ಕಣ್ಣು, ಇದು ಆದಿತ್ಯನ ಹಲ್ಲು. ಇದು ವಾಣಿಯ ಮೂಗು, ಇದು ಗದೆ, ಇದು ಚಕ್ರ, ಇವು ಇಂದ್ರಾದಿಗಳ ಶಸ್ತ್ರಾಸ್ತ್ರಗಳು ಎಂದು ಶ್ರೀ ಶಂಕರನ ಪಾದಕ್ಕೆ ದಿಗ್ವಿಜಯ ಕಾಣಿಕೆಯಾಗಿ ನಿಲ್ಲಿಸಿದರು. ದಕ್ಷ ಬಾಗಿದ ತಲೆಯಿಂದ 'ಶಂಕರಾ ನನ್ನನ್ನು ಕ್ಷಮಿಸು. ನಾನು ಅಜ್ಞಾನಿ ತಿಳಿಯದೆ ಮಾಡಿದ ತಪ್ಪನ್ನು ಕ್ಷಮಿಸು. ನಾನು ಪಶು ನೀನು ಪಶುಪತಿ' ಎಂದಾಗ ಶಿವ ಅವನನ್ನು ಕ್ಷಮಿಸಿ ಶತಯಜ್ಞದ ಫಲವನ್ನು ಕರುಣಿಸಿದ.

## ಪುರಾಣಗಳು :

ವೀರಭದ್ರನ ವಿಚಾರ, ಅವನ ಅವತಾರ ಹಾಗೂ ದಕ್ಷ ಯಾಗವನ್ನು ಹಾಳು ಮಾಡಿದ್ದುದರ ಬಗ್ಗೆ ಪುರಾಣಗಳಾದ ಕೂರ್ಮ ಪುರಾಣ, ಮತ್ತು ಭಾಗವತ ಪುರಾಣಗಳಲ್ಲಿ ವಿವರಿಸಲಾಗಿದೆ.

ಭಾಗವತ ಪುರಾಣದಲ್ಲಿ ವೀರಭದ್ರನ ಬಗ್ಗೆ ಈ ರೀತಿ ವಿವರವಿದೆ. 'ದಕ್ಷನು, ಋಷಿಗಳು ಮತ್ತು ದೇವತೆಗಳು ಸೇರಿ ಯಜ್ಞ ಮಾಡುವಲ್ಲಿಗೆ ಬಂದ ಶಿವನನ್ನು ನಿಂದಿಸುತ್ತಾರೆ. ನಂತರ ತಾನು ಬೃಹಸ್ಪತಿ ಶಿವ ಎಂಬ ಯಜ್ಞವನ್ನು ಮಾಡಲು ಸಿದ್ಧತೆ ಮಾಡುತ್ತಾನೆ. ದಕ್ಷನ ಈ ಯಜ್ಞಕ್ಕೆ ಸತಿ ಹೋಗಲು ಶಿವನು ಸಮ್ಮತಿಸುವುದಿಲ್ಲವಾದರೂ ಆಕೆ ಹಟಹಿಡಿದು ಅಲ್ಲಿಗೆ ಹೋಗುತ್ತಾಳೆ. ಹೀಗೆ ಬಂದ ಸತಿಯನ್ನು ದಕ್ಷನು ಅವಮಾನಗೊಳಿಸುತ್ತಾನೆ. ಅವಮಾನ ಸಹಿಸಿಕೊಳ್ಳದೆ ಆಕೆ ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ. ಇದನ್ನು ತಿಳಿದ ಶಿವ ಕೋಪತಪ್ತನಾಗಿ ಉಗ್ರರೂಪ ಧರಿಸಿ ಯಜ್ಞವನ್ನು ಧ್ವಂಸ ಮಾಡುತ್ತಾನೆ. ದಕ್ಷನು ಶಿವನಿಗೆ ಶರಣಾಗತನಾದಾಗ ಶಿವನು ದಕ್ಷನಿಗೆ ಗಣನಾಯಕನ ಪದವಿಯನ್ನು ದಯಪಾಲಿಸುತ್ತಾನೆ''. ಕೂರ್ಮ ಪುರಾಣದಲ್ಲಿ ವೀರಭದ್ರನ ಬಗ್ಗೆ ಈ ರೀತಿ ವಿವರಣೆಯಿದೆ. ''ದಕ್ಷನು ತನ್ನ ಮಡದಿಯೊಂದಿಗೆ ಅಳಿಯನಾದ ಶಂಕರನೊಂದಿಗೆ ಹೋದಾಗ, ಶಂಕರನಿಂದ ತನಗೆ ಗೌರವ ಸಿಗಲಿಲ್ಲ ಎಂಬ ಕಾರಣಕ್ಕಾಗಿ ಅಸಮಧಾನಗೊಳಿಸುತ್ತಾನೆ. ಹೆತ್ತವರಿಂದಲೇ ತನಗೆ ಈ ರೀತಿಯ ಅವಮಾನವಾಗಲು ಸತಿ ಅಗ್ನಿಗೆ ಆಹುತಿಯಾಗಿ ಮರುಜನ್ಮದಲ್ಲಿ ಹಿಮವಾನನ ಮಗಳಾಗಿ ಜನಿಸುತ್ತಾಳೆ. ಶಂಕರನ ಶಾಪದಿಂದ ದಕ್ಷನು ಕ್ಷತ್ರಿಯ ಕುಲದಲ್ಲಿ ಪ್ರಜೇತನೆಂದು ಜನಿಸುತ್ತಾನೆ. ಮುಂದೆ ಪ್ರಜೇತನು ಯಜ್ಞವನ್ನು ಮಾಡುವಾಗ ಶಿವನಿಗೆ ಸಲ್ಲತಕ್ಕ ಯಜ್ಞಾಹುತಿಯನ್ನು ನೀಡಲು ನಿರಾಕರಿಸುತ್ತಾನೆ. ಇದರಿಂದ ಶಂಕರನ ಕೋಪಕ್ಕೆ ಗುರಿಯಾಗಬೇಕಾಗುತ್ತದೆಂದು ದಧೀಚಿ ಋಷಿಯ ಎಚ್ಚರಿಕೆಗೆ ಪ್ರಜೇತನು ಕಿವಿಗೊಡುವುದಿಲ್ಲ. ಆಗ ಪಾರ್ವತಿ ಯಜ್ಞವನ್ನು ನಾಶ ಮಾಡಲು ಶಂಕರನನ್ನು ಪ್ರಾರ್ಥಿಸಲು, ಆತುರ ಪರಾಕ್ರಮಿಯಾದ ವೀರಭದ್ರನು ಜನಿಸುತ್ತಾನೆ. ಪಾರ್ವತಿ ತನ್ನ ಶಕ್ತಿ ಸ್ವರೂಪಿಣಿಯಾದ ಕಾಳಿಯನ್ನು ವೀರಭದ್ರನಿಗೆ ಯಜ್ಞ ಸಂಹಾರದ ಕಾರ್ಯದಲ್ಲಿದ ಸಹಾಯ ಮಾಡಲು ಕಳುಹಿಸುತ್ತಾಳೆ. ವೀರಭದ್ರನು ಯಜ್ಞವನ್ನು ಧ್ವಂಸ ಮಾಡಲು ದಕ್ಷನಿಗೆ ತನ್ನ ಅವಿವೇಕದ ಅರಿವಾಗಿ ಶಂಕರನನ್ನು ಶರಣಾಗತ ಭಾವದಿಂದ ಪ್ರಾರ್ಥಿಸುತ್ತಾನೆ. ಶಂಕರನು ಕ್ಷಮಿಸಿ ಅವನಿಗೆ ಗಣನಾಯಕನ ಪದವಿಯನ್ನು ದಯಪಾಲಿಸುತ್ತಾನೆ''.

## ಒಡಬು (ವಚನಗಳು) :

'ಒಡಬು'ಗಳನ್ನು ಸಾಮಾನ್ಯವಾಗಿ ಪುರವಂತರು ಹೇಳುತ್ತಾರೆ. ಪುರವಂತರನ್ನು ವೀರಭದ್ರನ ಅವತಾರವೆಂದು ಭಕ್ತರು ಹೇಳುತ್ತಾರೆ. ವೀರಭದ್ರ ದೇವರ ಜಾತ್ರೆಯಂದು ಭವ್ಯವಾದ ಮೆರವಣಿಗೆ ನಡೆದ ಮರುದಿನಬೆಳಿಗ್ಗೆ ಬೆಂಕಿಯ ಮೇಲೆ ಓಡುವ 'ಕೊಂಡ' (ಅಗ್ನಿ) ಎಂಬ ಕಾರ್ಯಕ್ರಮ ನಡೆಯುತ್ತದೆ. ಆ ದಿವಸ ಸಾಮಾನ್ಯವಾಗಿ ಪುರವಂತರು ಕಾವಿ ಅಂಗಿ ತೊಟ್ಟು, ಅದಕ್ಕೆ ಬಿಗಿಯಾದ ಕಾಸೆಯನ್ನು ಕಟ್ಟಿ ತಲೆಗೆ ರೇಶ್ಮೆ ರುಮಾಲು ಬಿಗಿದು, ಕೊರಳಿಗೆ ರುದ್ರಾಕ್ಷಿ ಮಾಲೆ, ಒಂದು ಕೈಯಲ್ಲಿ ತ್ರಿಶೂಲ ಅಥವಾ ಕತ್ತಿ ಹಿಡಿದುಕೊಂಡು, ವೀರಾವೇಶದಿಂದ ಕುಣಿಯುತ್ತಾರೆ. ಹಾಗೆ ಕುಣಿಯುವಾಗ ಒಡಬುಗಳನ್ನು ಹೇಳುತ್ತಾರೆ. ಉದಾಹರಣೆಗೆ ಅವರು ಸಾಮಾನ್ಯವಾಗಿ ಹೇಳುವ ಒಡಬೊಂದು ಇಂತಿದೆ.

'ಅಹಹಾ ರುದ್ರ, ಶ್ರೀ ವೀರಭದ್ರನು ದಕ್ಷನ ಯಜ್ಞಕ್ಕೆ ಬಂದಾಗ, ಸೂರ್ಯನಂತೆ ಹೊಳೆಯು ತ್ತಿದ್ದನು. ಸಾವಿರ ಶಿರಸ್ಸುಳ್ಳವನಾಗಿದ್ದನು. ಅವನ ಕೆಂಡದಂತಹ ಕಣ್ಣುಗಳು ಕೆಂಡವನ್ನು ಕಾರುತ್ತಿದ್ದವು. ಅರವತ್ತಾರು ಕೋಟಿ ರಾಕ್ಷಸರನ್ನು ಕೆಂಗಣ್ಣುಗಳಿಂದ ಸುಟ್ಟು ಬೂದಿ ಮಾಡಿದನು. ಆ ಬೂದಿಯನ್ನು ದಿಗಂತಕ್ಕೆ ಹುಸೆ ಎಂದು ಉಸಿರು ಬಿಟ್ಟು ಹಾರಿಸಿದನು. ದಿಗಂತದಲ್ಲಿ ಸುತ್ತಿ, ಸೂರ್ಯದೇವರು ಮರೆಯಾದನು. ಜನವೆಲ್ಲ ಕತ್ತಲಲ್ಲಿ ಮುಳುಗಿತು.. ಅಹಹಾ ವೀರ.... ಅಹಹಾ ರುದ್ರ... . ಹೀಗೆ ಒಡಬುಗಳು ಸುದೀರ್ಘವಾಗಿ ಮುಂದುವರೆಯುತ್ತವೆ. ಈ ಒಡಬುಗಳಲ್ಲಿ ವೀರಭದ್ರ ದೇವರ ವಿರಾಟ್ ಸ್ವರೂಪ, ಪರಾಕ್ರಮ, ಉಗ್ರತೆ ಮತ್ತಿತರ ವಿಚಾರಗಳನ್ನು ವಿವರಿಸಲಾಗಿದೆ.

## ವೀರಭದ್ರನ ಜನನದ ಬಗ್ಗೆ :

'' ಆಹಾ ವೀರ। ಆಹಾ ರುದ್ರ। ನಮ್ಮ ವೀರಭದ್ರನ ಹುಟ್ಟಿದ ಪರಿಯಂ ಪೇಳುವೆ। ನಮ್ಮ ಶಂಕರನ ಮಾವನಾದ ದಕ್ಷಬ್ರಹ್ಮನು ಶಿವನೊಡನೆ ದ್ವೇಷ ಸಾಧಿಸಿ, ಯಜ್ಞವನ್ನಾರಂಭಿಸಿದನು. ಅಷ್ಟದಿಕ್ಪಾಲಕ ಹರಿಬ್ರಹ್ಮ ಮೊದಲಾದವರು ಸಮ್ಮಿಲಿತರಾಗಿ ಅಗ್ನಿಪುಟ ಮಾಡಲಿಕ್ಕೆ ಯದ್ವಿ ಜರು ವೇದ ಮಂತ್ರಗಳನ್ನು ಉಚ್ಚರಿಸುತ್ತಿದ್ದರಯ್ಯ। ದಕ್ಷ ಪುತ್ರಿಯರೆಲ್ಲ ಅತೀ ಸಡಗರದಿಂದ ಓಡಾಡುತ್ತಿದ್ದರಯ್ಯ। ಇದೇ ಸಮಯದಲ್ಲಿ ದಕ್ಷ ಪುತ್ರಿಯಾದ ದಾಕ್ಷಾಯಣಿ ಶಿವನ ಒಪ್ಪಿಗೆ ಇಲ್ಲದೆ ದಕ್ಷನ ಯಜ್ಞ ಭೂಮಿಗೆ ಬಂದಳಯ್ಯ। ತಂದೆಯಾದ ದಕ್ಷನು ಮಗಳನ್ನು ಅವಮಾನಗೊಳಿಸಿ। ಅವಳನ್ನು ತನ್ನ ಎಡಗಾಲಿನಿಂದ ಒದ್ದು ಹೊರಗೆ ಹಾಕಿದನು। ಇದನ್ನು ನೋಡಿ ದಾಕ್ಷಾಯಣಿಗೆ ಸಹಿಸಿಕೊಳ್ಳುವುದಾಗದೆ, ಯಜ್ಞ ಕುಂಡದಲ್ಲಿ ಧುಮುಕಿದಳು. ಈ ವಾರ್ತೆ ಶಂಕರನಿಗೆ ಮುಟ್ಟಿದೊಡನೆ ಶಂಕರನು ಅತೀ ಕೋಪದಿಂದ ಜಡೆ ಬಿಚ್ಚಿ ನೆಲಕ್ಕಪ್ಪಳಿಸಿ। ಉರಿ ನೇತ್ರವನ್ನು ತೆರೆಯಲು ಭಯಂಕರ ಜ್ವಾಲೆಯೊಳಗಿಂದ। ಗಂಡುಗಲಿ ಶ್ರೀ ವೀರಭದ್ರನು ಅವತರಿಸಿ। ವೀರಬೊಬ್ಬೆಯಿಡಲು। ನಕ್ಷತ್ರಗಳು ಉದುರಿದವು ಬ್ರಹ್ಮಾಂಡವು ನಡುಗಿತು. ಸೂರ್ಯ ಚಂದ್ರರಿಗೆ ದಿಕ್ಕು ತೋಚದಾಯಿತು. ಇಂತಾಗಲಾಕ್ಷಣದಿ ಶ್ರೀ ವೀರಭದ್ರನು ದಕ್ಷನ ಯಜ್ಞ ಮಂಟಪ ಪ್ರವೇಶಿಸಿ ದಕ್ಷನ ಶಿರ ಕಡಿದು, ನೆತ್ತರ ಹರಿಸಿದ ತಮ್ಮ ವೀರಭದ್ರ ಕರುಣಕಪಾಲ। ಕಡೇಕಡೇ॥.

## ಮಹಿಮಾ ಪುರುಷ ಶ್ರೀ ವೀರಭದ್ರ :

ಆಹಾ ವೀರ। ಆಹಾ ಶರಭ। ಹರನ ಉರಿಗಣ್ಣಿನಿಂದ ಹುಟ್ಟಿದನಯ್ಯಾ। ಮರುಳ ದಕ್ಷನ ಹೋಮ ಕುಂಡಕೆ ನಡೆದನಯ್ಯ। ವೀರಗರ್ಜನೆಯನ್ನು ಮಾಡಿ। ಎದುರಾದವರನ್ನು ಎಳೆದನಯ್ಯಾ ಖಡ್ಗವನ್ನು ಝಳಿಪಿಸಿ, ದಕ್ಷನ ಶಿರ। ಉರುಳಿಸಿದನಯ್ಯ। ಪಾದಕ್ಕೆ ಬಿದ್ದ ಪ್ರಸೂತಿಗೆ ಅಭಯವನ್ನಿತ್ತನಯ್ಯ। ಶಿಷ್ಟರ ರಕ್ಷಕ ದುಷ್ಟ ಮರ್ಧಕನೆಂದೆನಿಸಿದನಯ್ಯ। ಭದ್ರಕಾಳಿಯ ರಮಣ। ನೆಂದೆನಿಸಿದನಯ್ಯ। ಮೊರೆ ಹೊಕ್ಕು ಮಾರುತಿಗೆ ಲಿಂಗವನಿತ್ತನಯ್ಯ। ನಂಬಿದ ಭಕ್ತರಿಗೆ ಆರಾಧ್ಯ ದೇವನೆಂದಿನಿಸಿದನಯ್ಯ. ಇಂತಪ್ಪ ಶ್ರೀ ವೀರಭದ್ರ ದೇವರಿಗೆ ಶರಣು ಶರಣೆಂಬೆನಯ್ಯ ಕಡೆ ಕಡೆ (ಶಂಕ್ರಪ್ಪ ಬಸಪ್ಪ ತೊಂಡಿಹಾಳ, ೨೦೦೦, ೫೫).

## ವೀರಭದ್ರನ ವಿಸ್ತಾರ :

ಆಹಾ ವೀರಾ।ಆಹಾ ಶರಭಾ।ನಮ್ಮ ಶ್ರೀವೀರಭದ್ರ ದೇವರು। ಹೋಮಕುಂಡದ ಬಳಿಗೆ ಬರುತ್ತಿದ್ದ ನೆಂದರೆ।ಕೆಂಜೆಡೆಯ ಉರಿಗಣ್ಣು।ಕಿವಿಗೆ ಚವಕಳಿಯ ಮುತ್ತು।ಕೊರಳಲ್ಲಿ ಹಾಕಿದ ಪದಕದ ಹಾರ ಕರಡಿಗೆಗೆ। ಹಾಕಿದ ಶಿವದಾರ। ಕುತ್ತನಿಯ ಇಜಾರ। ಕುಂದಣದ ಉಡದಾರ। ಬಲಗೈಯಲ್ಲಿ ಬಂಗಾರದ ಬಳೆ। ಮುಂಗೈಗೆ ಮುರಿ ಕಂಕಣ ಕಟ್ಟಿಕೊಂಡು। ಅಕೋ ಆ ಕಡೆಯಿಂದ ಬಂದನಯ್ಯ। ಇಕೋ ಈ ಕಡೆಯಿಂದ ಬಂದನಯ್ಯ। ನಮ್ಮ ಬೆಟಗೇರಿ ಚನ್ನಿಗ ಚನ್ನವೀರಭದ್ರ ಕಡೆ ಕಡೆ (ಶಂಕ್ರಪ್ಪ ಬಸಪ್ಪ ತೊಂಡಿಹಾಳ,೨೦೦೦, ೧೭).

## ಶ್ರೀ ವೀರಭದ್ರ ದೇವರೆ ಘನ :

ಅಹಹಾ ವೀರ। ಅಹಹಾ ರುದ್ರ। ಶ್ರೀ ವೀರಭದ್ರ ದೇವರು ಘನವೆಂಬುದರ ಬಗ್ಗೆ ತಿಳಿಸುವೆನು ಕೇಳಿರಿ ಭಕ್ತಾದಿಗಳೇ। ಸಮುದ್ರವು ಘನವೆಂಬರು। ಸಮುದ್ರವು ಘನವಲ್ಲ। ಸಮುದ್ರ ಅಗಸ್ತ್ಯ ಮುನಿಗೆ ಕುಡಿಯಲು ಸಾಲದಾಗಿ ಹೋಗಿತ್ತು। ಅಗ್ನಿ ಘನವೆಂಬರು । ಅಗ್ನಿ ಘನವಲ್ಲ। ದಕ್ಷ ಯಜ್ಞದಲ್ಲಿ ವೀರೇಶನಿಂದ ಭುಜ ನಾಲಿಗೆಗಳನ್ನು ಕೊಯ್ಸಿಸಿಕೊಂಡು ಭಂಗಬಿಟ್ಟಿತ್ತು। ವಾಯುಘನವೆಂಬರು। ವಾಯು ಘನವಲ್ಲ। ಮತಿ ಭಕ್ಷಣ ಮುನಿಗೆ ನುಂಗಲು ಸಾಲದಾಗಿ ಹೋಗಿತ್ತು । ಮತಿ ಭಕ್ಷಣಿ ಮುನಿಯು ಘನವೆಂಬರು। ಮತಿ ಭಕ್ಷಣ ಮುನಿಯು ಘನವಲ್ಲ। ದಕ್ಷಯಜ್ಞದಲ್ಲಿ ವೀರೇಶನು ಅವನ ತೊಡೆಯನ್ನು ಮುರಿದನು। ಚಂದ್ರ ಘನವೆಂಬರು । ಚಂದ್ರ ಘನವಲ್ಲ। ಅವನು ದಕ್ಷನ ಶಾಪದಿಂದ ಕ್ಷಯ ರೋಗಿಯಾದ। ದಕ್ಷನು ಘನವೆಂಬರು। ದಕ್ಷನು ಘನವಲ್ಲ। ಶ್ರೀ ವೀರಭದ್ರನ ಹೊಡೆತಕ್ಕೆ ಅವನ ಚಂಡು ಕತ್ತರಿಸಿಬಿಟ್ಟಿತ್ತು। ಬೆಂಗಳೂರು ಜಿಲ್ಲಾ ನಿಜಗಲ್ಲು ಬೆಟ್ಟದ ಮೇಲಿರುವ ವೀರಭದ್ರನೇ ಕಡೆ।ಕಡೆ। ಸಾಕಷ್ಟು ಅಗಲ ಇರುವ ನಿಜಗಲ್ಲು ವೀರಭದ್ರನೇ ಕಡೆ।ಕಡೆ। ನೀನೇ ಘನ। ನೀನೇ ಘನ। ಕಡೆ। ಕಡೆ॥.

## ಶ್ರೀ ವೀರಭದ್ರನು ಮಡಿವಾಳ ಮಾಚಯ್ಯನ ಅವತಾರ ಮಾಡಿದ್ದು:

ಆಹಾ ವೀರಾ । ಆಹಾ ಶರಭಾ । ನಮ್ಮ ಶ್ರೀ ವೀರಭದ್ರದೇವರು । ಮಡಿವಾಳ ಮಾಚಯ್ಯನೆಂಬ ಅವತಾರ ಮಾಡಿದ ವಿಷಯವಂ ಪೇಳ್ವೆನು । ಸದ್ಭಕ್ತರೆಲ್ಲರೂ ನೀವು ಕೇಳಿರಿ । ಒಂದಾನೊಂದು ದಿವಸ ಕೈಲಾಸದಲ್ಲಿ ನಮ್ಮ ಪರಶಿವನು । ತನ್ನ ವಿಜಯದಿಂದ ಉನ್ಮತ್ತನಾಗಿ । ವಾದ್ಯ ವೃಂದ ಸಹಿತ । ಮಹಾಪರಾಕ್ರಮಿಯಾದ ಶ್ರೀ ವೀರಭದ್ರನು । ತನ್ನ ಭೂರಗಣಗಳೊಡನೆ ಕೈಲಾಸವನ್ನು ಪ್ರವೇಶಿಸುವಾಗ । ಶಿವ ಸಭೆಯಲ್ಲಿ ಒಬ್ಬ ಶಿವಶರಣನಿಗೆ । ವೀರಭದ್ರನ ಉತ್ತರೀಯದ ಕೊನೆಯು ತಾಗಿ । ಆತನ ಧ್ಯಾನಕ್ಕೆ ಭಂಗ ಬಂತು । ತನ್ನ ಭಕ್ತನಿಗೆ ಆದ ಅಪಚಾರದಿಂದ । ಶಿವನು ನೊಂದ । ಹಾಗೂ ಕೆರಳಿ ಕೆಂಡವಾದ । ವೀರಭದ್ರನು ತನ್ನ ಆ...ಯನ್ನು ಪಾಲಿಸಿ ಜಯಶಾಲಿಯಾಗಿ ಬರುತ್ತಿದ್ದಾನೆ ಎಂಬುದನ್ನು ಗಮನಿಸದೆ । ನೀನು ಇನ್ನು ಮುಂದೆ ಭೂಲೋಕದಲ್ಲಿ । ಅವತರಿಸಿ । ಶರಣರ ಬಟ್ಟೆಗಳನ್ನು ಮಡಿ ಮಾಡಿಕೊಟ್ಟು । ಶಿವಾಚಾರ ನಿರತನಾಗಿದ್ದು । ಪುನಃ ಇಲ್ಲಿಗೆ ಬರಬೇಕೆಂದು ಶಿವ ಆಜ್ಞೆ ಮಾಡಿದ ।

ಆಹಾ ವೀರಾ । ಆಹಾ ಶರಭಾ । ಅದರಂತೆ ಶಿವನ ಆಜ್ಞೆಯನ್ನು ಶಿರದಲ್ಲಿ ಹೊತ್ತು । ವೀರಭದ್ರನು ಮಡಿವಾಳ ಮಾಚಯ್ಯವಾಗಿ । ಈಗಿನ ಬಿಜಾಪೂರ ಜಿಲ್ಲೆಯ ದೇವರ ಹಿಪ್ಪರಗಿ ಎಂಬಲ್ಲಿ ಕ್ರಿಸ್ತ ಶಕೆ ೧೧೧೯ ರಲ್ಲಿ ಪರೂತಪ್ಪ ಹಾಗೂ ಸುಶೀಲಮ್ಮನವರ ಮಗನಾಗಿ ಜನಿಸಿದನಷ್ಟೆ ರುದ್ರ ।

ಆಹಾ ವೀರಾ । ಆಹಾ ಶರಭಾ । ಮಾಚಯ್ಯನು ಬೆಳೆದು ದೊಡ್ಡವನಾದ ಮೇಲೆ । ಬಸವಣ್ಣನವರನ್ನು ಕಾಣಲು ಬಂದು । ಕಲ್ಯಾಣದಲ್ಲಿಯೇ ಉಳಿದನು। ಮತ್ತು ಶಿವಶರಣರ ಬಟ್ಟೆಗಳನ್ನು ಮಡಿಮಾಡಿ ಕೊಡುವ ಕಾಯಕವನ್ನೇ ಮುಂದುವರಿಸಿದನು । ಒಂದು ದಿವಸ ಕಲ್ಯಾಣದ ಬಿಜ್ಜಳ ರಾಜನು । ಸಿಂಹಾಸನಾರೂಢನಾಗಿರಲು । ಆಗ ಬಸವಣ್ಣನವರು ಶುಭ್ರವಾದ ಬಿಳಿಯ ವಸ್ತ್ರಗಳನ್ನು ಧರಿಸಿಕೊಂಡು । ಸಭೆಗೆ ಬರಲು। ಆಗ ಎಲ್ಲ ಸಭಾ ಸದಸ್ಯರು ಅವರನ್ನೇ ದಿಟ್ಟಿಸಿ ನೋಡಲು । ರಾಜನು ಸಹಿತ ಬೆರಗಾಗಿ । ಇಂಥಾ ಮಡಿಯನ್ನು ನಾನೆಲ್ಲೂ ಕಂಡಿಲ್ಲ । ಯಾರು ಆ ವ್ಯಕ್ತಿ ಎಂದು ಕೇಳಿದನು । ಮತ್ತು ಆತನಿಗೆ ಅರ್ಧ ರಾಜ್ಯವನ್ನೇ ಕೊಡುವದಾಗಿ ಹೇಳಿದನು । ಆಗ ಬಸವಣ್ಣನವರು ಹೇಳುತ್ತಾರೆ ಎಲೈ ರಾಜನೆ । ಇದರ ಭೋಗ ಭಾಗ್ಯಗಳು ಆತನಿಗೆ ಬೇಕಾಗಿಲ್ಲ । ನೀನು ಕೊಡುವ ಅರ್ಧ ರಾಜ್ಯವನ್ನು ಆತನು ಸ್ವೀಕರಿಸಲಾರ । ಭವಿಗಳ ಬಟ್ಟೆಗಳನ್ನು ತೊಳೆಯುವದು ಒತ್ತಟ್ಟಿಗಿರಲಿ । ಅವರ ಮುಖವನ್ನು ಸಹ ನೋಡಲಾರ । ಎಂದು ಹೇಳಿದರು ।

ಆಹಾ। ವೀರಾ । ಆಹಾ ಶರಭಾ। ಆಗ ಸಭೆಯಲ್ಲಿದ್ದ ಕೊಂಡಿ ಮಂಚಣ್ಣನು ಬಲು ಕೋಪದಿಂದ । ಏನು?ನಮ್ಮ ಮಹಾರಾಜರ ನೆಲದಲ್ಲಿದ್ದು ಕೊಂಡು । ಅವರ ಬಟ್ಟೆಗಳನ್ನು ತೊಳೆಯುವದಿಲ್ಲವೆಂದರೇನು? ಎಂದು ಕೇಳಿದನು । ಮತ್ತು ಆತನನ್ನು ಹಿಡಿಸಿ ತರಲು ಅನೇಕ ಕುರುಡ ಕುಂಟರನ್ನು ಕಳಿಸಿದನು । ಆಗ ನದಿಯ ಕಡೆಗೆ ಹೊರಟ ಮಾಚಯ್ಯನಿಗೆ । ಅಂಗಹೀನರು ಹೇಳುತ್ತಾರೆ । ಹೇ ಸ್ವಾಮಿ । ಅರಸರು ತಮ್ಮನ್ನು ಬರಲು ತಿಳಿಸಿದ್ದಾರೆ ಎಂದು ಹೇಳಿದರು । ಆಗ ಅವರಿಗೆ ಮಾಚಯ್ಯನ ದರ್ಶನ ಮಾತ್ರದಿಂದಲೇ ।

ಅಂಗಾಂಗಗಳು ದೊರೆತು । ಪುನಃ ಹದಿನಾರು ವರ್ಷದ ಪ್ರಾಯದವರಾದರು । ಇದನ್ನು ಕೇಳಿದ ಬಿಜ್ಜಳ ರಾಜನು ಬಲು ವಿಸ್ಮಯ ಪಡುತ್ತಿರಲು । ಆಗ ಮಂಚಣ್ಣನು ರಾಜನ ಬಟ್ಟೆಗಳನ್ನು ಗಂಟು ಕಟ್ಟಿಕಳಸಿ । ಇದನ್ನು ಮಡಿ ಮಾಡಿಕೊಡಬೇಕು ಇಲ್ಲವಾದರೆ ಆತನನ್ನು ಹಿಡಿಯಲು ದೊಡ್ಡ ಸೈನ್ಯವನ್ನೇ ಕಳಿಸುವದಾಗಿ ಬೆದರಿಕೆ ಹಾಕಿದನು । ಆ ಬಟ್ಟೆಗಳನ್ನು ಮಾಚಯ್ಯನು ಕೋಪದಿಂದ ನೋಡಲು । ಅವು ಅಲ್ಲಿಯೇ ಸುಟ್ಟು ಭಸ್ಮವಾದವು । ಇದನ್ನು ಕೇಳಿದ ಅರಸು ಮಾಚಯ್ಯನನ್ನು ಹಿಡಿದು ತರಲು ದೊಡ್ಡ ಸೈನ್ಯವನ್ನು ಕಳಿಸಿದನು । ಆಗ ಸೈನಿಕರು ಆತನ ಮೇಲೆ ಪ್ರಯೋಗಿಸಿದ ಬಾಣಗಳೆಲ್ಲಹೂವಾಗಿ । ಪಾದದ ಮೇಲೆ ಬಿದ್ದವು ಆಗ ಮಾಚಯ್ಯನು ಬಟ್ಟೆ ಹಿಂಡಿದ ನೀರನ್ನು ಸೈನಿಕರ ಮೇಲೆ ಎರಚಲು । ಅದು ಬೆಂಕಿಯಾಯಿತು । ಈ ಸುದ್ದಿಯನ್ನು ತಿಳಿದ ಬಸವಣ್ಣನವರು । ಬಿಜ್ಜಳರಾಜನಿಗೆ ಹೇಳುತ್ತಾರೆ । ಎಲೈ ಬಿಜ್ಜಳ ರಾಜನೇ ನಿನಗೇನು ಹುಚ್ಚು ಹಿಡಿದಿದೆನು । ನೀನು ತಿಳಿದಂತೆ ಮಾಚಯ್ಯ ಸಾಮಾನ್ಯ ಪುರುಷನಲ್ಲ । ಹಿಂದಕ್ಕೆ ಶಿವದ್ರೋಹಿಯಾದ ದಕ್ಷಬ್ರಹ್ಮನನ್ನು ಸಂಹರಿಸಿದ । ಶ್ರೀ ವೀರಭದ್ರನೇ ಈ ಮಡಿವಾಳ ಮಾಚಯ್ಯ । ಈಗ ಸೈನಿಕರು ಆತನಿಗೆ ಶರಣಾಗತರಾಗದಿದ್ದರೆ । ಊರು ಸಹ ಉಳಿಯುವದಿಲ್ಲ । ಆದ್ದರಿಂದ ನೀನು ಬೇಗನೆ ಹೋಗಿ । ಆತನಲ್ಲಿ ಕ್ಷಮೆ ಕೇಳಿಕೊ ಎಂದರು । ಆಗ ಬಿಜ್ಜಳನಿಗೆ ಮುಚ್ಚಿದ ಕಣ್ಣು ತೆರೆಯಿತು । ವಿವೇಕವು ಹುಟ್ಟಿತು । ಮಾಚಯ್ಯ ನಿದ್ದಲ್ಲಿ ಬಂದು । ಹೇ ಮಹಾಮಹಿಮನಾದ ಮಾಚಯ್ಯನೇ । ಎನ್ನ ಅಪರಾಧವನ್ನು ಮನ್ನಿಸಬೇಕು ಎಂದು ಬೇಡಿಕೊಂಡನು । ಆಗ ಮಾಚಯ್ಯನು । ಎಲೈ ರಾಜನೇ ನಿನ್ನ ಅಪರಾಧವನ್ನು ಮನ್ನಿಸಿದ್ದೇನೆ । ಇನ್ನು ಮೇಲೆ ನಿನ್ನ ರಾಜ್ಯದಲ್ಲಿ ಶಿವಭಕ್ತರಿಗೆ ಯಾವ ತೊಂದರೆಯನ್ನು ಕೊಡಬೇಡವೆಂದು ಹೇಳಿದನು । ಆಗ ರಾಜನು ಹಾಗೆ ಆಗಲೆಂದು ಒಪ್ಪಿಕೊಂಡನು । ಕಡೆ ಕಡೆ(ಶಂಕ್ರಪ್ಪ ಬಸಪ್ಪ ತೊಂಡಿಹಾಳ, ವರ್ಷ ೨೦೦೦, ೩೬ ).

## ಮಡಿವಾಳ ಮಾಚಿದೇವರು :

ಅಹಹಹಾ ರುದ್ರಾ, ಹೇ ದೇವರ ದೇವ ಶಂಭೋ , 'ಗೌರಿ ದೇಹ ಸಮುದ್ಭವಂ, ಚತುರ್ಭುಜಂ' ಮೂಷಿಕವಾಹನನಿಗೆ ನಮೋ ನಮೋ ಎಂದೆವಯ್ಯಾ . ಅಹಹಹಾ ರುದ್ರಾ, ಆ ದೇವಾ ಮಾದೇವನೆನಬೇಡ, ಕುಮುದ್ವತೀ ತೀರದಲ್ಲಿ ಮೆರೆಯುವಂಥ ಶಿವನೇ ಭೋಪರಾಕ್. ಹೇ ಶಂಭೋ,ಅಂಥಪ್ಪ ನಮ್ಮ ಕೈಲಾಸಪತಿ ಮಹಾದೇವನು ಕೂತಕಾಲಕ್ಕೆ ಘುಡು ಘುಡಿಸಿ ಆರ್ಭಟಿಸುತ್ತ ಬರಲು, ಅವನು ತನ್ನ ಫಣೆನೇತ್ರವನ್ನು ಸ್ವಲ್ಪ ಓರೆಮಾಡಲು ಪ್ರಳಯಾಗ್ನಿ ಕುಂಭದ ಮುಚ್ಚಳವನ್ನೇ ತೆರೆದಂತಾಯಿತು. ಆ ಜ್ವಾಲೆಯಿಂದ ನಮ್ಮ ವೀರಭದ್ರ ದೇವರು ಉದ್ಭವಿಸಿ, ಆರ್ಭಟಿಸಿ ಹಿಡಿದ ಖಡ್ಗ ನೆಲಕ್ಕೊಡೆಯುತ್ತಾ, ಮುರವಾಳ ಬಾಕು, ಹುಲಿಯ ಚರ್ಮ ಇಂತಿಷ್ಟು ಮುಂತಾದ ಆಯುಧ ಹಿಡಿದು 'ನನ್ನನ್ನೇಕೆ ಹುಟ್ಟಿಸಿದಿ', ಎನ್ನಲು ಶಿವನು...... 'ಶಾಂತಿಯನ್ನು ತಾಳು, ನಾನು ಹೇಳುವುದನ್ನು ಕೇಳು, ಅದು ಏನೆಂದರೆ, ದಕ್ಷನೆಂಬುವನು ಲಕ್ಷ ಪಾತಕಿಯಾಗಿ ಯಜ್ಞ ವಂ ಮಾಡಿ ನಿನ್ನ ತಾಯಿ ನನ್ನ ಸತಿ ದಾಕ್ಷಾಯಿಣಿಯ ಸಾವಿಗೆ ಕಾರಣನಾಗಿರುವನು ಅವನಿಗೆ ಪಾಠವಂ ಕಲಿಸು' ಎಂದು ಹೇಳಿ ಕಳಿಸಲು ಈ ವಾಣಿಯನ್ನು ಕೇಳಿ ಕಡುಗಲಿಯು ಆರ್ಭಟಿಸಿ ದಕ್ಷಬ್ರಹ್ಮನ ಯಜ್ಞ ಶಾಲೆಗೆ ಹ್ಯಾಗೆ ಹೋಗುತ್ತಾನೆ ! ದಕ್ಷಬ್ರಹ್ಮನ ಶಿರಛೇದನ ಮಾಡಿ ಹೇ ಶಂಭೋ ಮೈಗೆಲ್ಲ ಮಾಂಸಮಜ್ಜೆ ಹತ್ತಿಸಿಕೊಂಡು ಕೈಲಾಸಕ್ಕೆ ಹಾರಿದನು. ಕೈಲಾಸ ಪರ್ವತದಲ್ಲಿ ಸಕಲ

ಗಣಾಧೀಶ್ವರರು, ಅಷ್ಟ ದಿಕ್ಪಾಲಕರು ನೆರೆದಿದ್ದರು. ಇಂತಪ್ಪ ವೀರಭದ್ರ ದೇವರು ಧಾವಿಸಿ ಬರಲು ರಕ್ತ ಮಾಂಸಗಳು ಕುಳಿತ ಮುನಿಗಳಿಗೆ ತಾಗಿ, ಅವರು, ' ಎಲೇ ಹುಡುಗನೇ ಅಪವಿತ್ರ ಮಾಡಿದಿಯಲ್ಲಾ', ಎಂದು ನಿಂದಿಸಿ ಕಮಂಡಲುವಿನಿಂದ ನೀರನ್ನೆರಚಲು ವೀರಭದ್ರನು ಕಾಲಿಗೆ ಬಿದ್ದು, 'ದೇವಾದಿದೇವಾ, ನನಗೆ ಶಾಪ ಬಿದ್ದಿದೆ ಏನು ಮಾಡಲಿ', ಎನ್ನಲು ಮಹಾದೇವನು, 'ಪುತ್ರಾ ! ಇದು ಅನಿವಾರ್ಯ ನೀನು ಭೂಲೋಕದಲ್ಲಿ ಮಡಿವಾಳನ ಹೊಟ್ಟೆಯಲ್ಲಿ ಹುಟ್ಟಿ ಶರಣರ ಬಟ್ಟೆಗಳನ್ನು ಮಡಿಮಾಡಿ ಕೊಡಬೇಕಾಗಿದೆ', ಎನ್ನಲು ವೀರಭದ್ರನು ದೀರ್ಘದಂಡ ನಮಸ್ಕಾರ ಮಾಡಿದನು. ಕಾಲಾನಂತರ ವೀರಭದ್ರನು ನಮ್ಮ ಬಿಜಾಪುರ ಜಿಲ್ಲೆಯ ಹಿಪ್ಪರಗಿ ಎಂಬ ಊರಿನಲ್ಲಿ ಪರ್ವತಯ್ಯನೆಂಬ ಮಡಿವಾಳನ ಮಗನಾಗಿ ಅವತರಿಸಿದನು. ಮಹಾಸ್ವಾಮಿಯು, ಅವನಿಗೆ ಮಡಿವಾಳ ಮಾಚಿದೇವರೆಂದು ನಾಮಕರಣವಂ ಮಾಡಿದರು. ಅವರು ಕಾಲಾನಂತರ ಕಲ್ಯಾಣದಲ್ಲಿ ಶರಣರ ಬಟ್ಟೆಗಳನ್ನು, ಸಕಲರ ಮನದ ಮಲಿನತೆಯನ್ನು ಮಡಿಮಾಡಿದ್ದಲ್ಲದೆ ಕಡೆಗಾಲಕ್ಕೆ ದೇವರ ಹಿಪ್ಪರಗಿ ಕ್ಷೇತ್ರದಲ್ಲಿ ಲಿಂಗೈಕ್ಯರಾದರಯ್ಯಾ ರುದ್ರಾ(ಕಮಲಾ ಹೆಮ್ಮಿಗೆ,೨೦೦೦, ೨೦).

## ಶರಭಾವತಾರವ ಧರಿಸಿದ ಶ್ರೀ ವೀರಭದ್ರ :

ಆಹಾ ರುದ್ರಾ ॥ ಶ್ರೀ ಶರಭಾವತಾರದ ವಚನವನ್ನು ಹೇಳುತ್ತೇನೆ । ಸರ್ವ ಮಹಾಶಯರು ಏಕ ಮಾನಸ ಚಿತ್ತದಿಂದ ಕೇಳಿರಿ। ದೇವಾ । ಕರಿ ಕೊರಳನಾದ । ಪರಶಿವನಮೂರ್ತಿಯು । ವರಸುತ ನೆನಿಸುವ। ವೀರೇಶ್ವರನು। ಶರಭಾವತಾರಮಂ ತೊಟ್ಟು। ಉಗ್ರನಾದ। ನರಸಿಂಹನ ಶಿರಹರಿದ। ಪರಿಯಂ ಪೇಳುವೆನು। ಕೇಳಿರೈ। ಅರಿತಸಜ್ಜನರು ಪೂರ್ವದಲ್ಲಿ ಹಿರಣ್ಯಕಶ್ಯಪನೆಂಬ। ದೈತ್ಯನು ಅರಣ್ಯದಲ್ಲಿ। ಬ್ರಹ್ಮನನ್ನು ಕುರಿತು। ತಪವಂ ಮಾಡಿ ದೇವದಾನವರಿಂದಲೂ ಮಾನವರಿಂದಲೂ। ಒಳಗೂ ಹೊರಗೂ। ಬತ್ತಿಸು ಆಯುಧ ಗಳಿಂದಲೂ। ಮೃತಪಡದಂತೆ ವರವಂ ಪಡೆದು। ಅವರ ಮಹಾಬಲದಿಂದ ಅಹಂಕಾರಗೊಂಡು ಏನು ಮಾಡಿದನೆಂದರೆ। ಸುರಪುರದಲ್ಲಿ ಇರುವ। ಸುರರೂ । ಅಸುರರೂ। ಗರುಡರೂ। ಗಂದರ್ವರೂ ಕಿನ್ನರು ಕಿಂಪುರುಷರು। ಮೊದಲಾದ ದೇವಗಣವಂ ತಿಂದು ತೇಗಿ। ಅದು ಅಲ್ಲದೆ ಇಂದ್ರನಂ ಓಡಿಸಿ। ಅಗ್ನಿಯಂ ಧೂಡಿಸಿ। ಯವನಂ ಬಾದಿಸಿ। ನೈರುತ್ಯನಂ ಝಾಡಿಸಿ। ವರುಣನಂ ಹಿಡಿಸಿ। ವಾಯುವ್ಯ। ಕುಬೇರ। ಈಶಾನ್ಯರಂ। ಹೊಯ್ಯುದು। ಬೈದು। ಭಂಡಿಸುತ್ತಿರುವ ಕಾಲಕ್ಕೆ। ಸರ್ವ ಅಷ್ಟ ದಿಕ್ಪಾಲಕರು। ಕೂಡಿಕೊಂಡು। ಒಂದಾ ಲೋಚನೆಯಂ ಮಾಡಿ। ಈ ಗರ್ವದ ದೈತ್ಯನ। ವಿಚಾರಂ ಈಶ್ವರನೊಡನೆ। ಪೇಳುವ ಕಾರಣದಿಂದೆ ಗೀರ್ವಾಣಪತಿ ಮೊದಲಾದ। ಸುರರು ಅರಸಿ ಬಂದು। ಶ್ರೀಶೈಲ ಪರ್ವತದಲ್ಲೊಪ್ಪುವ । ಪಾರ್ವತಿ ಪತಿಯಾದ ಪರಶಿವನ। ಅಡಿದಾವರಿಗಳಿಗೆ ವಂದಿಸಿ। ಭಯಭಕ್ತಿಯಿಂದ ಹೇಳುತ್ತಾರೆ। ಹೇ ಪರಾತ್ಪರವಾದ ಪರಶಿವ ಮೂರ್ತಿಯೆ ನಂಬಿದ ಭಕ್ತರ। ಇಚ್ಚಿತಾರ್ಥವಂ ಬಿಡದೆ। ಪಾಲಿಸು ದೇವಾ। ಕೃಪಾನಿಧಿ ಮೀರಿದವರಂ ಕೊಲ್ಲುವ ಮೊರೆಹೊಕ್ಕವರಂ। ಕಾಯುವ। ಗಿರಿಜಾವಲ್ಲಭನೆ ಆದರೆ ಕೇಳು। ಹಿರಣ್ಯಕಶ್ಯಪನೆಂಬ ದೈತ್ಯನು। ಅರಣ್ಯದಲ್ಲಿ ಪರಕಮಲವರಿತು। ತಪವಂ ಮಾಡಿ ದೇವದಾನವ ಮಾನವರಿಂದಲೂ। ಒಳಗೊ ಹೊರಗೋ। ಹಗಲುರಾತ್ರಿಯು। ಬತ್ತೀಸು ಆಯುಧಗಳಿಂದಲೂ ಮೃತ ಪಡದಂತೆ ವರವಂ ಪಡೆದು। ಆ ದರ ಬಲದಿಂದ ಆ ಕೆಟ್ಟ ದೈತ್ಯನು ನಿಷ್ಠೆಯಂತೆಪ್ಪಿ। ಬ್ರಷ್ಟತನದಿಂದ ನಮ್ಮನ್ನು ಬಡಿದನು। ಆ ಪೆಟ್ಟುಗಳನ್ನು ತಾಳಲಾರೆವಪ್ಪಾ।

ಹೇ ಸೃಷ್ಟಿಗೀಶ। ಆ ದುಷ್ಟದಾನವನಂ ಕೊಂದು ನಮ್ಮನ್ನು ಶಿಷ್ಟತನದಿಂದ ಬಾಳುವಂತೆ ಮಾಡು ದೇವಾ ಎಂದು ಬಿನ್ನೈಸಲು। ಈ ಪ್ರಕಾರವಾಗಿ ದೈನ್ಯಪಡುವ ಅಷ್ಟ ದಿಕ್ಪಾಲಕರಂ ಪರಮೇಶ್ವರನು ಕಂಡು ಆ ಮುರವರ್ದನಾದ ನಾರಾಯಣನಂ ಕರೆದು ಅರವುತ್ತಾ ಬೆ। ಎಲೈ ದೈತ್ಯಾರಿಯಾದ ವಿಷ್ಣುವೇ ಎಲೈ ಹರಿಯೇ। ನೀನು ಕೇಳು। ಅಸುರರಂ ಸುತ್ತಿಕೊಂಡು ಕಡು ಬಾಧಿಸುತ್ತಿರುವ ಹಿರಣ್ಯಕಶ್ಯಪನು। ಬ್ರಹ್ಮನ ವರವಂ ಪರಿಹರಿಸಿ। ಅವನನ್ನು। ಸಂಹರಿಸಿ ಬಾ ಎಂದು ಹೇಳಲು। ಕೇಳುತ್ತಲೆ ದೈತ್ಯಾರಿಯಾದ ವಿಷ್ಣುವು। ಏನಂದನಂದರೆ। ಎಲ್ಲ ದೇವರಿಗೆ ವಲ್ಲಭನಾದ ಮಹೇಶನೇ। ಹಸಾದು ಜಯ್ಯ ಆ ನಿನ್ನ ಜ್ಞಾನಾನುಸಾರವಾಗಿ ಶಿರಸಾವಹಿಸಿ ನಡೆಯುವುದಕ್ಕೆ ಸಿದ್ಧನಾಗಿದ್ದೇನೆ। ಮಹಾಸ್ವಾಮಿ। ತಾವು ಹೇಳಿದಂತೆ। ತಮ್ಮ ಅಪ್ಪಣೆಯಂ ಪಡೆದು। ಈಗಲೇ ಹೋಗಿ। ಆ ಖೂಳದಾನವನ ಸೀಳಿ ಬಿಡುತ್ತೇನೆಂದು। ಹೇಳಲು।ಕೇಳುತ್ತಲೇ ಪರಶಿವ ಮೂರ್ತಿಯು ಸಂತೋಷಪಟ್ಟು। ವ್ಯಾಳ ಶಯನನಾ ಮಾತುಗಳಂ ಬಾಳ ನೇತ್ರನಾದ ಶಂಕರನು ಕೇಳಿ। ಸುರರ ಸಮ್ಮೆಳಮಂ ಸಂತೈಸಿ ಬೀಳ್ಕೊಡಲಾಗಿ। ಇತ್ತಲಾ ದೈತ್ಯಾರಿಯಾದ ವಿಷ್ಣುವು ಏನು ಮಾಡಿದನೆಂದರೆ। ಆ ಮೃತ್ಯುಂಜಯನ ಅಪ್ಪಣೆಯಂ ಪಡೆದು। ಅದೇ ರಾತ್ರಿಯಲ್ಲಿ ಕತ್ತಿ ಮೊದಲಾದ ಆಯುಧಗಳಂ ಬಿಸುಟಿ। ಆ ದೈತ್ಯನಾದ ಹಿರಣ್ಯ ಕಶ್ಯಪುವಿನ ವಿಸ್ತಾರದಿಂದೊಪ್ಪದ। ನಡು ಮನೆಯ ಕಂಭದಲ್ಲಿ ಕಡು ಸೊಬಗಿನಿಂದ ಸಿಂಹ್ವಾಕೃತಿಯಂ ತಾಳಿ। ಹುಟ್ಟಿ ಘುಡಿ ಘುಡಿಸಿ ಆರ್ಭಟಿಸಿ। ಬಡ ದೇವತೆಗಳನ್ನು ಕಂಡು ಕಡು ಭಾವಿಸುತ್ತಿರುವ। ಜಡೆ ದೈತ್ಯನೆಲ್ಲರುವನು। ತೋರೋ ತೋರೋ ಎಂದು। ಅಡಿಗಡಿಗೆ ಸಿಡಿಲಿನಂತೆ ಆರ್ಭಟಿಸುತ್ತಿರುವ ಕಾಲಕ್ಕೆ। ಕಳವಳಗೊಂಡು ಮಿಡುಕುತ್ತಲಿರುವ। ಹಿರಣ್ಯಕಶ್ಯಪುವಿನನ್ನು। ನಮ್ಮ ಮೃಡನ ಸಖನಾದ ನರಸಿಂಹನು ಕಂಡು ಎಡೆಬಿಡದೆ ಹಿಡಿದು ಎಳೆತಂದು। ನಡು ಹೊಸ್ತಲೊಳ ಕೆಡವಿ। ಹಗಲು ರಾತ್ರಿಯಲ್ಲದೆ। ನಡು ಸಾಯಂಕಾಲದಲ್ಲಿ। ದೇವಮಾನವರಂತಲ್ಲದೆ। ನರಸಿಂಹಂ ಕೃತಿಯಾಗಿಯೂ। ಯಾವ ಬತ್ತಿಸು ಆಯುಧಗಳಿಲ್ಲದೆ। ಆ ದೈತ್ಯನಂ ಸಂಹರಿಸಿ। ಅವನ ರಕ್ತವಂ ಕುಡಿದು। ಕುಡಿದ ರಕ್ತದ ಮದವು ತಲೆಗಾವರಿಸಿ। ಮತಿಗೆಟ್ಟು। ಬುದ್ಧಿಹೀನನಾಗಿ। ಸ್ಮರಣೆ ತಪ್ಪಿ। ದೇವಾತ್ಮವು ಹೋಗಿ। ಏನು ಮಾಡಿದನೆಂದರೆ। ಕಂಡ ಕಂಡ ಸುರದಾನವರಂ ದಿಂಡುಗೆಡವಿ। ಚಂಡು ಚಂಡುಗಳಂ ಮುರಿದು। ರುಂಡ ರುಂಡಗಳನ್ನೇ ಹರಿಯಗಟ್ಟಿ। ಗಂಡು ಗಲಿತನದಿಂದ। ರಕ್ತ ಮಿದುಳು ಮಾಂಸ ಹೆಚ್ಚು ಸವಿದು ತಿನ್ನುವ। ಈ ಪುಂಡರೀಕಾಕ್ಷನ ಭಂಡತನವನ್ನು। ಉದ್ಧಂಡರಾದ ದೇವತೆಗಳು ಕಂಡು। ಪರಶಿವನ ಮುಂದೆ ಓಡಿಬಂದು ದೂರು ಹೇಳಲು। ನಮ್ಮ ಪರಶಿವ ಮೂರ್ತಿಯ। ಈ ಸುರರ ದೂರನ್ನು ತಿಳಿದು। ತರಳನಾದ ವೀರೇಶನನ್ನು ಕರಿಯಲು। ನಮ್ಮ ವಿರೇಶ್ವರನು ಬಂದು ನಿಂತು ಹೇಳಿದ್ದೇನೆಂದರೆ। ಎಲೈ ತಂದೆಯೇ। ಎಲೈ ಪಿತನೇ। ಅತಿ ಹಿತದಿಂದ ಎನ್ನ ಸುತನಾದ ವೀರ ಬಾ ಎಂದು ಕರೆದ ಪರಿಯೇನು। ಅಹಿತರೆಲ್ಲರ್ಪರು ತೋರೋ ತೋರೋ ಎಂದು। ಇದೇ ಖಡ್ಗಕ್ಕೆ ಬಲಿಯಂ ಕೊಡುವೆನೆಂದು। ಬಿಲ್ಲನ್ನು ಝೇಂಕರಿಸಿ। ಕೋಟಿ ಸಿಡಿಲು ಹೊಡೆದಂತೆ ಘರ್ಜನೆಯಂ ಮಾಡಿ। ಠಣ್ ಠಣ್ ಎಂದು ಕುಪ್ಪಳಿಸುತ್ತಿರುವ ಬಾಲಕನ ಲೀಲವನ್ನು। ಶೂಲಪಾಣಿಯಾದ ಶಂಕರನು ನೋಡಿ। ಮೇಲಾದ ಗದ್ದಿಗೆಯ ಮೇಲೆ ಕುಳ್ಳಿರಿಸಿ। ಅತಿ ಶಾಂತಿಯಂ ಪಡಿಸಿ ಹೇಳುತ್ತಾನೆ।

ಆಹಾ ವೀರಾ। ಆಹಾ ಶರಭಾ। ಎಲೋ ಎನ್ನ ಮೋಹದ ಕುಮಾರ ಅತಿಧೀರ। ಎನ್ನ ಬಾಳ ನೇತ್ರದೊಳ್ ಜನಿಸಿ। ಖೂಳನಾದ ದಕ್ಷಬ್ರಹ್ಮನ ಶಿರವಂ ಹಾರಿಸಿದ। ಮೇಲಾದ ಪುತ್ರನೇ ಕೇಳಪ್ಪಾ। ಅಷ್ಟ ದಿಕ್ಪಾಲಕರಂ ಕಷ್ಟಪಡಿಸುವ। ದುಷ್ಟ ಹಿರಣ್ಯ ಕಶ್ಯಪುವಿನಂ ನಷ್ಟಪಡಿಸಿಬಾರೆಂದು ನಾನು ವಿಷ್ಣುವಿಗೆ ಹೇಳಿದರೆ। ಆ ಹುರಿಯು। ನರಸಿಂಹದಾಕಾರವಂ ಧರಿಸಿ। ದುರುಳನಾದ ಹಿರಣ್ಯಕಶ್ಯಪುವಿನಂ ಸಂಹರಿಸಿ। ರಕ್ತವನ್ನು ಕುಡಿದು। ಆದರ ಮದವು ತಲೆಗಾವರಿಸಿ। ದೇವಾತ್ಮ ಹೋಗಿ। ಸುರರಂ ಕಂಡು ಕಡುಭಾದಿಸುತ್ತಿರುವನಂತೆ। ಆ ಹರಿಯಾದ ನರಸಿಂಹಗೆ। ತರತರದ ನೀತಿಯಂ ಹೇಳಿ। ನೀನು ಅತಿ ಶಾಂತಿಯಂ ತಾಳಿ। ಇಲ್ಲಿರಬೇಡ ಮೂರ ಹರ ನಡಿಗೆ ತೆರಳಬೇಕೆಂದು। ಆ ನರಸಿಂಹನನ್ನು ಕರೆತರಬೇಕು। ಬಾರದ ಪಕ್ಷಕ್ಕೆ। ಅವನನ್ನು ಸಂಹರಿಸಿ। ಬರಬೇಕು। ಹೀಗೆಂದು ಹೇಳುವ ಪರಮೇಶ್ವರನ ಮಾತುಗಳನ್ನು ನಮ್ಮ ವೀರಭದ್ರನು ಕೇಳುತ್ತಲೆ। ಸಿಡಿಲಾರ್ಭಟವ ಕೇಳಿದ ಸಿಂಹನಂತೆಯು। ಉರುಗಾರ್ಭಟದ ಕೇಳಿದ ಗರುಡನಂತೆಯು। ಅಖಂಡ ಹಲಿಗೆ ಮಾರಾಂಕ ಖಡ್ಗ। ತ್ರಿಶೂಲ ಡಮರುಗ। ಶಂಕುಪಾಣಿ ಬಿರಿಚಕ್ರ ಧನುರ್ಬಾಣ। ಹೃದಯ ಮುಷ್ಟಿ। ಅಂಬುಗಳು। ಧಗಿಲ್ ಭುಗಿಲ್। ಕೊಲಿಲೆ। ಎಂದು ಕೂಗಿ। ಮೃಡಸ್ವಾಮಿಯ ಅಡಿದಾವರೆಗಳಿಗೆ ವಂದಿಸಿ। ಬಲಪಾದದ ಉಂಗುಷ್ಟವನ್ನೇ ಕುಣಿಸುತ್ತಾ। ಯಡಪಾದದ ಪಾಂಚಾಲಯವನ್ನೇ ಆಧರಿಸುತ್ತಾ। ಗಂಡಭೇರುಂಡ ವಾಹನದಂತೆ ಘರ್ಜನೆ ಮಾಡಿ। ಠಣ್ ಠಣ್ ಎಂದು ಕುಪ್ಪಳಿಸಿ। ತಡಮಾಡದೆ ನರಸಿಂಹನ ಸಮೀಪಕ್ಕೆ ಹೋಗಿ। ತರತರದ ನೀತಿಯಂ ಹೇಳುತ್ತಾನೆ.

ಆಹಾವೀರಾ। ಆಹಾ ಶರಭಾ। ಎಲೈ ನರಸಿಂಹನೇ। ಎಲೈ ಹರಿಯೇ। ಇದು ಏನು। ಕಾನನದ ಮಧ್ಯದಲ್ಲಿ ಮೃಗ ಪತಿಯಾದ ಸಿಂಹನು। ತಾನಿರ್ದು। ಆನೆ ಮೊದಲಾದ ಮೃಗ ಜಂತುಗಳ ಕಷ್ಟಪಡಿಸುವನಂತೆ। ಅಷ್ಟದಿಕ್ಪಾಲಕರನ್ನು ನೀನು ಕಷ್ಟಪಡಿಸಬಹುದೇ। ಇದು ಅಲ್ಲದೇ। ಸೃಷ್ಟಿ ಕರ್ತ ಬ್ರಹ್ಮ। ಲಯಕರ್ತ ರುದ್ರ। ಕ್ಷಣಕಾರ್ತ ವಿಷ್ಣು ಹೀಗೆಂಬ ಬಿರಿದು ನಷ್ಟವಾಯಿತು। ಆದಂತಿರಲಿ। ಆ ಭ್ರಾಂತರಹಿತನಾದ ಶಂಕರಮೂರ್ತಿಯ ಸಭೆಯಲ್ಲಿ ನಾನು ಕುಳಿತಿರುವ ಕಾಲಕ್ಕೆ। ಏಕಾಂತದೊಳ್ ಎನ್ನನ್ನು ಕರೆದು। ಆ ಕಂತುಪಿತನಾದ ಕಮಲಾಕ್ಷನಂ ಕರೆತರುವುದುದೆಂದು। ಎನಗೆ ಹೇಳಿದ ಕಾರಣ। ಈಗ ನೀನು ತೆರಳಬೇಕೆಂದು ಹೇಳುತ್ತಲೇ। ನರಸಿಂಹನು ಕುದಿ ಕುದಿದು। ಅಳವಳಿಸಿ। ಅತಿ ರೋಷವೆಗ್ಗಳಿಸಿ। ಕರುಡಂಗೆ ಕಮರಿಯು ತೋರದಂತೆ। ಬಡವರಿಗೆ ರೋಗ ಬಂದಂತೆ। ಇವನ ಮಾತುಗಳು ಸೊಗಸದೆ। ನುಡಿಗಡಣದ ಉಚ್ಚರಿಸುತ್ತಾನೆ। ಎಲೈ ಪಶುಗಳೇ ಬೆದರದೇ ಬಾಗದೇ। ಎಬ್ಬುದರೋಳ್ ನಿಂತು ಮಧನಾರಿ ಕರೆಯುತ್ತಾನೆ। ತೆರಳಬೇಕೆಂದು ಪೇಳುವ। ಆದುಳನಾದ ನೀನು। ನಿನ್ನ ನಾಮಾಂಕಿತವೇನು। ನಿನ್ನ ಪಿತನ್ಯಾರು। ಇದು ಅಲ್ಲದೆ। ಸೃಷ್ಟಿಕರ್ತ ಬ್ರಹ್ಮ। ಲಯಕರ್ತ ರುದ್ರ। ಹೀಗೆಂಬನಿತದ ವಾಕ್ಯವನ್ನೆಲ್ಲ ಕಲಿತುಕೊಂಡೆ। ಆದರೆ ಹೇಳುತ್ತನೆ ಕೇಳು। ಅಜಹರಿ ಹರ ಸುರಾದ್ಯರು ಎನ್ನಿಂದಾದರು। ಅಂಡಜ ಪಿಂಡಜ ಉದ್ಬಿಜ ಜರಾಯಜ। 84 ಲಕ್ಷ ಜೀವಿಗಳು ಎನ್ನಿಂದಾದವು। ಸೃಷ್ಟಿಕರ್ತ ನಾನು। ಸ್ಥಿತಿಕರ್ತ ನಾನು। ಲಯಕರ್ತ ನಾನು। ಇಂತವಕ್ಕೆ। ಸೃಷ್ಟಿಲಕಯಕ್ಕೆ। ಕರ್ತನಾನಲ್ಲದೆ। ಬ್ಯಾರುಂಟೆ। ಎಂದು ಪೇಳುವ ಕಾಲಕ್ಕೆ। ವ್ಯಾಳ ಶಯನನಾ ಮಾತುಗಳನ್ನು ಪುತ್ರನು ಕೇಳುತ್ತಲೇ। ಕುದಿಕುದಿದು ಕಳವಳಿಸಿ। ಅತಿ ರೋಷವೆಗ್ಗಳಿಸಲು। ಆ ಸಿಟ್ಟಂ ಸಹಿಸಿಕೊಂಡು । ಮತು ವೀರಭದ್ರನು ನರಸಿಂಹನೊಡನೆ ಏನಂದನು। ಎಲೈ ನರಸಿಂಹನೇ। ಎಲೈ ಹರಿಯೆ। ಅಹುದೋ ನೀ

ಸಮರ್ಥನಹುದೋ। ಸೃಷ್ಟಿಸ್ಥಿತಿ ಲಯಕ್ಕೆ ಕರ್ತ ನೀನಾದರೆ। ಶಿವನು ಜಲ ಪ್ರಳಯ ಮಾಡಿದ್ದಕ್ಕೆ। ನೀನು ಹೇಳಿದ್ದೇನೆಂದರೆ। ಸೃಷ್ಟಿಕರ್ತ ಅಹಂತರ್ಕ। ಮಮಕರ್ತ ಮಹೇಶ್ವರಾ ಹೀಗೆಂದು ಹೇಳಿದ್ದಲ್ಲದೆ। ಆ ಮಹಾ ಸಮುದ್ರದಲ್ಲಿ ಆಲದ ಎಲೆಯೊಳ್ ತೇಲಿದ ಕಾರಣವೇನು। ಇದು ಅಲ್ಲದೆ। ಆ ಮಲಹರನೊಡನೆ ವಿರೋಧವ ತಾಳಿ ಬಲುಮಂದಿ ಕೆಸಲಿಲ್ಲವೇ। ಶಂಕರನ ರೋದಿಸಿ। ನಿನ್ನ ಶಿರವಂ ಕಳಕೊಳ್ಳಲಿಬ್ಯಾಡ। ಇದು ಅಲ್ಲದೆ। ಅಷ್ಟದಿಕ್ಪಾಲಕರ ಕಷ್ಟಪಡಿಸುವ ದುಷ್ಟತನವನ್ನು ಬಿಟ್ಟುಬಿಡು। ನೀನು ಸಮರ್ಥನಾಗಿ। ಸುರರನ್ನು ಕಾಪಾಡು। ಅಸುರರನ್ನು ಕೊಲ್ಲು। ಕಿನ್ನರ ಕಿಂಪುರುಷ। ಗುರುಡ ಗಾಂಧರ್ವರೋಳ್ ಪ್ರೀತಿಯಾಗಿರು। ಇದು ಅಲ್ಲದೆ। ಎನ್ನ ನಾಮಾಂಕಿತವನ್ನು ಕೇಳಿದಿಯಾ। ಹರಿಯಜಾ ಸುರರೊಡಗೂಡಿಕೊಂಡು। ವರ ಯಜ್ಞವಂ ರಚಿಸಿ। ದುರುಳನಾದ ದಕ್ಷಬ್ರಹ್ಮನ ಶಿರ ಹರಿಯುವುದಕ್ಕೆ। ಉರಿನೇತ್ರದೊಳ್ ಪುಟ್ಟಿದ। ಪರಮೇಶ್ವರನ ತರಳನಾದ। ವೀರಾಧಿವೀರ ಅರಿಗಳ ಭಯಂಕರ। ಎನ್ನ ನಾಮಾಂಕಿತವನ್ನು ಕೇಳಿದಿಯಾ। ಎಲೈ ದುರ್ಬುದ್ಧಿ ದುರಾಚಾರ ದುರ್ನೀತಿ। ಅವಿವೇಕಿ।ಭ್ರಷ್ಟಾ ನೀಚಾ। ಎನ್ನ ಮಾತುಗಳನ್ನು ಕೇಳು। ಸೃಷ್ಟಿಗೀಶ್ವರನ ಪಾದಗಳ ಮೇಲೆ ನಿಷ್ಠೆಯುಳ್ಳವನಾಗಿರಬೇಕಲ್ಲದೆ। ಕೆಟ್ಟು ಹೋಗಬೇಡವೆಂದು ಕೈಗಳ ಮುಟ್ಟಿ ಎಳೆಯಲು। ಕೇಳತ್ತಲೇ ನರಸಿಂಹನು ಕಿಡಿಗೆದರಿ। ರೋಮಾದಿಗಳ ಗಡಗುಟ್ಟಿ। ನೇತ್ರಗಳು ಕೆಂಪೇರಿ। ಉರಿಯುವ ಬೆಂಕಿಯಲ್ಲಿ। ಘೃತವ ಹೊಯಿದಂತೆ। ಕಾಲ್ಬೇರಿ ವೀರಭದ್ರನ ವೃಕ್ಷ ಸ್ಥಳಕ್ಕೆ ಹರಿಯಲು। ಆಗ ವೀರಭದ್ರನು। ಆ ಭ್ರಷ್ಟನ ಧೃತಿಯಂ ತಿಳಿದು। ಎಡಪಾದದಿಂದೊದೆಯಲು। ರಾಹು ತೊಡಗಿದ ಚಂದ್ರನಂತೆಯೂ। ಸಿಂಹ ಕಂಡ ಆನೆಯಂತೆಯೂ ಮೂರ್ಛಿತನಾಗಿ ಬೀಳಲು। ಅಷ್ಟರಲ್ಲಿಯೇ ವೀರೇಶ್ವರನು। ಈ ದುಷ್ಟನಂ ಕೊಲ್ಲುವುದಕ್ಕೆ ಒಂದಾಲೋಚನೆಯಂ ಹುಡುಕಿ। ಕರಿಗೆ ಕೇಸರಿ ವೈರಿಯಾದಂತೆ। ಗಿರಿಗೆ ವಜ್ರ ವೈರಿಯಾದಂತೆ। ಈ ಸಿಂಹಗೆ ಶರಭ ವೈರಿಯೆಂದು ಯೋಚಿಸಿ। ಶರಭಾವತಾರವಂ ಧರಿಸಿದನು.

ಆಹಾ ವೀರಾ। ಆಹಾ ಶರಭಾ। ತೇಜೋಮೂರ್ತಿಯ। ಸಾವಿರ ತೋಳುಗಳಿಂದಲೂ। ಜಡೆಗಳಿಂದಲೂ। ಚಂದ್ರಾಭರಣದಿಂದಲೂ। ಶರಭ ಎಂದರೆ ಅರ್ಧ ಮೃಗ। ಅರ್ಧ ಪಕ್ಷಿಯ ಶರೀರ ಉಳ್ಳದ್ದಾಗಿಯೂ। ಎರಡು ರೆಕ್ಕೆ। ಎರಡು ಕೊಕ್ಕಗಳುಳ್ಳದ್ದೂ। ವಜ್ರಾಯುಧಕ್ಕೆ ಸಮಾನವಾದ ಉಗುರುಗಳು। ಆ ಉಗುರುಗಳೇ ಆಯುಧಗಳು। ದೊಡ್ಡ ತೋಳು ನಾಲ್ಕು ಕಾಲುಗಳುಳ್ಳದ್ದು। ಬೆಂಕಿಯಂತೆ ಕೆಂಪಾದ ಮೂರು ಕಣ್ಣುಗಳು। ಕೋರೆ ದಾಡೆ! ಕೆಳತುಟಿಗಳುಳ್ಳದ್ದು । ಆಗಿ ಹೂಂಕಾರ ಮಾಡುತ್ತಾ ಪ್ರಕಟವಾಯಿತು।

ಆಹಾವೀರಾ। ಆಹಾ ಶರಭಾ। ಇಂಥ ಅದ್ಭುತ ಆಕಾರಕ್ಕೆ ಭೂಮಿ ನಡುಗಿತು। ತರುಣಿಯರಿಟ್ಟೋಲೆ ಸರಿದು ಧಾತ್ರಿಗೆ ಬಿದ್ದವು। ನಡುಭಂಗವು ಹರೆದೆದ್ದಿತು। ಧೂಮಕೇತುವು ಅಂಬರದೆಡೆ ಹಾರಿತು। ಈ ಘೋರಾಕಾರಕ್ಕೆ ಭೂಮಿಯು ತಲ್ಲಣಿಸಿತು। ಕುಲಪರ್ವತಗಳು ನಡುಗಿದವು। ಅಷ್ಟ ದಿಗ್ಗಜಗಳು ತಲೆಗೊಡವಿದವು। ಕೂರ್ಮನು ಕೊರಚಾಡಿದನು। ಎಂಟು ದಿಕ್ಕುಗಳು ಉಂಟಾದ ಭಯದಿಂದ। ಗಡಗಡನೆ ನಡುಗಿದವು। ಅಷ್ಟರಲ್ಲಿಯೇ ಆ ದುಷ್ಟ ನರಸಿಂಹನು ಎಚ್ಚೆತ್ತು। ವೀರೇಶ್ವರನ ಮೇಲೆ ಬರುವುದನ್ನು। ನಮ್ಮ ಶರಭಾವತಾರಿಯು ಕಂಡು। ಘುಡಿಘುಡಿಸಿ ಆರ್ಭಟಿಸಿ। ಸಿಡಿಲು ಹೊಯಿದಂತೆ ಘರ್ಜನೆಯಂ ಮಾಡಿ। ಠಣ್ ಠಣ್ ಎಂದು ಕುಪ್ಪಳಿಸಿ। ನರಸಿಂಹನು ಎಚ್ಚೆತ್ತು। ವೀರೇಶ್ವರನ ಮೇಲೆ ಬರುವುದನ್ನು। ನಮ್ಮ

ಶರಭಾವತಾರಿಯು ಕಂಡು। ಘುಡಿಘುಡಿಸಿ ಆರ್ಭಟಿಸಿ। ಸಿಡಿಲು ಹೊಯಿದಂತೆ ಘರ್ಜನೆಯಂ ಮಾಡಿ। ಠಣ್ ಠಣ್ ಎಂದು ಕುಪ್ಪಳಿಸಿ। ನರಸಿಂಹನ ಕುತ್ತಿಗೆಯನ್ನು ಹಿಡಿದುಕೊಂಡು। ಅವತಾರವೆಗ್ಗಳಾಗಿ। ಗಗನಕ್ಕೆ ಹಾರಿ। ಪರ್ವತದ ತುದಿಯಿಂದ ಬಿಸಾಡಲು ಮತ್ತು। ಬಳಲುವ ನರಸಿಂಹನ ಎಳೆದೊಯಿದು। ಸಮುದ್ರದೊಳ್ ಮುಳುಗಿಸಿ ಕಡೆಗೆ ತೆಗೆದು। ಕೆಡಗಿ ಎದೆ ಗುಂಡಿಗಿಯಂ ಮೆಟ್ಟಿಕೊಂಡು। ತನ್ನ ಕರದೊಳಗಿರುವ ಗರಗಸ ಕತ್ತಿಯಿಂದ। ನರಸಿಂಹನ ಶಿರಚರ್ಮವಂ ಚರಚರನೆ ಕೊರೆದು। ಈ ಧರೆಗೆ ಬಿಸಾಡಲು। ಮತ್ತು । ಆ ನರಸಿಂಹನ ಶಿರ ಚರ್ಮವನ್ನು। ನಮ್ಮ ಶರಭಾವತಾರಿಯು ಕೈಯಲ್ಲಿ ಹಿಡಿದುಕೊಂಡು ಬಂದು। ಪರಶಿವನ ಅಡಿದಾವರೆಗಳಿಗೆ ಒಪ್ಪಿಸಲು। ನಮ್ಮ ಪರಶಿವಮೂರ್ತಿಯು। ಸುತನಂ ಕಂಡು ಅತಿ ಹಿಗ್ಗಿ ಕಣ್ಣುಗಳಲ್ಲಿ। ಪರಿಮಳದ ಜಲವುಕ್ಕಿ। ಎಲೋ ಎನ್ನ ಮೋಹದ ಕುಮಾರ ಅತಿಧೀರ। ಬಾರೆಂದು ಕರವಿಡಿದು। ರತ್ನ ಕೆತ್ತಿಸಿದ ಗದ್ದಿಗೆಯ ಮೇಲೆ ಕುಳ್ಳರಿಸಿ। ಅತಿ ಶಾಂತಿಯಂ ಪಡಿಸಿ। ಮುತ್ತಿನ ಸಾಸುವೆಯಂ ನಿಕ್ಕಿ ರತ್ನದ ನಿವಾಳಿಯಂ ತಗೆಸಿ। ತನ್ನ ಸಂವಾದ ನರಸಿಂಹನ ಶಿರ ಚರ್ಮವಂ ತೆಗೆದುಕೊಂಡು। ಮುಖವೇ ಕೀರ್ತಿ ಮುಖವಾಗಲೆಂದು ನಿರೂಪಿಸಿ। ಚರ್ಮವೇ ತನ್ನ ಗದ್ದಿಗೆಯಾಗಿ ಮಾಡಿಕೊಂಡು। ಸುರರಂ ಸಂತೈಸಿದನು। ದೇವಾ ಇಲ್ಲಿಗೆ ಶರಭಾವತಾರ ಸಮಾಪ್ತವಾದುದು। ಕರೆ ಕಾಳಿಂಗ ರುದ್ರಾ। ವಿಪರೀತಿ ನಾಯಕ। ಚಲದಂಕ ಮಲ್ಲ। ಕಡಕ್ಕಡೆ.

## ವೀರಭದ್ರ ದೇವರ ಗಮನ :

ಅಹಹಾ ವೀರ, ಅಹಹಹಾ ಸರ್ಪ,
ಸದ್ಭಕ್ತ ಶಿವಾಚಾರ ಸಂಪನ್ನರೆಲ್ಲರೂ ಕೇಳಿರಿ.
ಈ ನಮ್ಮ ವೀರಭದ್ರ ದೇವರು ಹುಟ್ಟಿದಾಗಳೇ ಹೂವಿನ ಕಾಶಿ
ವಿಷ್ಣು ಕಾಶಿ, ಬ್ರಹ್ಮಕಾಶಿ, ಸಾವಿರ ಶಿರಸ್ಸು, ಹೊನ್ನಿನ ಆವಿಗೆ
ಮೂರು ಸಾವಿರ ಕಣ್ಣು(ಖಡೇ ಖಡೇ) ಎರಡು ಸಾವಿರ ಭುಜ,
ಸರ್ಪಕೊಡಲಿ ಪಿಡಿದು, ಘನವೀರಭದ್ರ,
ಕರಗಸದ ಬಾಣ, ಬಿರಿಗಣ್ಣು, ಕೈಯ್ಯೆಂಬು ಕಠಾರಿ ಇಂತೀ
ರಣಭೂಮಿಗೆ ಸಾಂದ್ರಾಕಾರದಿಂದ ಹೂಂಕರಿಸುತ್ತ (ಖಡೇ ಖಡೇ)
ಅಲಲಲಲಾ ಎಂದು ನಡೆದು ಹೋಮಕ್ಕೆ ಬರಲು,
ದಕ್ಷ ಬ್ರಹ್ಮನ ಶಿರ ಹರಿದು ಸರಸ್ವತಿ ಮೂಗನೇ ಕೊಯ್ದು,
ಅಗ್ನಿನಾಲಿಗೆಯನೇ ಹರಿದು,
ಅರ್ವತ್ತಾರು ಕೋಟಿ ರಾಕ್ಷಸರನ್ನು ಕೆಂಡಗಣ್ಣಿನಿಂದ ಸುಟ್ಟು
ಕೆಂಡದ ಓಕುಳಿಯಾಡುತ್ತಾ ಬರುತ್ತಿರಲು, ದಕ್ಷನ
ಸತಿ ಮೇನಕೆಯು ಬಂದು,
ಎನ್ನ ಮುತ್ತೈದಿತನ ಪಾಲಿಸೆಂದು ಪಾದಕ್ಕೆರಗಲು ಅವಳ ಪತಿಗೆ ಕುರಿತಲೆಯನ್ನಿಟ್ಟು
ಕಳುಹಿಸಿದನು. ಅದನ್ನು ಶಿವನು ಕಂಡು, 'ಭಲರೇ ಭಾಪ್ರೇ' ಎಂದು ರತ್ನಕೆತ್ತಿದ

ಸಿಂಹಾಸನದ ಮೇಲೆ ಕೂರಿಸಿ, ಅಹಹಹಾ ಸರ್ಪ।
ಹೂವಿನ ಮಳೆಗರೆದನು. ಅಹಹಹಾ ವೀರಾ, ಅಹಹಹಾ ಸರ್ಪ
ಕಿವಿಗೆ ಚೌಕಳಿ ಮುತ್ತು, ಕುಂದಣದ ಉಡದಾರ
ಹಸರು ಜಗಲಿಯ ಮೇಲೆ ಹಸನಾದ ನಡುಕಟ್ಟು
ಮುತ್ತೈದೆ ಕಂಕಣ, ಬಂಗಾರದ ಕರಿಯನಿಟ್ಟು
ನಮ್ಮ ಮುಚಖಂಡಿ ಕರಿವೀರಭದ್ರ, ಗುಗ್ಗುಳವನ್ನಾಡುತ್ತಾ
ಅಕೋ ಆ ಕಡೆಯಿಂದ ಬಂದನಯ್ಯಾ, ಅಹಹಹಾ ವೀರ
ಕರೇ ಕಾಳಿಂಗನಾಯಕಾ, ವಿಪರೀತ ರುದ್ರಾ, ಛಲದಂಕ ಮಲ್ಲಾ! ದಕ್ಷಬ್ರಹ್ಮನ
ಶಿರ ತರಿದು ಕುರಿದಲೆಯನಿಟ್ಟ ಕಲಿಯೇ

ನಿನ್ನ ಪವಾಡ ಅಂದಿಗುಂಟು।
(ಖಡೇ ಖಡೇ) ಇಂದಿಗಿಲ್ಲ ಎಂಬ ಶತದ್ರೋಹಿಗಳಿಗೆ
ನೀನೇಗಂಡ ತಲೆದಂಡಾ। (ಖಡೇ ಖಡೇ)

ಅಹಹಹಾ ವೀರಾ, ಅಹಹಹಾ ಶರಭ
ಸದ್ಭಕ್ತ ಶಿವಾಚಾರ ಸಂಪನ್ನರಾದಂಥ ಜನಂಗಳೆಲ್ಲರೂ ಕೇಳಿ
ಅಹಹಹಾ ವೀರಾ, ಉಂಗುಷ್ಠಕ್ಕೆ ಉಂಗ್ರಲಿಂಗ ಕಟ್ಟಿ, ಅಂಗಾಲಿಗೆ ಅರ್ಜುನನಕಟ್ಟಿ
ಹಸ್ತಕ್ಕೆ ಹಸ್ತೇಶ್ವರನ ಕಟ್ಟಿ, ಮೀನಖಂಡಕ್ಕೆ ಮಿಡಿನಾಗರನಕಟ್ಟಿ,
ಮೊಳಕಾಲಿಗೆ ಕಾಳಿಂಗವನ್ನು ಕಟ್ಟಿ
ನಡಿಗೆ ಘನ ಸರ್ಪನೇ ಕಟ್ಟಿ
ಬೆನ್ನಿಗೆ ಬ್ಯಾತಾಳನೇ ಕಟ್ಟಿ
ಹೊಂಕಳಕ್ಕೆ ಹೊಂಕಳೇಶ್ವರನ ಕಟ್ಟಿ (ಖಡೇ ಖಡೇ)
ಅಲಲಲಾ... ಎರಡು ಮಣಕೈ ಕಟ್ಟಿ
ಬಾಯಿಯೊಳಗಿನ ಹದಿನಾರು ಹಲ್ಲು ಕಟ್ಟಿ, ಎಲಿಯಂಥ ನಾಲಿಗೆ ಕಟ್ಟಿ
ತಾಳೆಮರದಂಥ ತಲಿಕಟ್ಟಿ, ಜುಟ್ಟಕ್ಕೆ ಜುಟ್ಟೇಶ್ವರನನ್ನ ಕಟ್ಟಿ
ನಮ್ಮ ವೀರಭದ್ರ ದೇವರ ಗುಗ್ಗುಳಕ್ಕೆ ಯಾರಾದ್ರೂ ಏನಾದ್ರೂ ಮಾಡಿದರೆ
ಅವರನ್ನು ಹೆಡಮುರ್ಗಿ ಕಟ್ಟಿ ಅಹಹಾ ವೀರ, ಅಹಹಾ ಶರಭ (ಖಡೇ ಖಡೇ)
ಎಂದ ನಮ್ಮ ಅಂಬಿಗರ ಚೌಡಯ್ಯ.
ಅಹಹಹಾ ವೀರಾ, ರುದ್ರಾಕ್ಷಿ ಕಟ್ಟಿದರೆ, ಕೊರಳಲ್ಲಿ ರುದ್ರಾಕ್ಷಿ ಧರ್ಸಬೇಕಾದರೆ
ಮದ್ದು ಭಂಗಿ, ಸುರೇಪಾನ ಮಾಡುವಂಥ ಭಕ್ತನಾದರೆ,
ಕೊರಳಲ್ಲೂ ರುದ್ರಾಕ್ಷಿ ಧರ್ಸಬೇಕು. ತೋಳಲ್ಲಿ ರುದ್ರಾಕ್ಷಿ ಧರ್ಸಬೇಕಾದರೆ ತನ್ನ
ಸ್ತ್ರೀಯಳಲ್ಲದೆ ಪರಸ್ತ್ರೀಗೆ ತೋಳು ಚಾಚಿ ನೆನೆಯದಂಥ ಭಕ್ತನಾಗಿರಬೇಕು (ಖಡೇ ಖಡೇ).

## ವೀರಭದ್ರ ದೇವರ ಕರುಣೆ :

ಆಹಹಹಾ ವೀರ, ವೀರಭದ್ರನ ಪಾದಾರವಿಂದಗಳಿಗೆ ವಂದಿಸಿ
ವೀರಭದ್ರ ದೇವರಶಾಸ್ತ್ರವನ್ನು ಬರೆದಂತಹ ಸವದತ್ತಿಯ ಕಲ್ಮಠದ
ಅಭಿನವ ಕುಮಾರೇಶ್ವರರ ಪಾದಾರವಿಂದಗಳಿಗೆ ವಂದಿಸಿ,
ವೀರಾದಿ ವೀರಭದ್ರನ ಜನನವೆಂತೆಂದಡೆ,
ಆರು ಸಾವಿರ ವರ್ಷದ ಹಿಂದೆ, ವೀರಭದ್ರನು ಹುಟ್ಟಿದನಂತ್ಹೇಳುವರು
ಕೆಲವರು (ಖಡೇ) ಅದು ಅಲ್ಲಲ್ಲ (ಖಡೇ)...

ವೀರಭದ್ರನು ಎಂಟು ಸಾವಿರ ವರ್ಷದ ಹಿಂದೆ ಜನಿಸಿದನೆಂಬರು ಹಲವರು.
ಇವರ್‍ಯಾರು ವೀರಭದ್ರನ ಮಹಿಮೆಯನ್ನರಿಯರು.
ಶ್ರೀಮಂತನಾದೀ ವೀರನು
ರುದ್ರಘನ, ವೀರಘನ, ಶಿವಘನ, ದೇವಘನ ಅಂಶಭರಿತ ವೀರೇಶನು
(ಖಡೇ ಖಡೇ) ಆಶೆ ಅಧಿಕಾರ ದುರಂಕಾರ, ಸಹಜವಾದಂಗಳ ಈ ವೀರಭದ್ರನು
ಕಲಿಯುಗದಲ್ಲಿ ಹುಟ್ಟಲಿಲ್ಲ. ಈ ವೀರಭದ್ರನು
ದ್ವಾಪರದಲ್ಲಿಯೂ ತ್ರೇತಾಯುಗದಲ್ಲೂ ಹುಟ್ಟಲಿಲ್ಲ.

ಮತ್ಯಾವಾಗ ಹುಟ್ಟಿದನಯ್ಯ ಎಂದೆಡೆ
ಕೃತಯುಗದಲ್ಲಿ ಹುಟ್ಟಿದನಂದಿತು ಶಾಸ್ತ್ರ
ಕೂಗಿ ಹೇಳಿತು ಆಗಮ.
ವೀರಭದ್ರ ದೇವನು ಹುಟ್ಟಿದಾಗಲೇ ಸೂರ್ಯನಂಥ ಕಳೆ,
ಪ್ರಜ್ವಲಿಪ ಮುಖ, ಚಂಡಪ್ರಚಂಡ ಪುಂಡರ ಮಹಾ ಪುಂಡ,
ರುಂಡಗಳನ್ನು ಚೆಂಡಾಡಿ, ಭಂಡರ ಬಾಯ್ಗಳನ್ನು ಬಡಿಬಡಿದು,
ಅಡಿಗಡಿಗೆ ಶಿವನಾಮನನ್ನು ಘುಡುಘುಡಿಸುತ್ತ, ಬರಲು
ಇತ್ತ ಶಿವಲೋಕದವರಿಗೂ, ದೇವಲೋಕದವರಿಗೂ, ಹರಿಬ್ರಹ್ಮ, ಇಂದ್ರಚಂದ್ರ,
ರವಿಕಾಲ, ದಕ್ಷ-ಕಾಮ ಅನಂತ ಕೋಟಿ ದೇವಾನುದೇವತೆಗಳ ನಡುವೆ.
ಸ್ಪರ್ಧೆ ಎದ್ದು ನಾವೇ ಮೇಲು ಆ ಶಿವನು ಕೀಳೆಂದು ಕೇಕೆ ಹಾಕುತ್ತಿರಲು,
ಇತ್ತ ಶಿವಲೋಕದವರು ನೊಂದರು (ಖಡೇ ಖಡೇ).

ದೇವತೆಗಳು ಹಗಲು ಹನ್ನೆರಡು ಗಾವುದದಷ್ಟು
ನಿಡಿದು ಮುನ್ನೂರು ಯೋಜನ ತನಕ, ಯಜ್ಞಕುಂಡವಂ ರಚಿಸಿದರು.

ಆ ಯಜ್ಞದ ಅಧ್ಯಕ್ಷತೆಗೆ ದಕ್ಷಬ್ರಹ್ಮನಂ ನೇಮಿಸುತ್ತಿರಲಾಗಿ
ಇತ್ತ ದೇವಲೋಕದವರು
ಭತ್ತ ಅಕ್ಕಿ ಹಿಟ್ಟು, ಎಳ್ಳು, ತುಪ್ಪ ಅನ್ನಗಳನ್ನು ಸುಡುತ್ತಿರಲು
ನಾಲಿಗೆಯ ಚಟಕ್ಕೆ ಬಿದ್ದು ಪಶುಗಳಂ ಕೊಲ್ಲುತ್ತಿದ್ದರು (ಖಡೇ ಖಡೇ).

ಆಹಹಹಾ ರುದ್ರಾ ಬಲಿದಾನ ಯಜ್ಞವೆಂದರೆ
ದೇವರ ಹೆಸರಲ್ಲಿ ತಂತಮ್ಮ ಹೊಟ್ಟೆ ತುಂಬಿಕೊಳ್ಳುತ್ತಿದ್ದರು.
ಈ ಯಜ್ಞಕ್ಕೆ ಹಸುಗಳನ್ನು ಹಾಕಿಕೊಂದರೆ ಪಾಪವಿಲ್ಲೆಂದು ಶಾಸ್ತ್ರವಂ ಬರೆದರು.
ಆಹಹಹಾ ರುದ್ರಾ ಯಜ್ಞ ಎಂತಿತ್ತೆಂದರೆ
ಹಾಲು ಮೊಸರು ಜೇನುತುಪ್ಪಗಳನ್ನು ಸುಡುತ್ತಿರಲು
ಈ ವಿಷಯ ಕೇಳಿ ಪರಮೇಶ್ವರನು ಕೋಪಿಸಿಕೊಂಡದ್ದೊಂದು
ಅಧ್ಯಕ್ಷತೆಗೆ ದಕ್ಷಬ್ರಹ್ಮನನ್ನು ನೇಮಿಸಿದ್ದೊಂದು
ಇವೆಲ್ಲ ಸೇರಿ ಆವೇಶಪಟ್ಟನು. ಈ ದಕ್ಷ ಬ್ರಹ್ಮನು ನನ್ನನ್ನೇಕೆ ಮರೆತಿದ್ದಾನೆ
ಎಂದು ಕಳವಳಿಸಿ, ದಾಕ್ಷಾಯಣಿ, 'ಪರಮೇಶ್ವರನೇ ದೇವಾ
ನನ್ನನ್ನು ತಂದೆಯ ಯಜ್ಞಕ್ಕೆ ಕಳಿಸಿಕೊಡು ದೇವಾ' ಎಂದು ಬೇಡಿಕೊಂಡಳು.
ಆಗ ಶಂಕರನು
' ಏನೇ! ಕಿಂಕರಾಂಗಿಯೇ ಶಂಕರನ ಅರ್ಧಾಂಗಿಯೇ ಕೇಳು ಕೇಳು, ಕರೆಯದವರ
ಮನೆಗೆ ಕಳಸಗಿತ್ತಿಯಾಗಿ ಹೋಗಬಾರದು ಎಂಬ ಗಾದೆಯೇ ಇದೇ
(ಖಡೇ ಖಡೇ)
ಈ ಗಾದೆ ವೇದಕ್ಕಿಂತ ದೊಡ್ಡದು.
ನಾನಿಲ್ಲದೆ ಆ ದುರ್ಜನರ ಯಜ್ಞಪೂರ್ತಿಯಾಗದು. ಭಂಡರ ಯಜ್ಞ ಇದು ತಪ್ಪು
ತಿಳಿದವಳಾದ ನೀನು ಸರ್ವಥಾ ಹೋಗಿ ಅವಮಾನಿತಳಾಗಕೂಡದೆಂದನು.
ಆಗ ದಾಕ್ಷಾಯಣಿಯು ' ತನ್ನ ತಂದೆಯಲ್ಲಿಗೆ ಕರೆಯದಿದ್ದರೂ ಹೋಗುತ್ತೇನೆ,
ಎಂದ್ಹೇಳಿ ಹಠ ತೊಟ್ಟು, ನಂದಿಯನ್ನು ಕರಕೊಂಡು ಹೋದಳು.
ದಾಕ್ಷಾಯಣಿಯನ್ನು ತಾಯಿ ಆಗಲಿ, ಅಕ್ಕ ತಂಗಿಯರಾಗಲೀ ಬಾ ಅಂತ್ಹೇಳಿ
ಆಹ್ವಾನಿಸಲಿಲ್ಲ. ತಂದೆಯಾದ ದಕ್ಷಬ್ರಹ್ಮನು ಹೀಯಾಳಿಸಿ, ಎಲ್ಲಿದ್ದಾನೆ ಆ
ದಿಗಂಬರ? ಪಶು ರೀತಿಯವನು! ಎಂದು ಗಹಗಹಿಸಿ ನಗಹತ್ತಿದನು.
ಆಗ ದಾಕ್ಷಾಯಣಿಯು ಪರಮೇಶ್ವರನ ನಿಂದೆಯನ್ನು ಕೇಳಿ (ಖಡೇ ಖಡೇ)
ಚಿಂತಾಜನಕಳಾಗಿ ಅದೇ ಅಗ್ನಿಕುಂಡದಲ್ಲಿ ಹಾರಿಕೊಂಡಳು.
ನಂದಿಯು ಧಾವಿಸಿ ಕೈಲಾಸಕ್ಕೆ ಹೋಗಿ, ಪರಮೇಶ್ವರನಲ್ಲಿ ತಿಳಿಸಲು,

ಆವನು ಕಣ್ಣು ಕೆಂಡಮಾಡಿಕೊಂಡಿರಲು,
ಭೂಮಿಯು ಧಿಗಿಲ್ಲು ಭುಗಿಲ್ಲೆಂದಿತು. ಚಂದ್ರಸೂರ್ಯರು ದಿಕ್ಕಾಪಾಲಾದರು.
ಆಕಾಶದಿಂದ ನಕ್ಷತ್ರಗಳು ಗಲ್ಲಗಲ್ಲನೇ ಉದುರಿದವು.
ಸಮುದ್ರಗಳು ಅಲ್ಲೋಲ ಕಲ್ಲೋಲವಾದವು.
ಅಷ್ಟದಿಕ್ಪಾಲಕರು ಕಕ್ಕಾಬಿಕ್ಕಿಯಾದರು.
ಭೂಮಿಯ ಮೇಲಿನ ಪರ್ವತಗಳು ಅಳುಗ್ಯಾಡಿ
ಭೂಕಂಪವಾದ್ದನ್ನೂ ಸಾರಿ ಹೇಳಿದವು (ಖಡೇ ಖಡೇ).

ಗುಡುಗು ಸಿಡಿಲುಗಳ ಮಧ್ಯಂಕದಿಂಡ,
ಶಿವನ ಹಣೆಗಣ್ಣಿನಿಂದ ವೀರಭದ್ರ ದೇವನು ಹುಟ್ಟಿಬಂದು
'ಎಲೈ ಜನಕಾ, ನನ್ನನ್ನು ಏನು ಕಾರಣದಿಂದ ಹುಟ್ಟಿಸಿದಿ ನಿನಗಾವ ವಿಪತ್ತು
ಬಂದಿರುವದು' ಎನ್ನಲು
ಆಗ ಪರಮೇಶ್ವರನು 'ದಕ್ಷಬ್ರಹ್ಮನ ಯಜ್ಞದಲ್ಲಿ ದಾಕ್ಷಾಯಣಿಯು ನೀಗಿದಳು
ನೀನೀಗಲೇ ಹೋಗಿ ಅವನ ತಲೆಯನ್ನು ಚೆಂಡಾಡಿ ಬಾ ಅಂತ್ಹೇಳಿದನು.
(ಖಡೇ ಖಡೇ)
ಧಿಗಿಲ್ ಭುಗಿಲ್ಲಾದ ವೀರಭದ್ರನು
'ಭಲಲಲಲಲಾ' ಎಂದು ಕೂಗಿ
ಸೈನಿಕರನ್ನು ಹುಟ್ಟಿಸಿದನು. ಅವರು ಯಾರ್‍ಯಾರೆಂತೆಂದೊಡೆ,
ಕಾಪಾಲಿಕರುದ್ರ, ಅಗ್ರರುದ್ರ, ವಜ್ರದೇಹಿರುದ್ರ, ವಿಮರ್ದನ ರುದ್ರ, ಪ್ರಭಾತಿ
ರುದ್ರ, ಶಕ್ತಿರುದ್ರ,
ಉದ್ದರುದ್ರ, ಅಗ್ನಿರುದ್ರ, (ಖಡೇ ಖಡೇ) ಪದ್ಮಾಂತಕರುದ್ರ, ಕೃತಕ ಕಾಲರುದ್ರ,
ಅಭೀತರುದ್ರ, ಊರ್ಧ್ವಕೇಳಿರುದ್ರ, ಬಲರುದ್ರ, ಬಡಬಾನಲರುದ್ರ, ಪ್ರಲಯಾಂತಕ
ರುದ್ರ, ನರರುದ್ರ, ಕಾಮಾರೂಪರುದ್ರ, ವಿದ್ಯಾಧರರುದ್ರ, ಭೂತಪಾಲರುದ್ರ,
ಪಾತಾಳೇಶರುದ್ರ, ಮುಂತಾದ ನೂರು ರುದ್ರರೊಂದಿಗೆ ಕೂಡಿ, ದಕ್ಷಬ್ರಹ್ಮನ
ಯಜ್ಞವನ್ನು ನುಚ್ಚು ನೂರು ಪಾಲು ಮಾಡಿದನು.
ದೇವಾನು ದೇವತೆಗಳೆಲ್ಲ ಕಾಡುಪಾಲಾದರು. ಮೋರೆ ಮರೆ ಮಾಡಿಕೊಂಡಿದ್ದ
ದಕ್ಷ ಬ್ರಹ್ಮನನ್ನು ವೀರಾಧಿವೀರಭದ್ರರು ಖಡ್ಗದಿಂದ ಚೂರುಚೂರು ಮಾಡಲು,
ಆತನ ಮಡದಿ ಪ್ರಸೂತಿಯು ಕಂಬನಿ ಹರಿಸುತ್ತ,
ಗಂಡನ ರುಂಡವಿಲ್ಲದ ದೇಹದೆದುರು ರೋದಿಸಿದಳು.
ಆಹಹಹಾ ರುದ್ರಾ, ಶ್ರೀ ವೀರಭದ್ರಾ,
ಎದೆ ಎದೆ ಬಡಿದು ಕೊಳ್ಳುತ್ತಲಿದ್ದ ಮುತ್ತೈದೆಯ ಕಣ್ಣೀರು ಒರಿಸಿದನು.

ದಯಾಮಯನಾದ ವೀರ ಭದ್ರನು ಹೆಣ್ಣಿನ ರೋದನವಂ ಕೇಳಿ,
ಆಕೆಯ ಬಳಿಸಾರಿ, ಕಣ್ಣೀರನ್ನೊರೆಸಲು,
ಆಗ ಪ್ರಸೂತಿ ಹೇಳುತ್ತಾಳೆ, ಅರೇ! ವೀರಾಧಿವೀರಾ, ಜಗದೇಕವೀರ, ವಿಶ್ವ
ನಾಥಾ ಕೇಳು ಕೇಳು,
ಅನಾಥೆಯ ಗೋಳು ನೋಡುರುದ್ರಾ, ಕುಂಕಮವಿಲ್ಲದ ಹಣೆಯು ಸ್ಮಶಾನವು ರುದ್ರಾ,
ಗಂಡನಿಲ್ಲದ ಹೆಂಡತಿಯು ಇದ್ದೂ ಸತ್ತಂತೆ. ಈ ಎಲ್ಲ ಸಂಪತ್ತು ಶವಕ್ಕೆ
ಶೃಂಗಾರದಂತೆ ಪ್ರಭುವೇ,
ದೀನದಯಾಳು ನಿನ್ನಿಂದಲೇ ನನಗೆ ದಾರಿ
ಎಂದು ಪಾದದ ಮೇಲೆ ಹೊರಳಾಡಲು, ವೀರಭದ್ರದೇವರ ಆವೇಶವಿಳಿದು
'ಹಾ ಕೇಳು ಕೇಳು, ತಂದೆಯಾದ ಪರಮೇಶ್ವರನನ್ನು ಮನದಲ್ಲೇ ಕ್ಷಣ ಕಾಲ ನೆನೆ'
ಅಂದ್ಹೇಳಿದನು.
ನಂತರ ವೀರಭದ್ರನು ಆ ದಕ್ಷ ಬ್ರಹ್ಮನ ದೇಹವನ್ನು ಕರುಣಾದೃಷ್ಟಿಯಿಂದ ನೋಡಿ
'ಇವನ ರುಂಡವು ಅಗ್ನಿಯಲ್ಲಿ ಸಿಡಿದು ಸುಟ್ಟು ಹೋಗಿದೆ! ಟಗರಿನ ಚೆಂಡನ್ನು
ನೋಡಿ ಇವಳ ಗಂಡನು ಬದುಕಲಿ, ಇಲ್ಲಿ ಸತ್ತು ಬಿದ್ದ ಪ್ರಾಣಿಯು ಬದುಕಲಿ'
ಹೀಗೆಂದು ವಿಚಾರಿಸಿ
ಹಾಗೇ ಮಾಡಿ ಪ್ರಾಣದಾನ ಮಾಡಿದನು.
ಆಗ ದಕ್ಷ ಬ್ರಹ್ಮನಿಗೆ ಟಗರಿನ ತಲೆ ಬಂದು ಪ್ರಾಣ ಕೂಡಿತು.
(ಖಡೇ ಖಡೇ) ಆಗ ಆವನು ಕೈಮುಗಿದು 'ಅಯ್ಯಾ, ವೀರಭದ್ರ ಪ್ರಭೂ,
ನನ್ನ ಅಹಂಕಾರವ ಮೆಟ್ಟಿದಿ ಪ್ರಭುವೇ,
ನಿನ್ನುಪಕಾರವನ್ನು ಮರೆಯೆ' ಎಂದು ಪತ್ನೀ ಸಮೇತನಾಗಿ ಪಾದಕ್ಕೆರಗಿ
ಪರಮೇಶ್ವರನನ್ನೂ ವೀರಭದ್ರ ದೇವರನ್ನೂ ಸ್ತುತಿಸಿದನಯ್ಯ ರುದ್ರಾ
ಶ್ರೀ ವೀರಭದ್ರಾ (ಖಡೇ ಖಡೇ) (ಕಮಲಾ ಹೆಮ್ಮಿಗೆ, ೨೦೦೦, ೫)

## ಗುಗ್ಗುಳವಾಡುತ್ತಾ ಬಂದ :

ಆಹಹಹಾ ರುದ್ರಾ ಪರಮವೀರಸಾರ,
ಪರಶಿವನ ಮೋಹದ ಕುಮಾರಾ... ಶರಭಾವತಾರ...
ಭದ್ರಕಾಳಿವರ, ಅರಿಗಳಭಯಂಕರ ಬಹು ಪರಾಕ್.

ಅಹಹಹಾ ರುದ್ರಾ ಶ್ರವಣ ಕೀರ್ತನಂಸ್ವರೂಪಾದ
ಸೇವನಂ ಅರ್ಚನಂ ವಂದನಂ, ದಾತಂ, ಸಖ್ಯಂ, ಆತ್ಮ ನಿವೇದನಂ, ಶ್ರಮಾ,
ಕೀರ್ತನೆ, ವಂದನೆ, ಅರ್ಚನೆ, ದಾಸತು, ಸಖತ್ವ, ಆತ್ಮಾರ್ಪಣೆ
ಈ ಪ್ರಕಾರ ನವವಿಧ ಭಕ್ತಿಯಾಗಿದೆ. ಈ ಪಾವಟಿಗೆಯನ್ನು ಒಂದೊಂದಾಗಿ
ಏರಬೇಕು. ದೇವರ ಧ್ಯಾನ ಕಿವಿಕಟ್ಟನ್ನ ಕೇಳಿಸಿ, ಆತನನ್ನು ಮನ್ನಿಸಿ
ದಾಸಾನುದಾಸನಾಗಿಯೂ ಆಳಾಗಿಯೂ ಮಾಡಿರುವುದೇ ಭಕ್ತಿಯಲಕ್ಷಂ,
ದೃಢ ವಿಶ್ವಾಸಂ ಪರಮಂ ಮಂತ್ರಂ ಸಂತೋಷಂ ಪರಮಂ ಧನಂ, ವೈರಾಗ್ಯಂ
ಪರಮಂ ಭಾಗ್ಯಂ, ನಿರ್ದ್ವಂದ್ವಂ ಪರಮಂ ಪದಂ.
ಹೇ ದೇವಾ ! ವಿಶ್ವಾಸವೆಂದರೆ ದೇವರಲ್ಲಿ ಪರಮ ನಂಬಿಕೆ, ಇದೇ ಶ್ರೇಷ್ಟ
ಮಂತ್ರ.
ಸಂತೋಷವೇ ಉತ್ತಮಧನ, ಕ್ಷಣಾಭಂಗುರ ಮೋಹಕ್ಕೆ ಆಶೆ ಮಾಡದಿರುವದೇ
ವೈರಾಗ್ಯ. ದ್ವಂದ್ವಾತೀತನಾಗಿರುವುದು, ದೇವ - ಮನುಷ್ಯರಲ್ಲಿ ಸಮಾನವಾಗಿ
ನಡೆದುಕೊಳ್ಳುವುದೇ ಉತ್ತಮ ನಡೆ ನೋಡಾ ಕಪಿಲಸಿದ್ಧ ಮಲ್ಲಿ ಕಾರ್ಜುನಾ.
ಅಹಹಹಾ ರುದ್ರಾ, ಹುಟ್ಟಿದನು ಶಿವನ ಉರಿನೇತ್ರದಿಂದ,
ಕಟ್ಟಿದನು ವೀರ ಕಂಕಣವಾ,
ಇಟ್ಟನು ಲಲಾಟದಲ್ಲಿ ತ್ರಿಪುಂಡ್ರ ಭಸ್ಮವಾ,
ಇಟ್ಟನು ಕೆನ್ನೆಯಲ್ಲಿ ಜುಂಬು, ಉಟ್ಟನೋ ಕಾಶಿದಟ್ಟಿಯಾ...
ಮೆಟ್ಟಿದನು ನವರತ್ನ ದಾವಿಗೆಯ. ದಿಟ್ಟನು ಅಹುದಹುದೋ
ಬಿಟ್ಟನೋ ಪಾಡಿ ಕುಶರ್ಮಗಳ, ಕೊಟ್ಟನು ಭಕ್ತರಿಗೆ ವರವಾ...
ಕುಟ್ಟಿದನು ದಕ್ಷನ ತಲೆಯಾ...
ಅಹಹಹಾ ರುದ್ರಾ ಅಲ್ಲಿಂದ ಬಂದರೋ ಶ್ರೀ ವೀರಭದ್ರ ದೇವರು
ಈ ಸದ್ಭಕ್ತರ ಮನೆಗೆ, ಸದ್ಭಕ್ತರ ಮನೆಯಲ್ಲಿ
ನಮ್ಮ ಚೆನ್ನವೀರ ದೇವರು ಆಸನವಂ ಗ್ರಹಿಸಿ,
ನೆರವೇರಿಸಿಕೊಡುವನೋ ತನ್ನ ಗುಗ್ಗುಳದ ಕಾರ್ಯವ.
ನವಬ್ರಾಹ್ಮಣರು ಮೇಲಾಗಿ ಮೆರೆಯುವ ದಕ್ಷಬ್ರಹ್ಮನ ಶಿರವನ್ನು ಹರಿದ
ಭದ್ರಕಳಿಯಂರ ರಮಣಾ, ಕರುಣ ಕೃಪಾಲಾ ಖಡೇ ಖಡೇ....

## ಕದಂಬ ದಮನ :

ಭಳಿರೇ ಅಹಹಹಾಹ ರುದ್ರಾ,
ನಮ್ಮ ಶ್ರೀ ವೀರಭದ್ರ ದೇವರ ಪ್ರತಾಪವೆಂತೆಂದೊಡೆ,
ಉಟ್ಟಿರ್ದ ಕಾಶಿ, ಬಿದಿರುಗತ್ತಿ, ಕುಡಗಸಗತ್ತಿ, ಅದಿರುಗತ್ತಿ,
ಅಹಹಹಾ ರುದ್ರಾ ಬಿಲ್ಲು ಬಾಣ ಹೊತ್ತು ಗುಡುಗಾಡಿಸಿ
ಗಣಂಗಳೊಡನೆ ಬರುತ್ತ, ನಾಟ್ಯವಾಡುತ್ತಿರಲು,
ಶ್ರೀ ವೀರಭದ್ರನಂ ಕಂಡು ಕದಂಬ ರಕ್ಕಸನು ಮದೋನ್ಮತ್ತನಾಗಿ
ಮುನ್ನೂರು ಮುಖಗಳಿಂದ, ಕಿಡಿಕಿಡಿ ಕಾರುತ್ತ,
ವಕ್ಷಸ್ಥಳಕ್ಕೆ ಹಾಯ್ದಾಕ್ಷಣವೆ,
ಶ್ರೀ ವೀರಭದ್ರ ದೇವರು ಇದನ್ನು ಉಪಶಾಂತಿ ಮಾಡಿಕೊಂಡು,
ಇದೇನಾಶ್ಚರ್ಯವೆಂದು ಬೆರಗುವಟ್ಟ,
ಕದಂಬರಕ್ಸನು ಆರ್ಭಟಿಸುತ್ತ, ನಮ್ಮ ಶ್ರೀ ವೀರಭದ್ರ ದೇವರ ಹಲಗೆ ಮೇಲೆ
ಬೀಳಲು, ಬಿದ್ದಲ್ಲಿ ಒಂದೊಂದು ಕೆಂಡಗಳು ಸುರಿದಿರಲು
ಕಿಡಿಕಿಡಿಯಾಗಿ, ಭುಗಿಲ್ಲೆನ್ನುತ್ತ, ಕದಂಬರಕ್ಸನ ಮುನ್ನೂರು ಮುಖಗಳನ್ನು
ಕರಗಸದ ತನ್ನ ಕತ್ತಿಯಿಂದ ಕರಕರನೆ ಕೊಯ್ದು,
ಅಂಥಪ್ಪ ಮುಖಗಳು, ನಮ್ಮ ಶ್ರೀ ವೀರಭದ್ರ ದೇವರ ಪಾದಗಳ ಮೇಲೆ ಬಿದ್ದು,

'ಹೇ ದೇವಾ ಶ್ರೀ ವೀರಭದ್ರ,
ಎನ್ನ ಶಿರಗಳನ್ನು ಪಾವನ ಮಾಡಬೇಕೆಂದು' ಬೇಡಿಕೊಳ್ಳುತ್ತಿರಲು
ಆಗ ಅವನ್ನು ಸರಗಳನ್ನಾಗಿ ಪೋಣಿಸಿ, ತನ್ನ ಕಾಲಲ್ಲಿ ಕಟ್ಟಿ,
ನಾಟ್ಯವನ್ನಾಡುತ್ತ ಕೈಲಾಸಕ್ಕೆ ತೆರಳಿದನಯ್ಯಾ ರುದ್ರಾ....

## ಹರಮುನಿದರೂ ಗುರು ಕಾಯ್ವ :

ಅಹಹಹಾ ವೀರಾ, ಅಹಹಹಾ ಶರಭ,
ಒಂದಾನೊಂದು ದಿವಸ, ನಮ್ಮ ಪರಮೇಶ್ವರನು
ಕೈಲಾಸದಲ್ಲಿ ಸಭೆಯಂ ನೆಡದಿರಲು
ನಾರದ ಮುನಿಯು ಬಂದನು.
ಆಗ ಅಲ್ಲೇ ಇದ್ದ ಪಾರ್ವತಾದೇವಿಯು ' ಎಲೈ ನಾರದನೇ ಶಿವನಿಗೆ ನಮಸ್ಕರಿಸಿ,
ಎನಗೆ ಕೈ ಮುಗಿಯದ ಕಾರಣವೇನು?' ಎನ್ನಲು,
ಆತನು ಕೈ ಮುಗಿದು ತಪ್ಪಿಗೆ ಕ್ಷಮೆಯಂ ಕೋರಲು,

ಪಾರ್ವತಿ ದೇವಿ ಕೇಳಿದಳು : '' ಎಲೈ ನಾರದನೇ, ನನ್ನ ವಚನವೊಂದನ್ನು ನಡೆಸಿ ಕೊಡುವೆಯಾ?'

'ಏನದು ತಾಯಿ?'

'ಎಲೈ ನಾರದ ಋಷಿಯೇ

ಹರಮುನಿದರೂ ಗುರು ಕಾಯ್ವ'ನೆಂಬ ವಚನವಂ ಸ್ಥಿರಪಡಿಸಿ ಬಾ'

ಅದೇ ಪ್ರಕಾರ ನಾರದನು,

ಭೂಲೋಕದತ್ತ ನಡೆದನು. ಅಹಹಹಾ ರುದ್ರಾ, ಶ್ರೀ ವೀರಭದ್ರಾ !

ಇತ್ತ ಶ್ರೀರಾಮಚಂದ್ರನು ಸೀತಾದೇವಿಯನ್ನು ಗೆದ್ದ ಸಂತೋಷವನ್ನು

ಆಚರಿಸುತ್ತಿದ್ದನು.

ಬೇಡಿದ್ದನ್ನು ನೀಡುತ್ತಿದ್ದನು (ಖಡೇ ಖಡೇ)

ಆವಾಗ್ಗೆ, ಅವನ ಪರಮಭಕ್ತನಾದ ಮಾರುತಿಯು

ಅಯೋಧ್ಯೆಯತ್ತ ಧಾವಿಸಿದ್ದನು.

ಮಾರ್ಗ ಮಧ್ಯದಲ್ಲಿ ನಾರದ ಮುನಿಯ ಭೆಟ್ಟಿಯಾಯಿತು.

ಆಗ ನಾರದ ಮಹರ್ಷಿಯು

'ಎಲೈ ಮಾರುತಿಯೇ ನನ್ನದೊಂದು ವಚನವಂ ಪಾಲಿಸುವೆಯಾ?' ಎನ್ನಲು

ಮಾರುತಿಯು ಒಪ್ಪಿದನು.

ಅಹಹಹಾ ರುದ್ರಾ, ಶ್ರೀ ವೀರಭದ್ರಾ,

ಆಗ ನಾರದನು ' ಎಲಲೆ ಮಾರುತೀ, ನೀನು ರಾಮಚಂದ್ರ ಪ್ರಭುವಿನಲ್ಲಿ

ಅಷ್ಟಲಿಂಗಾನಂದ ಭಕ್ತಿ

ಹಾಗೂ ಮೋಕ್ಷ ಮಾರ್ಗ ಕೇಳಿಕೊಳ್ಳು' ಎಂದನು (ಖಡೇ ಖಡೇ).

ಆಗ ಮಾರುತಿಯು ತೀವ್ರವಾಗಿ ಹಾರುತ್ತಾ

ಅಯೋಧ್ಯೆ ತಲುಪಿದನು.

ತನ್ನ ಆರಾಧ್ಯ ದೇವರಿಗೆ ಪೊಡಮಡಲು, ಶ್ರೀರಾಮಚಂದ್ರನ ಮುಖವು ಅರಳಿ ಪ್ರಸನ್ನವಾಯಿತು.

'ಎಲೈ ಭಕ್ತಾ ಮಿತ್ರಾ! ನಿನಗೇನು ನೀಡಲಿ?' ಎಂದನು.

ಆಂಜನೇಯ ಸ್ವಾಮಿಯು ಕೈ ಮುಗಿದು' ಎಲೈ ದೇವಾ! ನನಗೆ ಮುತ್ತು ರತ್ನ

ಬೇಡ, ರಾಜ್ಯ ಕೋಶ ನಾನೊಲ್ಲೆ. ಅಷ್ಟಾನಂದ ಮುಕ್ತಿಯಂ ಕೊಡಿರಿ' ಎಂದನು.

ರಾಮಚಂದ್ರನು'ನನ್ನಿಂದದು ಸಾಧ್ಯವಿಲ್ಲ,

ಮಾರುತೀ ಗುರುಗಳಾದ ವಸಿಷ್ಠರಲ್ಲಿಗೆ

ಧಾವಿಸಿದ ಮಾರುತಿಯ ಬೇಡಿಕೆ ಕೇಳಿ, ಅವರು ನಸುನಕ್ಕರು.
'ಎಲೈ ಪ್ರಾಣದೇವನೇ, ಪಂಪಾವನ ಹೇಮಕೂಟಕ್ಕೆ ಹೋಗಿ,
ತುಂಗಭದ್ರೆಯಲ್ಲಿ ಮಿಂದು, ನಾರುಮಡಿಯುಟ್ಟು,
ಶ್ರೀ ರುದ್ರನಂ ಕುರಿತು ಘೋರ ತಪವಂಗೈ' ಎನ್ನಲು,
ಮಾರುತಿಯು ಅವರಿಗೆ ನಮಸ್ಕರಿಸಿ, ಹೇಮಕೂಟಕ್ಕೆ ಹೋಗಿ,
ಕಠೋರ ತಪಸ್ಸಿಗೆ ತೊಡಗಿದನಯ್ಯಾ ಖಡೇ ಖಡೇ.
ರುದ್ರದೇವನು ಮೆಚ್ಚಿ ಸಾಕಾರಗೊಂಡು
'ಎಲೈ ಮಾರುತಿ ನಿನ್ನ ತಪಸ್ಸಿಗೇನು ಕಾರಣ' ಎಂದು ಬೆಸಗೊಳ್ಳಲು
ಶ್ರೀ ಮಾರುತಿ ಹೀಗೆಂದನಯ್ಯಾ ರುದ್ರಾ :
'ಗುರು ಶ್ರೇಷ್ಠನೇ, ಎನಗೆ ಇಷ್ಟಾನಂದ ಮುಕ್ತಿಯಂ ದಯಪಾಲಿಸು'
ಆಗ ಶ್ರೀ ರುದ್ರದೇವನು ಪ್ರಸನ್ನ ಭಾವಮಂ ತಾಳಿ,
ಮಾರುತಿಯ ಕರದಲ್ಲಿ ಇಷ್ಟಲಿಂಗವನ್ನು ಇರಿಸಿ,
'ಎಲೈ ಮಾರುತಿಯೇ, ಇದನ್ನು ತ್ರಿಕಾಲದಲ್ಲಿಯೂ ಪೂಜಿಸುತ್ತಾ ಹೋಗು' ಎಂದನು.
ಅಂದಿನಿಂದ ಮಾರುತಿಯ ರುದ್ರದೇವರ ಪರಮ ಶಿಷ್ಯನಾದನು.
ಅಹಹಹಾ ರುದ್ರಾ, ಒಂದಾನೊಂದು ದಿವಸ,
ಗೌತಮ ಋಷಿಯ ಆಶ್ರಮದಲ್ಲಿ
ಶಿವಯೋಗಿಯೋರ್ವನು ಇಷ್ಟಲಿಂಗವಂ ಕಳೆದುಕೊಂಡು, ಗಂಡುಗತ್ತರಿಯ ಮೇಲೆ
ಬಿದ್ದು ಆತ್ಮಹತ್ಯವಂ ಮಾಡಿಕೊಳ್ಳುವ ಯತ್ನದಲ್ಲಿರುವಾಗ್ಗೆ
ಅಹಹಹಾ ರುದ್ರಾ, ಶ್ರೀ ವೀರಭದ್ರಾ... ಶಿವನು ಸಾಕಾರಗೊಂಡು, ಅವನಿಗೆ
ಇಷ್ಟಲಿಂಗವಂ ದಯಪಾಲಿಸಿ
ಸರ್ವರ ಮನಸ್ಸಂತೋಷ ಪಡಿಸಿದನು.
ಹರ್ಷಿತನಾದ ಮಾರುತಿಯು ಭಜನೆ
ಸಂಕೀರ್ತನೆ ನಡೆಸಿದ್ದನ್ನು ಕಂಡು ಪರಮೇಶ್ವರನು ಸಂತಸಭರಿತನಾದನು.

'ಎಲೈ ಮಾರುತೀ, ನೀನೇ ನನ್ನನ್ನು ಕೈಲಾಸಕ್ಕೆ ಕಳಿಸಿ ಬಾ' ಎಂದನು.
ವಾಯುಪುತ್ರನ ಆನಂದಕ್ಕೆಲ್ಲಿ ಪಾರ?
ಅಹಹಹಾ ರುದ್ರಾ, ಶ್ರೀ ವೀರಭದ್ರಾ... ಅವನು ಒಂದು ಭುಜದಲ್ಲಿ ಶಿವನನ್ನೂ,
ಮತ್ತೊಂದು ಭುಜದಲ್ಲಿ ಪಾರ್ವತಿಯನ್ನೂ ಕುಳ್ಳಿರಿಸಿಕೊಂಡು
ಆಕಾಶದಲ್ಲಿ ಹಾರುತ್ತ ಹೊರಟನು.
ಮಾರ್ಗ ಮಧ್ಯದಲ್ಲಿ ಅವನಿಗೆ ಲಿಂಗಪೂಜೆಯಾಗಬೇಕೆಂಬ ನೆನಪಾಯಿತು.
ಅನಿವಾರ್ಯವಾಗಿ ಶಿವಪಾರ್ವತಿಯರನ್ನು ಕೆಳಗಿರಿಸಿ

'ಹೇ ಪರಶಿವಮೂರ್ತಿಯೇ! ನನ್ನ ಲಿಂಗಪೂಜಾ ಸಮಯವಿದು.
ಹಾಗಾಗಿ, ಪಂಪಾ ಸರೋವರಕ್ಕೆ ಹೋಗಿ ಅದನ್ನು ತೀರಿಸಿಕೊಂಡು ಬರುತ್ತೇನೆ.
ಅಪ್ಪಣೆ ಕೊಡು' ಎಂದು ಬಿನ್ನೈಸಿದನು.
ಆಗ ಶಿವನು 'ಎಲೈ ಭಕ್ತ ಮಾರುತೀ, ಲಿಂಗಮೂರ್ತಿ ನಾನೇ ಇಲ್ಲವೆ?
ನಿನಗೇಕೆ ಪ್ರತ್ಯೇಕ ಪೂಜೆ ಬೇಕು?'' ಎನ್ನಲು,
ಮಾರುತಿಯು 'ಗುರುವಿನ ಆಜ್ಞಾನುಸಾರ ಪೂಜೆಯಾಗಬೇಕಲ್ಲವೆ' ಎಂದನು.
ಆಗ ಶಿವಶಿವಾ, ವೀರಭದ್ರಾ, ಶಿವನು 'ಗುರುವಿನ ಗುರು' ತಾನಾದ್ದರಿಂದ
ಬೇರೆ ಪೂಜೆ ಏಕೆನ್ನಲು,
ಮಾರುತಿಯು ಒಪ್ಪಲಿಲ್ಲಾ.
'ಗುರುವಾಜ್ಞೆ ಮೀರಲಾರೆ' ಎಂದು
ಪಂಪಾ ಸರೋವರವಿದ್ದ ಹೇಮಕೂಟಕ್ಕೆ ತೆರಳಿದನು.
ಇದರಿಂದ ಕುಪಿತನಾದ ಶಿವನು,
ಅವನರಿವಿಗೆ ಬಾರದಂತೆ ಇಷ್ಟಲಿಂಗವನ್ನು ಕಸಿದುಕೊಂಡನು.
ಅಹಹಹಾ ರುದ್ರಾ, ಶ್ರೀ ವೀರಭದ್ರಾ,
ಇತ್ತ ಮಾರುತಿಯು ತುಂಗಭದ್ರೆಯೊಳು ಮಿಂದು,
ನಾರುಮಡಿಯಂ ತೊಟ್ಟು, ತನ್ನ ಲಿಂಗದ ಕರಡಿಗೆಯಂ ತೆರೆದು ನೋಡಿದರೆ,
ಅಲ್ಲಿ ಲಿಂಗವಿಲ್ಲ!
ಅಹಹಹಾ ರುದ್ರಾ, ಶ್ರೀ ವೀರಭದ್ರಾ,
ಶಿವಲಿಂಗವು, ತುಂಗಭದ್ರಾ ನದಿಯಲ್ಲಿ ಬಿದ್ದು ಹೋಯ್ತೆಂದು ಅಕಟಾ
ಆ ಮಾರುತಿಯು ಕಳವಳದಿಂದ ತುಂಗಭದ್ರೆಯನ್ನೇ ಜಾಲಾಡಿಬಿಟ್ಟನಯ್ಯಾ
ರುದ್ರಾ (ಖಡೇ ಖಡೇ).
ಕಡೆಗೆ, ಬ್ರಹಾಂಡನದಲ್ಲೇನಾದರೂ ಸಿಡಿದು ಹೋಗಿದ್ದೀತೆಂದು
ಬ್ರಹ್ಮಾಂಡವನ್ನೇ ಸೀಳಿ ನೋಡಿದನಯ್ಯಾ ವೀರಭದ್ರಾ!
ಬೆಟ್ಟಗುಡ್ಡಗಳನ್ನೆಲ್ಲಾ ಬಗೆದು ಕಾತರದಿಂದ ಹುಡುಕಿದರೆ
ಅಲ್ಲಿಯೂ ದೊರಕಲಿಲ್ಲವಯ್ಯಾ ರುದ್ರಾ,
ಅಹಹಹಾ ರುದ್ರಾ, ಶ್ರೀ ವೀರಭದ್ರಾ,
ಆಗ ಅವನು ಬೇರೆ ದಾರಿ ಕಾಣದೆ ವೀರಭದ್ರ ದೇವರನ್ನೇ ಕುರಿತು ಘೋರ
ತಪವಂ ಮಾಡಲು,
ಶ್ರೀ ದೇವನು ಪ್ರತ್ಯಕ್ಷನಾದನು.
'ಎಲೈ ಮಾರುತಿಯೇ ತಪಸ್ಸಿಗೆ ಕಾರಣವೇನು' ಎಂದನು. ಆಗ ಮಾರುತಿಯು ಎನ್ನ
ಅಳಲನ್ನು ಹೇಳಿಕೊಳ್ಳಲು ಮನಕರಗಿ, 'ಭಕ್ತ ಶ್ರೇಷ್ಠಾ, ಹೆದರಬೇಡ.

ಮುಕ್ಕಾಲು ಮೂರು ಗಳಿಗೆಯೊಳಗಾಗಿ ನಿನ್ನ ಇಷ್ಟಲಿಂಗ, ತಂದುಕೊಡುತ್ತೇನೆ'ನ್ನಲು
ಮಾರುತಿ ನಿಟ್ಟುಸಿರುಬಿಟ್ಟನಯ್ಯಾ ರುದ್ರಾ.
ಅದೇ ಪ್ರಕಾರ ವೀರಭದ್ರ ದೇವನು.
ತನ್ನ ಅಗ್ನಿನೇತ್ರವನ್ನು ಕರೆದು ಇಷ್ಟಲಿಂಗವನ್ನು ತರಲು ತಿಳಿಸಿದನು.
ಶ್ರೀ ರುದ್ರನು ಬಿಟ್ಟ ನೇತ್ರ, ತ್ರಿಲೋಕಗಳನ್ನೂ ನಡುಗಿಸಿದುವು.
ಅಹಹಹಾ ರುದ್ರಾ, ಶ್ರೀ ವೀರಭದ್ರಾ,
ಆಗ ಪಾರ್ವತಿಯು ಶಂಕರನಿಗೆ ' ಎಲೈಶಂಭೂ,
ಮಾರುತಿಯ ಇಷ್ಟಲಿಂಗಕ್ಕಾಗಿ, ಎಷ್ಟೆಲ್ಲಾ ಅನಾಹುತ !
ಕೊಟ್ಟುಬಿಡು ಅದನ್ನು' ಎಂದಳು.
ಅಹಹಹಾ ರುದ್ರಾ, ಶ್ರೀ ವೀರಭದ್ರಾ,
ಪರಶಿವನು ತನ್ನ ಮೂರನೇ ಕಣ್ಣನ್ನು,
ವೀರಭದ್ರದೇವನ ಅಗ್ನಿನೇತ್ರದೊಂದಿಗೆ ಯುದ್ಧಕ್ಕಾಗಿ ಕಳಿಸಿದನಯ್ಯಾ ರುದ್ರಾ.
ಆಗ ಪಾರ್ವತಿಯು' ಹೇ ಶಂಭೂ !
ತ್ರಿಲೋಕವೂ ಸುಡುತ್ತಿದೆಯಲ್ಲಾ, ನಮಗೆಲ್ಲಿಯದು ಉಳಿವು'
ಎಂದು ಆತಂಕದಿಂದ ಹೇಳಿದಳು. (ಖಡೇ ಖಡೇ)
ಆಗ ಶಂಕರನು ಪ್ರತ್ಯಕ್ಷನಾಗಿ
'ಎಲೈ ಮಾರುತೀ, ನಿನ್ನ ಇಷ್ಟಲಿಂಗವೆಲ್ಲಿ ತೋರು' ಎಂದನು.
ಮಾರುತಿಯು 'ಹೇ ಶಂಭೋ ! ನನ್ನ ಗುರುವಿನ ಆಣತಿಯ ವಿನಾ ಅದು
ಅಸಾಧ್ಯ' ವೆನ್ನಲು.
ಶ್ರೀ ವೀರಭದ್ರನು 'ಎಲೈಭಕ್ತ ಶ್ರೇಷ್ಠಾ ! ದೇವರಿಗೆ ರೋಮಕ್ಕೊಂದರಂತೆ
ಕೋಟಿಲಿಂಗ ಮಾಡಿ ತೋರಿಸು' ಎಂದನಯ್ಯಾ ರುದ್ರಾ. (ಖಡೇ ಖಡೇ)
ಮಾರುತಿಯು ಅಂತೆಯೇ ಕೋಟಿಲಿಂಗ ತೋರಿದನು.
ಆ ಹೊತ್ತಿನಿಂದ 'ಹರಮುನಿದರೂ ಗುರುಕಾಯ್ವ' ಎಂಬ ವಚನ
ಸ್ಥಿರವಾಯಿತು. ಖಡೇ ಖಡೇ...

## ವಿಷ್ಣು ಲಕ್ಷ್ಮಿಯರಿಗೆ ಅಭಯ :

ಅಹಹಹಾ ವೀರ, ಅಹಹಹಾ ರುದ್ರಾ,
ದಕ್ಷನ ಯಜ್ಞಕ್ಕೆ ಶ್ರೀ ವೀರಭದ್ರನು ಬಂದನು.
'ಶಿವನಿಗೆ ಹವಿಸ್ಸು ಕೊಡು ' ಎಂದು
ದಕ್ಷನನ್ನು ಆಗ್ರಹಿಸಲು ಆತ 'ನಾನಾಗಳೆ ವಿಷ್ಣುವಿಗೆ ಕೊಟ್ಟೆ' ಎಂದ
ಆತ, ಸಿಟ್ಟಿಗೆದ್ದ.

ವೀರಭದ್ರ ದೇವರು ವಿಷ್ಣುವಿನ ಎದೆಗೆ ಗದಾಪ್ರಹಾರ ಮಾಡಿದರು.
ಆಹಹಹಾ ರುದ್ರಾ! ಲಕ್ಷ್ಮಿಯ ತಲೆಗೂದಲನ್ನು ಕತ್ತರಿಸಿದ.

ವಿಷ್ಣು ಹೆದರಿ, ಜಿಂಕೆಯ ರೂಪಿನಿಂದ ಓಡಿದನಯ್ಯಾ ರುದ್ರಾ.
ಬಾಣಗಳನ್ನು ಬಿಟ್ಟಾಗ ನೊಂದು,
ನಿಜರೂಪುದಾಳಿ ವೀರಭದ್ರರಿಗೆ ಬಂದು ಶರಣಾದನಯ್ಯಾ ರುದ್ರಾ.
'ಶಿವನೇ ಶ್ರೇಷ್ಠ' ಎಂದು ಒಪ್ಪಿಕೊಂಡನು.
ಒಂದು ಸಾವಿರ ಕಮಲ ಪುಷ್ಪಗಳನ್ನು ನಿತ್ಯವೂ ಸಲ್ಲಿಸುವ ನೇಮವಿಟ್ಟನು.
ಆಹಹಹಾ ರುದ್ರಾ, ಭಕ್ತಿಯ ಪಾರವಶ್ಯವನ್ನೇನೆನ್ನಲಿ?
ಒಂದು ದಿವಸ, ಒಂದು ಕಮಲ ಪುಷ್ಪ ಕಡಿಮೆಯಾಗಲು
ತನ್ನ ನೇತ್ರವನ್ನೇ ಕಿತ್ತು, ಎಡೆಮಾಡಿದನಯ್ಯಾ ರುದ್ರಾ.
ಕರುಣಾಸಾಗರ ವೀರಭದ್ರ ದೇವರು,
ಅದನ್ನು ಪರತು ಕೊಟ್ಟು, ಲಕ್ಷ್ಮಿಗೆ ಮುಡಿಯನ್ನಿತ್ತು ಅಭಯವಿತ್ತರಯ್ಯಾ,
ಭದ್ರಕಾಳಿಯ ರಮಣಾ, ಖಡೇ ಖಡೇ(ಕಮಲಾ ಹೆಮ್ಮಿಗೆ, ೨೦೦೦, ೯೫).

## ನರಸಿಂಹನ ಸೊಕ್ಕು ಮುರಿದದ್ದು :

ಆಹಹಹಾ ರುದ್ರಾ, ಶ್ರೀ ವೀರಭದ್ರಾ,
ಪ್ರತಿ ಅವತಾರವೂ ದುಷ್ಟ ನಿಗ್ರಹಕ್ಕಾಗಿ ಎಂಬ ಸೊಕ್ಕು
ತಲೆಗೇರಿತು ಮಹಾವಿಷ್ಣುವಿಗೆ.
ಆಹಹಹಾ ವೀರಾ, ಆದಿಬ್ರಹ್ಮನ ಮಗ, ಕಶ್ಯಪ ಬ್ರಹ್ಮ.
ಅವನ ಪುತ್ರನೇ ಹಿರಣ್ಯಕಶ್ಯಪು.
ಅವನು ವರ ಪಡೆದು ಅಜೇಯನಾಗಿ, ಸಕಲರನ್ನೂ ಕಾಡಹತ್ತಿದನಯ್ಯಾ.
ದೇವತೆಗಳೆಲ್ಲರೂ ವಿಷ್ಣುವಿನ ಮೊರೆಹೊಕ್ಕರು.
ಆಹಹಹಾ ರುದ್ರಾ, ಆಹಹಹಾ ಶರಭಾ,
ವಿಷ್ಣುವು ನರಸಿಂಹನ ಅವತಾರವೆತ್ತಿದ್ದು, ಗೊತ್ತಿರುವ ಕಥೆಯೇ.
ಅವನು ಹೊಚ್ಚಲ ಮೇಲೆ ಕೂತು ಹಿರಣ್ಯಕಶ್ಯಪುವನ್ನು ತೊಡೆಯ ಮೇಲೆ
ಹಾಕಿಕೊಂಡು, ಹೊಟ್ಟೆ ಬಗಿದು ನೆತ್ತರನ್ನು ಮೊಗೆಮೊಗೆದು ಕುಡಿದನಯ್ಯಾ ರುದ್ರಾ.
ಆ ಬಿಸಿನೆತ್ತರ ಅಮಲು ಹರಿಯ ತಲೆಗೇರಿ ಅಸ್ತವ್ಯಸ್ತನಾದ.
ಎಲ್ಲರ ಬೆನ್ನು ಹತ್ತಿ ಸಂಹಾರ ಮಾಡತೊಡಗಿದ,
ದೇವಾನುದೇವತೆಗಳು ವಿಷ್ಣುವಿನಿಂದ ಬೆದರಿಕೆಗೊಳಗಾಗಿ
ಶಿವನಲ್ಲಿಗೆ ಓಡಿ ಬಂದರು.

ನರಸಿಹನನ್ನು ವಧಿಸಲು ಯಾರಿಂದಲೂ ಸಾಧ್ಯವಾಗಲಿಲ್ಲ ವಯ್ಯಾ ರುದ್ರಾ!
ಆಗ ವೀರಭದ್ರನಿಗೆ ಆಣತಿಯಿತ್ತು
ನರಸಿಂಹನ ಸೊಕ್ಕು ಮುರಿಯಲು ಕಳಿಸಲಾಯಿತಯ್ಯಾ ರುದ್ರಾ,
ಅಂಥಪ್ಪ ಶೂರ ವೀರಭದ್ರನು ಶರಭನ ಅವತಾರ ತಾಳಿ,
ಚುಂಚು, ಕಾಲುಗುರು, ಕೋರೆದಾಡೆಗಳಿಂದ ನರಸಿಂಹನನ್ನು ಗಟ್ಟಿಯಾಗಿ ಹಿಡಿದು,
ರಕ್ತ ಕಾರಿಸತೊಡಗಿದನಯ್ಯ ರುದ್ರಾ,
ಬಳಿಕ ವಿಷ್ಣುವು ತನ್ನ ತಗಲು ಶಿವನಿಗಿರಲೆಂದೂ,
ಮುಖವು ವೀರಭದ್ರನಿಗಿರಲೆಂದೂ ಬೇಡಿ, ಅನುಗ್ರಹಿಸಿರೆಂದ.
ಶಿವನು ಮೆಚ್ಚಿ ಹಾಗೆಯೇ ಮಾಡಿದನಯ್ಯಾ ರುದ್ರಾ
ಶ್ರೀ ವೀರಭದ್ರಾ ಖಡೇ ಖಡೇ (ಕಮಲಾ ಹೆಮ್ಮಿಗೆ, ೨೦೦೦, ೯೬).

## ಸರಸ್ವತಿಯ ನಾಸಿಕಕ್ಕೆ ಘಾಸಿ ಮಾಡಿದ್ದು :

ಅಹಹಹಾ ರುದ್ರಾ ಶ್ರೀ ವೀರಭದ್ರಾ,
ಬ್ರಹ್ಮದೇವರ ಪತ್ನಿ ಸರಸ್ವತಿ ಜ್ಞಾನದೇವತೆ.
ಶಾರದೆಯೆಂದು ಖ್ಯಾತೆ, ವಿದ್ವನ್ಮಣಿ ಆಕೆ. ಆದರೆ
ಎಂಥವರಿಗೂ ಒಂದಾನೊಂದು ಸರ್ತಿ, ಗರ್ವ ಬರುವುದೇ!
ಅಹಹಹಾ ರುದ್ರಾ ಭೂಮಿಯನ್ನು ಕಾಗದವಾಗಿ ಮಾಡಿ,
ಸುರತರುಗಳನ್ನು ಲೆಕ್ಕಣಿಕೆಯನ್ನಾಗಿಸಿ
ಸಪ್ತ ಸಮುದ್ರಗಳನ್ನು ಮಸಿಯನ್ನಾಗಿಸಿ ಬ್ರಹ್ಮಕಲ್ಪ ಕೋಟಿ ಯುಗ
ವರ್ಷಗಳಲ್ಲಿಯೂ ಬರೆದು
ಏನು ಸಾಧಿಸಿದ್ದಾಳೀಕೆ ಎಂದು ಶರಣರು ನಕ್ಕರಯ್ಯಾ ರುದ್ರಾ,
ಶಿವನ ಶತ್ರುವಾದ ದಕ್ಷನನ್ನು ಪುರಸ್ಕರಿಸಿದ ಸರಸ್ವತೀ ದೇವಿಯು
ವಿಶೇಷವಾಗಿ ಅಲಂಕರಿಸಿಕೊಂಡು
ಯಜ್ಞಕ್ಕೆ ಹೋಗಿದ್ದಳಯ್ಯ ರುದ್ರಾ,
ಅವಳ ಗರ್ವ ಇಳಿಸಲಿಕ್ಕಾಗಿ,
ನಮ್ಮ ವೀರಭದ್ರ ದೇವರು ಮೂಗನ್ನೇ ಕೊಯ್ದು ಬಿಟ್ಟರಯ್ಯಾ.
ಬ್ರಹ್ಮನ ತಲೆಯನ್ನೇ ತರಿದರಯ್ಯಾ.
ರುದ್ರಾ, ಶ್ರೀ ವೀರಭದ್ರಾ,
ಮಹಾ ಶಿವಾಚಾರ ಸಂಪನ್ನರಾದ ಭದ್ರಕಾಳಿಯ ರಮಣ
ವೀರಭದ್ರ ದೇವರ ಪವಾಡ ಅಂದಿಗುಂಟು ಇಂದಿಗಿಲ್ಲ ಎಂಬ ದುರಾಚಾರಿಗಳಿಗೆ
ನೀನೇ ಗಂಡಾ ಖಡೇ ಖಡೇ.

## ವೀಭದ್ರನ ಉಗ್ರರೂಪ ಹಾಗೂ ಕರುಣಾಮಯಿ :

ಅಹಾ। ವೀರಾ । ಅಹಾ ಶರಭಾ । ಕಡುಕೋಪದಿಂದ ಜಡೆಗಳನ್ನು ಕತ್ತಿಟ್ಟು । ಜಾಡಿಸಿ ಜಾಡಿಸಿ । ಆರ್ಭಟಿಸಿ । ಕೊಡು ಕೊಡು ವರವೆನೆಂದೆನ್ನುತ್ತ । ಬಟ್ಟ ಬಯಲೊಳು ಥಟ್ಟನೆ ಎದ್ದು ಬಂದನಯ್ಯಾ । ಆ ನಮ್ಮ ವೀರಶೈವ ಅವತಾರಿಕ ಪುಂಡ । ತನಗೆ ಒಲಿಯದೆ ಮೀರಿ ನಡೆದವರ ಗಂಡ । ಭಯ ಭಕ್ತಿಯಿಂದ ನಡೆದವರಿಗೆ ಕಣ್ಣಲ್ಲಿ ಕಂಡ । ವಿದಂಡ । ತ್ರಿಕಾಶಕ್ಕೆ ಪುಂಡ। ಬಪ್ಪರೆ ಸೃಷ್ಟಿಯೊಳ್ । ಅಧಿಕವಾದ ರಟ್ಟಿಹಳ್ಳಿ । ಕಟ್ಟುಗ್ರದ ಕಲಿ ವೀರಭದ್ರಾ । ಅಭಿನವರುದ್ರಾ । ಕಡೆ... ಕಡೆ.

## ನೀನೇ ಗಂಡ ! :

ಬಾರಯ್ಯಾ ರುದ್ರಾ... ಕಲಿವೀರ ಶ್ರೀ ವೀರಭದ್ರಾ !
ನಿನ್ನ ಮುತ್ತಿನಗದ್ದಿಗೆಯನ್ನು ಬಿಟ್ಟು ಎದ್ದು ಬಾರಪ್ಪಾ ರುದ್ರಾ...

ಹಸ್ತದಲ್ಲಿ ಹಲಗಿ, ಕರದಲ್ಲಿ ಖಡ್ಗ,
ಅರಿದಲೆ ರುಂಡಮಾಲೆ, ನೇತ್ರದಲ್ಲಿ ಉಜ್ವಲಜ್ವಾಲೆ,
ಶಿಖರದಲ್ಲಿ ಶಿವಲಿಂಗ, ಮುಖದಲ್ಲಿ ವೇದಶೃತಿ,
ಪಾದದಲ್ಲಿ ಗಂಟೆಯ ಸರಪಳಿಯ ಧರಿಸಿದ ಮ741 ಹಾಶೂರ ಬಾರಾ....

ಅಹಹಹಾ ರುದ್ರಾ
ನಿನ್ನ ಅಬ್ಬರವ ಕಂಡು
ಈರೇಳು ಲೋಕಗಳ ಭಕ್ತರು ಸರ್ಪಗಳನ್ನು ರಾಶಿ ಹಾಕಿ,
ಗರ್ಭವನ್ನೇ ಚರಚರ ಸೀಳಿ,
ಪಿಂಡವನ್ನೇ ಕಡೆಗಿರಿಸಿ,
ಗರ್ಭಕ್ಕೆ ಕಲ್ಲು ಮುಳ್ಳನ್ನು ತುಂಬಿ,
ನೂರಾರು ತಿಂಗಳ ಪರ್ಯಂತ ಅವು ಪಿಂಡವಾಗಿರಲು
ಕಾಳಿಂಗರುದ್ರಾ ಅವನ್ನು ಪೂಜಿಸುತ್ತ
ಅಹಹಹಾ ರುದ್ರಾ ನಿನ್ನ ಪವಾಡವು ಅಂದಿಗುಂಟು ಇಂದಿಗಿಲ್ಲವೆನ್ನುವ
ಶತದ್ರೋಹಿಗಳಿಗೆ ನೀನೇ ಗಂಡ ಖಡೇ ಖಡೇ ಖಡೇ!

## ವೀರಭದ್ರ ಮಹಿಮೆ :

ಭಳಿರೇ, ಅಹಹಹಾ ರುದ್ರಾ,
ಶ್ರೀಮತ್ಪರಮ ಪಾವನ ಚರಿತ್ರ ಚಾರುತರ ಸಮ್ಮೋಹನಾಂಗ ಮದನಮೋಹನ
ಮಾಯಾಕೋಲಾಹಲ,
ನಿತ್ಯ ನಿರಂಜನ ನಿಗಮ ಗೋಚರ ಶ್ರೀ ಸಚ್ಚಿದಾನಂದ ನಿತ್ಯ ಪರಿಪೂರ್ಣ ಹೃದಯ,
ಜಗದ್ವಿಸ್ತಾರವನು ಸಂಭಾವಿಪ, ಪರಶಿವ ಸ್ವರೂಪ,
ಶ್ರೀಶ್ರೀ ಚಿತ್ತರಕಲ್ ದುರ್ಗದ ಇಮ್ಮಡಿ ಮುರುಘರಾಜೇಂದ್ರ ಮಹಾಸ್ವಾಮಿ
ಬಹುಪರಾಕ್.

ಅಹಹಹಾ ರುದ್ರಾ,
ಗಂಡುಗಲಿಯಾದ ನಮ್ಮ ಶ್ರೀ ವೀರಭದ್ರ ದೇವರು ಹುಟ್ಟಿದ ರೀತಿ ಅದೆಂತೆಂದೊಡೆ,
ಹುಟ್ಟಿದಾಗಲೇ ಹೂವಿನ ಕಾಸಿ, ಮಂಜುಳ ಕಾಸಿ, ಬ್ರಹ್ಮ ಕಾಸಿ, ವಿಷ್ಣು ಕಾಸಿ,
ರುದ್ರಕಾಸಿ, ಮೆಟ್ಟಿನ ಹೊನ್ನಾವಿಗೆ, ಎರಡು ಸಾವಿರ ಭುಜ, ಕೆಕ್ಕರಿಸಿದ ಕಣ್ಣು,
ಜುಂಜು ಚಂಡೆ,
ಇಂತಪ್ಪ ನಮ್ಮ ಶ್ರೀ ವೀರಭದ್ರ ದೇವರು ಹೋಮ ಕುಂಡದ ಬಳಿಗೆ ಹೇಗೆ
ಹೋಗುತ್ತಾರೆಂದರೆ,

ಅಹಹಹಾ ರುದ್ರಾ, ಭಳಿರೇ,
ಬ್ರಹ್ಮ ಕವಾಟದಲ್ಲಿ ತ್ರಿಪುಂಡ್ರ ಭಸ್ಮ, ಕೈಯಲ್ಲಿ ಬಿಲ್ಲು ಬಾಣ, ಸಣ್ಣಗತ್ತಿ,
ಅದುರುಗತ್ತಿ, ಬಿದುರುಗತ್ತಿ, ಕರಗಸಗತ್ತಿ, ಕಿರುಚೂರಿ, ಬೆನಕಿನಹಗ್ಗ, ವಜ್ರಮುಷ್ಠಿ,
ಶಂಕ ಕೊಡಲಿ, ಶೂಲಬಾಣ, ಉರಿ ಬಾಣ,
ಇಂತಿಷ್ಟು ಆಯುಧ ಹಿಡಿದು ಚಂದ್ರನನ್ನು ಕೆಡಹಿ,
ಬಪ್ಪು ಭಲೇ ಎಂದು ಕೂಗುತ್ತ ಬಂದು ವಿಘ್ನೇಶ್ವರನ ಹೊಟ್ಟೆಗೆ ಹೊಡೆದು,
ಎಡಪಾದದಲ್ಲಿ ತಿಕ್ಕಿ, ಸೂರ್ಯ ದೇವನ ಹಲ್ಲುಗಳನ್ನು ಮುರಿದು,
ಸರಸ್ವತಿಯ ಮೂಗನ್ನೇ ಕೊಯ್ದು,
ಅನಂತಕೋಟಿ ಗುಡುಗು ಮಿಂಚು ಸಿಡಿಲು ಭೋರ್ಗರೆದಂತೆ
ಆಗ ಒಡೆದು ಮೂಡಿದರು,
ನಮ್ಮ ವೀರಭದ್ರ ದೇವರು, ಕೈಲಾಸ ದ್ವಾರಮಂ ಪೊಕ್ಕು ಪೋಗುವಾಗ
ಶಿವ ದೇವರು ಕಂಡು, ನಸುನಕ್ಕು 'ಭಲೇ ಬಾಪುರೇ'
ಎಂದು ರತ್ನ ಸಿಂಹಾಸನದ ಗದ್ದಿಗೆಯ ಮೇಲೆ, ಕುಳ್ಳಿರಿಸಿಕೊಂಡು

ಪುಷ್ಪದ ಮಳೆ ಕರೆದರು 'ವಿಪರೀತನಾಯಕ, ನಿನ್ನ
ಮಹಾಮಹಿಮೆಯ ಪವಾಡವನ್ನು
ಅವತ್ತಿಗೆ ಉಂಟು ಇವತ್ತಿಗಿಲ್ಲವೆಂದು ಹೇಳುವ ಶಿವದ್ರೋಹಿಗಳಿಗೆ
ನೀನೇ ಗಂಡಾ ಖಡೇ ಖಡೇ ಎಂದರು (ಕಮಲಾ ಹೆಮ್ಮಿಗೆ, ೨೦೦೦, ೨೭).

## ಶ್ರೀ ವೀರಭದ್ರನಿಂದ ಹಿರಣ್ಯ ರಾಕ್ಷಸನ ಸಂಹಾರ :

ಅಹಹಾ ವೀರ। ಅಹಹಹಾ ರುದ್ರ। ಪೂರ್ವದಲ್ಲಿ ಹಿರಣ್ಯಾಕ್ಷನೆಂಬ ದೈತ್ಯನ ಮಗ। ದುರಳ ಹಿರಣ್ಯ ರಾಕ್ಷಸನು। ಈ ಹದಿನಾಲ್ಕು ಲೋಕಗಳನ್ನು। ಚಾಪೆಯ ಸುರುಳಿ ಮಾಡಿ ಸುತ್ತಿಕೊಂಡು। ಬಗಲಲ್ಲಿ ಕದ್ದೊಯ್ಯುತ್ತಿರಲು। ಅದನ್ನು ನಾರದ ಮಹರ್ಷಿಗಳು ಕಂಡು। ಜಗದ್ರಕ್ಷಕನಾದ ನಮ್ಮ ಶಿವನಿಗೆ ತಿಳಿಸಿದರು। ಆಗ ನಮ್ಮ ಶಿವನು। ತನ್ನ ಪುತ್ರನಾದ ಶ್ರೀ ವೀರಭದ್ರ ದೇವರನ್ನು ಕರೆಯಲು। ನಮ್ಮ ಗಂಡುಗಲಿ ಶ್ರೀ ವೀರಭದ್ರ ದೇವರು ಹ್ಯಾಗೆ ಬರುತ್ತಿದ್ದರೆಂದರೆ। ಕೈಯಲ್ಲಿ ಖಡ್ಗ। ಪಿನಾಕ ಬಾಣ ಹಲಗಿ ಜಡಿವ ಜಲ್ಲಿಯಂ ನೆಲಕ್ಕೆಳವುತ್ತ। ಸೊಂಟ ಬಾಕು ರಣ ಚೂರಿಯಂ ಪಿಡಿದು ವ್ಯಾಸನ ತೋಳು। ಈಶ್ವರನ ಮುಖ। ನಂದಿಧ್ವಜ। ನಾಗಾಭರಣನ್ನಿಟ್ಟು। ಕಾಶೀ ಪೀತಾಂಬರವನ್ನುಟ್ಟು। ಕಟ್ಟುಗ್ರದ ಕರವೀರಭದ್ರ ತುದಿಯ ಉಂಗಷ್ಟುವನ್ನೇ ಕುಣಿಸುತ್ತ। ಎಡದ ಪಾಂಚಾಲವು ಅದುರುತ್ತ। ಗಂಡಭೇರುಂಡನಂತೆ। ನಮ್ಮ ಪರಶಿವನ ಎದುರಿಗೆ ಬಂದು ನಿಂತು। ಎಲೈ ಪರಶಿವಮೂರ್ತಿಯೇ ಎನ್ನ ಕರೆಸಿದ ಕಾರಣವೇನೆಂದು ಕೇಳಲು। ನಮ್ಮ ಶಿವನು। ದುರಳನಾದ ಹಿರಣ್ಯ ರಾಕ್ಷಸನ। ಸಂಹಾರ ಮಾಡಿ ಬರಲು। ಅಪ್ಪಣೆಕೊಟ್ಟನು। ಆಗ ಶ್ರೀ ವೀರಭದ್ರ ದೇವರು। ಜಗವೆಲ್ಲಾ ನಡುಗುವಂತೆ। ಘುಡಿಘುಡಿಸುತ್ತಾ। ಆರ್ಭಟಿಸುತ್ತಾ। ಕಿಡಿಯನ್ನುಗುಳುತ್ತ ಜಡೆಗಳನ್ನು ಕೆದರಿಕೊಂಡು। ಆ ದುರುಳ ದೈತನ ಎದುರಿಗೆ ಬಂದು ನಿಲ್ಲಲು। ಆ ದೈತ್ಯನ ಆಕಾರವು। ನಿಡಿದು। ನಲವತ್ತು ಯೋಜನೆ। ಅವನ ಅಡ್ಡಗಲ। ಮೂವತ್ತು ಯೋಜನೆ। ಅವನ ಕೋರೆಮೀಸೆ। ಕೊರೆದವಡೆ। ಇಪ್ಪತ್ತು ಯೋಜನೆ ಇರುವದನ್ನು ನಮ್ಮ ಶ್ರೀ ವೀರಭದ್ರನು ಕಂಡು ಆರ್ಭಟಿಸುತ್ತ ಲಲಾಟದಲ್ಲಿ ವಿಭೂತಿಯ ಧರಿಸಿ ಕರ್ಪೂರದ ಬಿಲೆಯಲಿಯನ್ನುಗುಲತ್ತಾ। ನಿಂತಿರಲು ಆವಾಗ್ಗೆ ಆ ದೈತ್ಯನು ನೀನು ಯಾರು ಎಂದು ಕೇಳಲು ಆಗ ನಾನು ಶಂಕರನ ಪುತ್ರನಾದ ವೀರಭದ್ರನೆಂದು ಹೇಳಲು। ಆಗ ನಮ್ಮ ಶ್ರೀ ವೀರಭದ್ರ ದೇವರು। ಆ ದೈತ್ಯನ ಮಾತಿನಿಂದ ಸಿಟ್ಟಾಗಿ। ಘುಡಿ ಘುಡಿಸಿ ಆರ್ಭಟಿಸಿ। ಕಿಡಿಯನ್ನುಗುಳುತ್ತಾ। ಎಲೋ ನೀನು ಯುಗದಲ್ಲಿ ಹತ್ತು ಹತ್ತು ಸಾರಿ ಸತ್ತು ಹುಟ್ಟುವ ನರಹರಿಯೇ। ಎಂದು ಗರ್ಜಿಸಲು। ಆ ರಭಸಕ್ಕೆ ಈ ರೇಳು ಭವನ ಹದಿನಾಲ್ಕು ಲೋಕಗಳು। ಗದಗದನೆ ನಡುಗಿದವು। ನಕ್ಷತ್ರಗಳುದುರಿದವು। ಆಗ ನಮ್ಮ ವೀರಭದ್ರ ದೇವರು। ಆ ದೈತ್ಯನ ಎದೆಯಂ ಮುರಿದು ಗರಗಸ ಕತ್ತಿಯಿಂದ। ಕೊರೆಯುವ ಸಮಯದಲ್ಲಿ। ಆ ದೈತ್ಯನು ತಪ್ಪಾಯಿತೆಂದು ಪಾದಕ್ಕೆರಗಿ ಬಿನ್ನಹ ಮಾಡಲು। ಆಗ ನಮ್ಮ ಶ್ರೀವೀರಭದ್ರ ದೇವರು। ಎಲೋ ದೈತ್ಯನೆ ಅಡ್ಡ ಬಿದ್ದ ಕಾರವೇನೆಂದು ಕೇಳಲು ಆ ದೈತ್ಯನು ಹೇ ಸ್ವಾಮಿ ನಿಮ್ಮ ಕರದಲ್ಲಿ ಎನ್ನ ಕಾತಯುವ ಧರಿಸಬೇಕೆಂದು ಪಾದಕ್ಕೆರಗಲು। ಆಗ ಶ್ರೀ ವೀರಭದ್ರದೇವರು ಕಠೋರ ಧ್ವನಿಯಿಂದ ಕೂಗುತ್ತಾ। ಅವನ ಶಿರಗಳನ್ನು ಹರಿದು। ಅವನ ನರಗಳನ್ನು ತೆಗೆದು ಸರವನ್ನು ಪೋಣಿಸಿ ಮೈಮರೆದು ರಜತಾದ್ರಿ। ಪರ್ವತದಲ್ಲಿ

ನಾಟ್ಯವಾಡುತ್ತಿರಲು। ಆಗ ನಮ್ಮ ಶಿವನು ಕಂಡು। ಎತ್ತಿಕೊಂಡು ಮುದ್ದಾಡಿ। ರತ್ನ ಕೆತ್ತಿಸಿದ ಸಿಂಹಾಸನದ ಮೇಲೆ। ಮುಹೂರ್ತ ಮಾಡಿಸಿ। ಪರ್ವತಾದೇವಿ ಮುತ್ತಿನ ಸಾಸುವೆಯನ್ನಿಟ್ಟು। ರತ್ನದ ನಿವಾಳಿ ಮಾಡಿದಳು। ಆಗ ಪ್ರಮಥಗಣಂಗಗಳು। ನರಸಿಂಹನ ಶಿರವ। ಕೀರ್ತಿ ಮುಖವೆಂದು। ಕಾಸೆಯಕಟ್ಟಿ। ನಾಟ್ಯವನ್ನಾಡೆಂದು ಪೇಳಲು। ಆಗ ನಮ್ಮ ಶ್ರೀ ವೀರಭದ್ರನು ನಾಟ್ಯವಾಡುತ್ತ ಬರುತ್ತಿದ್ದ ಗಂಡುಗಲಿ ಶ್ರೀ ವೀರಭದ್ರ ಕಡೆಕಡೆ...(ಶಂಕ್ರಪ್ಪ ಬಸಪ್ಪ ತೊಂಡಿಹಾಳ, ೨೦೦೦, ೫೩).

## ದಕ್ಷಬ್ರಹ್ಮನ ಯಜ್ಞದ ವಚನ :

ಆಹಾರುದ್ರ ಉಲ್ಲಾಸಭರಿತರಾಗಿ। ಕುಳಿತಿರುವ ಎಲ್ಲಾ ಜನಂಗಳು ಸಲ್ಲಲಿತವಾಗಿ। ಗುಲ್ಲು ಮಾಡದೆ। ನೀವು। ಕೇಳಿರಿ। ಹೇ ದೇವಾ ಹರನೊಡನೆ ವಿರೋಧವತಾಳಿ। ದುರುಳನಾದ। ದಕ್ಷಬ್ರಹ್ಮನು। ತನ್ನ ಶಿರವ ಕಳೆದುಕೊಂಡ। ಪರಿಯನ್ನು ಪೇಳ್ವೆನು। ಸದ್ಭಕ್ತಶರಣ। ಜನಂಗಳೆಲ್ಲರು। ನೀವು ಕೇಳಿರಿ। ಹೇ ದೇವಾ। ನಮ್ಮ ಪರಶಿವಮೂರ್ತಿಯಂ । ಕುರಿತು ದಕ್ಷಬ್ರಹ್ಮನು। ಮೆಚ್ಚಿ ಬಂದು। ಅವನ ತಪಸ್ಸಿಗೆ। ನಮ್ಮ ಪರಶಿವ ಮೂರ್ತಿಯು। ಮೆಚ್ಚಿ ಬಂದು। ದಕ್ಷಂಗೆ ದಕ್ಷಾವತಿಯೆಂಬ ಪಟ್ಟವಂಗಟ್ಟಿ ಹರಿಸರು ಬ್ರಹ್ಮಾದಿಗಳಂ। ವಾಲೈಸಿ ಕೊಳ್ಳುವಂತೆ। ಮಾಡಿ। ಈಶ್ವರನು ತನ್ನ ಕೈಲಾಸಕ್ಕೆ ಪೋಗಲು ಇತ್ತಲಾ ದಕ್ಷಂಗೆ। ಐಶ್ಚರ್ಯ ಹೆಚ್ಚಿ ತನಗಾರು ಸರಿಯಿಲ್ಲವೆಂದು। ಈಶ್ವರನು। ತನ್ನ। ಅಳಿಯನೆಂಬ ಅಹಂಕಾರದಿಂದ। ಶಿವನ ಒಡ್ಡೋಲಗವಂ। ನೋಡ ಬೇಕೆಂಬ। ಕುತೂಹಲದಿಂದ। ಹರಿಸುರ ಬ್ರಹ್ಮಾದಿಗಳಂ। ಹಿಂದಿಟ್ಟುಕೊಂಡು। ಕೈಲಾಸಕ್ಕೆ ಬಂದ ದಕ್ಷ। ಆಗ ಪರಶಿವನು। ಓಲಗದಲ್ಲಿ ಹರಿಸುರ ಬ್ರಹ್ಮಾದಿಗಳ। ಸಮೂಹದಿಂದ ಬರುವ ದಕ್ಷ ಬ್ರಹ್ಮನನ್ನು ಕಂಡು। ಚಂಡಕೀರ್ತಿಗಳು। ಪರಾಕು ಕೊಡುತ್ತಾರೆ। ಅದೆಂತೆಂದಡೆ। ಹರಿ ಬಂದ। ಹಂಸವಾಹನ ಬಂದ। ಕರಿಗಮನ ರಕ್ತ ಬಂದ ಬಹು ಪರಾಕು। ಆಗ ವರುಣನು ಬಂದ। ವೀತಿಗೋತ್ರಣ ಬಂದ। ನೂತನದ ಯಮ ಬಂದ ಬಹು ಪರಾಕು। ಯಕ್ಷರಾಕ್ಷಸ ಬಂದ। ಪ್ರತ್ಯಕ್ಷದ ನಕ್ಷ ಬಂದ। ರಕ್ಷಿಸಯ್ಯಾ। ನಮ್ಮ ಮೋಕ್ಷನಾಥ। ಶ್ರೀ ಗುರುವೇ ಬಹು ಪರಾಕು। ಹೀಗೆಂದು ಚಂಡ ಕೀರ್ತಿಗಳು ಪರಾಕು ಕೊಡಲು। ಆಗ ದಕ್ಷ ಬ್ರಹ್ಮನು। ಬಂದು ನಮ್ಮ ಪರಶಿವಮೂರ್ತಿಯ ಎದುರಿಗೆ ಬಂದು ನಿಲ್ಲಲು ಆಗ ನಮ್ಮ ಪರಶಿವಮೂರ್ತಿಯು। ಈ ದಕ್ಷನ ಗರ್ವವನ್ನು ತಿಳಿದು। ಮುಂದಕ್ಕೆ ಕರಿಯದೆ। ಮರಿಯಾದೆಯನ್ನು ಕೊಡದೆ। ಮಾತನಾಡದೆ ಸುಮ್ಮನಿರಲು। ಆಗ ದಕ್ಷಬ್ರಹ್ಮನು। ಪರಶಿವನು। ತನ್ನನ್ನು ಕರೆದು ಮರ್ಯಾದೆಯನ್ನು ಕೊಡಲಿಲ್ಲವೆಂದು। ಘುಡಿಘುಡಿಸಿ। ಆರ್ಭಟಿಸಿ ಕಿಡಿಕಿಡಿಯನ್ನುಗುಳುತ್ತ। ಕಿನಿಸಿನಿಂದ। ಮೆನಸಿಜಾರಿಯಾದ। ಶಂಕರಗೆ ಹೇಳುತ್ತಾನೆ। ಎಲೈ ಪರಶಿವಮೂರ್ತಿ। ಶ್ರೇಷ್ಠ ಅಳಿಯನನ್ನು ನೋಡಬೇಕೆಂದು ಅಟ್ಟಹಾಸದಿಂದ। ಸೃಷ್ಟಿಗೀಶನಾದ। ನಿನ್ನಲ್ಲಿಗೆ ನಾನು ಬಂದರೆ। ಕೆಟ್ಟ ಮನುಜರಂತೆ। ಎನ್ನನ್ನು। ತುಚ್ಛ ಮಾಡಿದ। ಮತ್ತೆನ್ನ ಮಾವ ಬಾ ಅತ್ಯಂತ ಹಿರಿಯ ಬಾ। ಕುಳ್ಳಿರೆಂದರೆ ನಿನ್ನ ಮುತ್ತು ಹೋಗುತ್ತಿದ್ದವೆ ಕೊರಳಿಗೆ ಎಲುವಿನ ಮಾಲಿ ಹಾಕಿ। ತಿರಿದುಂಬ ಮುರುಕು ಜಂಗಮಗೆ। ಕರೆದು ಮಗಳು ಕೊಟ್ಟದ್ದು ಕಿರಿದಾಯಿತು। ನನ್ನಯ ಬುದ್ಧಿ ಈ ಸಭೆಯೊಳಗೆ। ಹರಿಯಜಾಸುರರೊಳಗೆನ್ನ। ಹಿರಿದು ಮಾಡದೆ। ಬರಿಗಂಟನ ಮಾಡಿ। ಮರ್ಯಾದೆಯ ಕಳೆದ। ಮಂದಮತಿಹೀನ। ಆ ಮಂಗಲದ। ಗೊರವನಿಗೆ। ಎನ್ನ ಕಂದಮ್ಮನಾದ। ಗೌರಿಯನ್ನು ಕೊಟ್ಟಿದ್ದು। ಚಂದವಾಗಲಿಲ್ಲಾ। ಛೀ। ಛೀ ಇವನಿಗ್ಯಾಕೆ ಇಷ್ಟು ಯೋಚನೆ।

ಭೂಮಿಯೋಳ್ ಯಜ್ಞವಂ ಮಾಡಿ ಶರವಂ ಕೊಂದು। ಶಿವಲೋಕವನ್ನು। ಆಳುವುದಕ್ಕೆ ಇದೇ ಸಮಯವೆಂದು ಯೋಚಿಸಿ। ಹರಿಸುರ ಬ್ರಹ್ಮಾದಿಗಳನ್ನು। ಹಿಂದಿಟ್ಟುಕೊಂಡು। ಹಿಂತಿರುಗಿ। ದಕ್ಷಾವತಿಗೆ ಬಂದ ದಕ್ಷಾ। ಆಗ ದಕ್ಷಬ್ರಹ್ಮನು ಹರಿಸುರ ಬ್ರಹ್ಮಾದಿಗಳನ್ನು। ಹಿಂದಿಟ್ಟುಕೊಂಡು। ಶ್ರೀಹರಿಯ ಬಳಿಗೆ ಬಂದು ಎಲೈ ಶ್ರೀ ಹರಿಯೇ। ಶ್ರೇಷ್ಠ ಅಳಿಯನನ್ನು ನೋಡಬೇಕೆಂದು। ಸೃಷ್ಟಿಗೀಶನ ಬಳಿಗೆ। ನಾನು ಕೈಲಾಸಕ್ಕೆ। ಹೋದರೆ। ಆ ಪರಶಿವನು। ನನ್ನನ್ನು ಕರೆದು। ಮರ್ಯಾದೆಯನ್ನು। ಕೊಡಲಿಲ್ಲವಾದ್ದರಿಂದ। ಶಿವನಂ ಕೊಂದು। ಶಿವಲೋಕವನ್ನಾಳುವದಕ್ಕೆ। ಇದೇ ಸಮಯವೆಂದು। ಯೋಚಿಸಿ ಮನದಲ್ಲಿ ದಿಟ್ಟ ಮಾಡಿಕೊಂಡಿದ್ದೇನೆ। ಆದ್ದರಿಂದ। ಆ ಪರಶಿವನನ್ನು ಕೊಲ್ಲುವುದಕ್ಕೆ। ಮಾರಣ ಹೋಮವನ್ನು। ಈಗಲೇ ರಕ್ಷಿಸಬೇಕೆಂದು। ದೇವಾ ಎಂದು। ಪಾದಕ್ಕೆ ಎರಗಲು। ಆಗ ಶ್ರೀಹರಿಯು ಮನದಲ್ಲಿ ಯೋಚಿಸಿ ನೋಡಿ। ಒಳ್ಳೇದೆಂದು ಹರಿಸುರ ಬ್ರಹ್ಮಾದಿಗಳೊಂದೊಡಗೂಡಿಕೊಂಡು। ಅಗಲ ಹನ್ನೆರಡುಗಾವುದ। ನಿಡಿದು ಮುನ್ನೂರು ಯೋಜನತನಕ। ಯಜ್ಞ ಕುಂಡವಂ ರಚಿಸಿದರು। ಈ ಅಗ್ನಿಕುಂಡದ ಯಜ್ಞಕ್ಕೆ ಬೇಕಾದ। ಅತ್ತಿ। ಆಲ। ಅರಳೆ। ಬಸುರೆ। ಉತ್ತರಾಣೆ। ಮಾವು ಮೊದಲಾದ। ಸೌಧೆಗಳನ್ನು ಹೊತ್ತುತಂದರು ಮತ್ತು ಕ್ಷೀರ। ಘೃತ। ಮಧು। ದಧಿ। ಸಕ್ಕರೆ ಮೊದಲಾದ। ಕುಂಭಗಳನ್ನು ಸಾಲುಗಟ್ಟಿ ತಂದರು। ಇನ್ನು ಯಜ್ಞಕ್ಕೆ ಬೇಕಾದ। ಸಾಮಗ್ರಿಗಳನ್ನು ಒದಗಿಸಿ ತಂದರು। ಆಗ ಶ್ರೀಹರಿಯು। ಯಜ್ಞಕ್ಕೆ ಆಹುತಿಯನ್ನು ಕೊಟ್ಟು। ಅಗ್ನಿಯಿಂದ। ಯಜ್ಞವನ್ನು ಪುಟ ಮಾಡಲು ಉರಿಯು ಧಗಿಲ್। ಭುಗಿಲ್ ಎಂದು। ಆಕಾಶವನ್ನೆಲ್ಲಾ। ಆಚ್ಛಾನಿಸಿಕೊಂಡಿತು। ಆಗ ಶ್ರೀಹರಿಯು। ದಕ್ಷ ಬ್ರಹ್ಮನನ್ನು ಕರೆದು। ಎಲಾ ದಕ್ಷ ಯಜ್ಞಕರ್ತರು ಯಾರು। ದಳಕರ್ತರು ಯಾರು। ನಿಮ್ಮ ಸರ್ವರಿಗೂ ಕರ್ತರು ಯಾರು। ಹೀಗೆಂದು। ವಿಷ್ಣುವು ಕೇಳಲು।ಆ ಮಾತಿಗೆ । ದಕ್ಷಬ್ರಹ್ಮನು। ಸರ್ವರೂ। ನಿಮ್ಮಪ್ಪಣೆಯಂತಿರುವೆವು। ದೇವಾ ಎಂದು ಪಾದಕ್ಕೆರಗಲು। ಆ ಮಾತಿಗೆ। ಶ್ರೀ ಹರಿಯು ಯಜ್ಞಕರ್ತ। ದಕ್ಷ। ದಳಕರ್ತ ಬ್ರಹ್ಮ। ಶೂದ್ರಾದಿಪತಿಯೇ ದೇವೇಂದ್ರ। ನಿಮ್ಮ ಸರ್ವರಿಗೂ ಕರ್ತ ನಾನು। ಹೀಗೆಂದು। ವಿಷ್ಣುವು ಪೇಳಿ। ಎಲ್ಲಾ ದಕ್ಷಾ। ಶಾರದ ಗಣಪತಿ। ಸಕಲ ಸುರಮುನಿಗಳು ಸುರಿಬಂದಿಹರೆ। ನಮ್ಮ ಸಮ್ಮುಖಕ್ಕೀಗಾ ಹೀಗೆಂದು ವಿಷ್ಣುವು ಕೇಳಲು। ಆ ಮಾತಿಗೆ। ದಕ್ಷಬ್ರಹ್ಮನು। ಸರ್ವರೂ ಬಂದಿರುವರು। ದೇವಾ ಎಂದು ಪಾದಕ್ಕೆರಗಲು। ಆ ಮಾತಿಗೆ ಶ್ರೀ ಹರಿಯು ಎಲಾ ದಕ್ಷಾ ಬಾರನು ದಧೀಚಿಯು। ಯುಕ್ತಿಯಲ್ಲಿ ಜಾಣ। ಶಕ್ತಿಯಲ್ಲಿ ಸಮರಂತನಾದ ದಧೀಚಿಯು। ಯುಕ್ತಿಯಲ್ಲಿ ಜಾಣ। ಶಕ್ತಿಯಲ್ಲಿ ಸಮರಂತನಾದ ದಧೀಚಿ ಮುನಿಯು ಬರಲಿಲ್ಲವಲ್ಲ। ಕರೆಸೆನಲು। ಆಗ ದಕ್ಷಬ್ರಹ್ಮನು। ವರದಧೀಚಿಯನ್ನು ಕರೆತರುವದಕ್ಕೆ ಚರರಿಗೆ ಅಪ್ಪಣೆಯ ಮಾಡಲು। ಆಗ ಚರರೋಡಿ ಬಂದು। ಮುನಿಕುಲದೀಪನಾದ। ದಧೀಚಿ ಮಹಾಮುನಿಯೇ। ನಮ್ಮಯ್ಯನಾದ। ದಕ್ಷಬ್ರಹ್ಮನು ಪ್ರೇಮದಿಂದ ಹೋಮಗಳನ್ನು ಮಾಡುತ್ತಾನೆ। ಆ ಯಜ್ಞಕ್ಕೆ ನೀವು ತೆರಳಬೇಕು। ದೇವಾ ಎಂದು। ಪಾದಕ್ಕೆರಗಲು। ಆ ಮಾತಿಗೆ। ಧದೀಚಿಯ। ಎಲೈ ಚರರುಗಳಿರಾ। ನಿಮ್ಮ ಒಡೆಯನಾದ। ದಕ್ಷಬ್ರಹ್ಮನು ಪ್ರೇಮದಿಂದ ಹೋಮವನ್ನು ಮಾಳ್ಪುದು। ಹಾಗಿರಲಿ। ಆ ಯಜ್ಞಕ್ಕೆ ಆರಾರು ಬಂದಿರುವರು। ಮುರಾರಿ ಬಂದಿರುವನೇ ಎಂದು ಕೇಳಲು। ಆ ಮಾತಿಗೆ ಚರರಿಂತೆಂದರು ಪರಶಿವನಾದಿಯಾಗಿ ಸರ್ವರೂ। ಬಂದಿಹರು ದೇವಾ ಎಂದು। ಮಾಜಿ ಪೇಳಿದರು। ಹೋದಚಾರರು। ಆ ಮಾತಿಗೆ ದಧೀಚಿಯು। ಪರಶಿವನ ಪಾದಕಮಲವ ನೋಡಬೇಕೆಂಬ। ಕುತೂಹಲದಿಂದ ತೆರಳಿ ಬಂದನು। ವರೆಯಜ್ಞಶಾಲಿಗೆ। ಬಂದು ಇಂದು ನೋಡಿಬೊಬ್ಬಿರಿದನು। ಪರಶಿವನಿಲ್ಲದಿರಲು। ಎತ್ತ ನೋಡಿದರೂ। ಚಿತ್ತಜಾರಿಯು

ಕಾಣುವದಿಲ್ಲವಲ್ಲ। ಇಂದುಧರನಿಹ ಸುಳುಹು। ಇನಿತಾದರೂ। ಕಾಡುವದಿಲ್ಲವಲ್ಲ। ತೋರಿರೋ। ಮುರಾರಿಯ। ಯಾರಾದರೀಗ। ಈಶ ಬಂದಿಹನೆಂದೆನ್ನ। ಮೋಸದಿಂದ। ಕರತಂದಿರ। ಹೀಗೆಂದು। ದಧೀಚಿಯು ಘರ್ಜಿಸಿ। ಪೇಳುವಷ್ಟರಲ್ಲಿಯೇ। ಆ ಮಾತಿಗೆ। ದಕ್ಷಬ್ರಹ್ಮನು। ಎಲೈ ಮುನಿಕುಲದೀಪನಾದ ದಧೀಚಿ ಮಹಾಮುನಿಯೆ। ನಾನು ನಿನ್ನಿಷ್ಟದಿಂದ ಶ್ರೇಷ್ಠ ಅಳಿಯನ। ನೋಡಬೇಕೆಂದು। ಸೃಷ್ಟಿಗೀಶನ ಬಳಿಗೆ ನಾನು ಕೈಲಾಸಕ್ಕೆ ಹೋದರೆ। ಆ ಪರಶಿವನು ಎನ್ನನ್ನು ಕರೆದು ಮರ‍್ಯಾದೆಯನ್ನು ಕೊಡಲಿಲ್ಲವಾದ್ದರಿಂದ। ಆ ಪರಶಿವನನ್ನು ಕೊಲ್ಲುವದಕ್ಕೆ ಮಾರಣ ಹೋಮವನ್ನಿಟ್ಟಿದ್ದೇನೆ ಆದ್ದರಿಂದ। ಆ ಪರಶಿವನಿಲ್ಲಿರುವದಕ್ಕೆ ಕಾರಣವೇನು। ನಿನ್ನ ಇಷ್ಟವಿದ್ದರೆ ಇರಬಹುದು। ಇಲ್ಲದಿದ್ದರೆ ತೆರಳಬಹುದು ಹೀಗೆಂದು ದಕ್ಷಬ್ರಹ್ಮನು ಘರ್ಜಿಸಿ ಹೇಳಲು। ಆ ಮಾತಿಗೆ। ದಧೀಚಿಯು। ಎಲಾ ದಕ್ಷಾ ನೀನು ಪರಶಿವನ ಬಳಿಗೆ ಹೋದಾಗ। ಆ ಪರಶಿವನು। ನಿನ್ನನ್ನು ಕರೆದು। ಮರ್ಯಾದಿಯನ್ನು ಕೊಡಲಿಲ್ಲವೆ। ಆದ್ದರಿಂದ। ದುರುಳತನದಿಂದ ಆ ಪರಶಿವನಿಗೆ। ಮರಣ ಹೋಮವನ್ನಿಟ್ಟಿದ್ದೀಯ। ಜಡಜಾಕ್ಷ। ಜಡಜೋದ್ಭವ ಬಿಡೋ ಜರಮಾತು ಕೇಳಿ ಕೆಡಬ್ಯಾಡಲಾ ದಕ್ಷಾ। ಹಮ್ಮಿನಿಂದ ಬ್ರಹ್ಮ ತನ್ನ ಶಿರವ ಕಳಕೊಂಡ। ಪರಿಯ ನೀನರಿಯಾ। ಮಲಹರನೊಡನೆ। ವಿರೋಧವ ತಾಳಿ। ಬಲುಮಂದಿ ಕೆಟ್ಟರು। ಇಂದುಧರನಕೂಡೆ। ಕದನ ಸಲ್ಲದು। ದಕ್ಷಾ ಹೀಗೆಂದು ದಧೀಚಿಯು ಪೇಳಿ। ಭಾಳಾಕ್ಷ ಬಾರವೆಜ್ಞವು ಹಾಳಾಗಿ ಹೋಗಲಿ। ಹರಿಸುರ ಬ್ರಹ್ಮಾದಿಗಳ ತಲೆ ಹೋಳು ಹೋಲಾಗಲಿ। ಎಲಾ ದಕ್ಷಾ। ನಿನ್ನ ತಲೆಯು ಇದೇ ಹೋಮಕ್ಕೆ। ಕೋಳು ಹೋಗಲಿ। ಹೀಗೆಂದು ದಧೀಚಿಯು ಶಾಪವಂ ಕೊಟ್ಟು। ತನ್ನ ಆಶ್ರಮಕ್ಕೆ ತೆರಳಿದನು। ಇತ್ತ ಕೈಲಾಸದಲ್ಲಿ। ಮಂದಗಮನಿಯಾದ। ಗೌರಿಯು। ತಂದೆಯ ಹೋಮದ ವಾರ್ತೆಯನ್ನು ನಾರದನ ಮುಖದಿಂದ ತಿಳಿದು। ಮಂದಗಮನಿಯಾದ ಗೌರಿಯು ಇಂದುಧರಿಗೆ ಹೇಳುತ್ತಾಳೆ। ಎಲೈ ಪರಶಿವಮೂರ್ತಿಯೇ। ತಂದೆಯಾದ ದಕ್ಷಬ್ರಹ್ಮನು। ಸುರರುಂದಗೂಡಿ। ಸಧ್ಯದಲ್ಲಿ। ಅಧ್ವರಮಂ ಮಾಳ್ಪನಂತೆ॥ ಆದ್ದರಿಂದ। ನಾನು ಪಿತನಡಿಗೆ ಹೋಗಿ ಅಜ್ಞಾನವಂ ಬಿಡಿಸಿ। ಸುಜ್ಞಾನವ ನೆಲೆಗೊಳಿಸಿ ಬರುವೆನು ತಮ್ಮಪ್ಪಣೆಯಾಗಬೇಕು॥ ದೇವಾ ಎಂದು। ಪಾದಕ್ಕೆರಗಲು॥ ಆ ಮಾತಿಗೆ। ನಮ್ಮ ಪರಶಿವಮೂರ್ತಿಯು॥ ಎಲೈ ಗೌರಿಯೇ। ಗೀರ್ವಾಣರಂ ಕೂಡಿಕೊಂಡು ಗರ್ವದಿಂದಿರುವ ದಕ್ಷನು॥ನೀನುಸುರುವ ಮಾತನ್ನು ಕೇಳಲಾರ॥ ಸರ್ವಥಾ ನಿನಗೆ ಸುಖವಾಗಲಾರದು। ಪೋಗಬ್ಯಾಡವೆಂದು॥ ಹರನು ಪರಿಪರಿಯಿಂದ॥ ಪೇಳಿದಾಗ್ಯೂ। ಕರ್ವಾಣಿಯು ಕೇಳದೆ। ಸರ್ವೇಶನಂ ಒಡಂಬಡಿಸಿ ನಂದಿ ನಾರದ ಸ್ತ್ರೀ ವೃಂದ ಒಂದುಗೂಡಿಕೊಂಡು। ಪುಷ್ಪಕವೇರಿ ದಾಕ್ಷಾಯಿಣಿಯು॥ ದಕ್ಷಬ್ರಹ್ಮನು॥ ನಮ್ಮ ಗೌರಿದೇವಿಯು ಬಂದುದು ನೋಡಿ ಇತ್ತ ಬಂದರೆ ಮುಖವವತ್ತ ತಿರುವುವ । ಅತ್ತ ಬಂದರೆ॥ ಮುಖವನಿತ್ತ ತಿರುವುವ। ಆಗ ನಮ್ಮ ಗೌರಿದೇವಿಯು। ದಕ್ಷಬ್ರಹ್ಮನ ಕೋಪವನ್ನು ಶಾಂತಿಗೊಳಿಸುವುದಕ್ಕಾಗಿ। ಕೆಲವು ನೀತಿಗಳನ್ನು ಹೇಳಿದಳು। ಹೇ ಎನ್ನ ಪಿತನಾದ ದಕ್ಷಬ್ರಹ್ಮನೇ ಕೇಳು। ಪತಿಯಾದ ಪರಶಿವನ ಮೇಲೆ। ದ್ವೇಷವನ್ನು ಬೆಳಿಸಬೇಡ। ವಿಷ್ಣುಬ್ರಹ್ಮರ ಮಾತು ಕೇಳಿ। ಕೆಡಬೇಡಲಾ ದಕ್ಷಾ। ಇಂದು ಆ ಪರಶಿವನ ಮೇಲೆ। ಹಟವಿಟ್ಟು। ಬಲುಮಂದಿ ಕೆಟ್ಟರು ಇಂದುಧರನ ಕೂಡೆ ಕದನ ಸಲ್ಲದು। ದಕ್ಷಾ ಕೆಡಬೇಡ ಪಿತನೇ। ನಿನ್ನ ನಡು ಹಣೆಯ। ಬರಹವನ್ನು। ತೊಡುವವರು ಬರುತ್ತಾರೆ। ಹೀಗೆಂದು ಗೌರಿ ದೇವಿಯು। ನೀತಿಯಂ ಪೇಳಲು। ಆ ಮಾತಿಗೆ। ದಕ್ಷ ಬ್ರಹ್ಮನು। ಉಡುವುದಕ್ಕೆ ಸೀರಿಯಿಲ್ಲದೆ। ನಡುವಿಗೆ ಡಾಬು ಇಲ್ಲದೆ। ಆ ಬೂದಿ ಬಡುಕನಿಗೆ ಪತ್ನಿ ಆಗಿರುವ । ನಿನ್ನ ಬಡಿವಾರದ ಮಾತುಗಳೆಷ್ಟೆ। ಭಂಡ ಗೌರಿ। ನಿನ್ನೊಡೆಯನಾದ ಮೃಡನನ್ನು ಕಡಿದು

ಹಾಕುವೆನೆಂದು। ಜಡಿದು ನುಡಿದನು। ಕಡುದ್ರೋಹಿಯಾದ। ಕಡುಮೂರ್ಖನಾದ। ಈ ದಕ್ಷನ ಮಾತಿಗೆ ಗೌರಿ ದೇವಿಯು। ಶಿವಶಿವಾ ಇಂಥಾ ಶಿವನಿಂದೆಯಂ ಕೇಳಬಹುದೇ। ಹರಹರಾ ಎನುತ। ತನ್ನ ಎರಡು। ಕರದಿಂದ। ಕರ್ನವಂ ಮುಚ್ಚಿಕೊಂಡು। ಈ ಪಾತಕನಾದ ದಕ್ಷಗೆ। ತಾತನೆನ್ನಬಹುದೇ। ಈತಗೆ ನಾನು ಸುತೆಯಲ್ಲ ಎನಗೀತ ಪಿತನಲ್ಲ।ವೆಂದು ಘುಡಿಘುಡಿಸಿ। ಆರ್ಭಟಿಸಿ। ಕಿಡಿಕಿಡಿಯನ್ನುಗುಳುತ್ತ ಅದೇ ಹೋಮದೋಳ್ ಬಿದ್ದು। ಪೊಡವಿಪನಾದ ಪರ್ವತರಾಜನ ಮಡದಿಯಾದ। ಮೇನಕಿಯ ಗರ್ಭದಲ್ಲಿ ಪ್ರವೇಶಿಸಿದಳು। ಆಗ ನಂದೀಶ್ವರರನ್ನು ನಮ್ಮ ಸರಸ್ವತಿ ದೇವಿಯು। ಮಡಿದುದಂ ನೋಡ। ಬಿಡದೆ ದಕ್ಷನು ಹಿಡಿತಂದು। ನಡುಹೋಮದಲ್ಲಿ। ಕೆಡಹುವೆನೆಂದು।ಘರ್ಜಿಸಿ ನುಡಿಯುವಷ್ಟರಲ್ಲಿಯೇ। ಆಗ ನಾರದರು ಮಡಿದುದಕ್ಕೆ। ನಾವು ಗಡಬಡಿಸುವದ್ಯಾತಕೆ। ಈಕೆಯು ಯಾರು। ಆದಿಶಕ್ತಿಯು। ಈಕೆಯ ಮಹಿಮಾತಿಶಯಗಳನ್ನು ವರ್ಣಿಸುವದಕ್ಕೆ। ಆ ಪರಶಿವನಿಗೂ ಕೂಡಾ ಅಸಾಧ್ಯವಾಗಿರುವದು। ಈಕೆಯ ಮಹಿಮೆಯನ್ನು। ಪ್ರಜ್ವಲಿಸುವದಕ್ಕಾಗಿ ಈ ದಕ್ಷ ಸಂಬಂಧವಾದ। ದೇಹವನ್ನು ಬಿಟ್ಟಿರುವಳು। ಅದು ಹಾಗಿರಲಿ। ಈ ದಕ್ಷ ಸಮೇತವಾಗಿ ಮಾರ್ಬಲವನ್ನು। ಸಂಹಾರ ಮಾಡುವುದಕ್ಕೆ। ಆ ಪರಶಿವನ ಅಪ್ಪಣೆಯಿಲ್ಲ ಹೀಗೆಂದು। ನಾರದರು ನಂದೀಶ್ವರಗೆ ಹೇಳಿ ನಂದಿ ನಾರದರು ಸ್ತ್ರೀಯರ ವೃಂದ। ಒಂದುಗೂಡಿಕೊಂಡು। ಕೈಲಾಸಕ್ಕೆ ಬಂದು। ಕೈಲಾಸದಲ್ಲಿ। ನಮ್ಮ ಪರಶಿವನ ಮುಂದೆ। ದಕ್ಷಯಾಗದಲ್ಲಿ। ಗೌರಿದೇವಿಯು ಮಡಿದ ವಾರ್ತೆಯನ್ನು ಹೇಳಲು। ಕೇಳಿದಾಕ್ಷಣಕ್ಕೆ ಶಂಕರನು ಕೂಲಿಲೇ ಎಂದು ಕೂಗಿ। ಅಗ್ನಿನೇತ್ರದಲ್ಲಿ ಕಿಡಿಕಿಡಿಯನ್ನುಗುಳುತ್ತ। ನಡುಹಣೆಯ ಬೆವರ ತೆಗೆದು। ನೆಲಕ್ಕಿಡಲು। ಆಗ ಒಡದು ಮೂಡಿದ ನಮ್ಮ ಕಡುಗಲಿ ವೀರಭದ್ರನು। ಹೇ ದೇವಾ। ನಮ್ಮ ಶ್ರೀ ವೀರಭದ್ರ ದೇವರು। ಹುಟ್ಟಿದಾಗಲೇ ಹೂವ್ವಿನಗಾಸೆ। ರುದ್ರಗಾಸೆ ಕೆಕ್ಕರದ ಮಂಡೆ। ಕೆಮ್ಮಾಸೆ। ಸಹಸ್ರ ಮುಖ। ಎರಡು ಸಾವಿರ ತೋಳು। ಮೂರು ಸಾವಿರ ನಯನ ಈ ರೀತಿಯಾ ಭಯಂಕರದಿಂದ। ಉದ್ಭವಿಸಿದ। ನಮ್ಮ ಶ್ರೀ ವೀರಭದ್ರ ದೇವರನ್ನು ನೋಡಿ ಪರಶಿವಮೂರ್ತಿಯು ಎಡಭುಜದ ಬೆವರನ್ನು ತೆಗೆದು ನೆಲಕ್ಕಿಡಲು। ಆಗ ಭದ್ರಕಾಳಿ ಹುಟ್ಟಿದಳು। ಆಗ ಭದ್ರಕಾಳಿಗೂ ಶ್ರೀ ವೀರಭದ್ರ ದೇವರಿಗೂ। ವಿವಾಹವನ್ನು ಮಾಡಿ। ಶೂನ್ಯ ಸಿಂಹಾಸನದ ಮೇಲೆ ಕುಳ್ಳರಿಸಲು। ಆಗ ನಮ್ಮ ಶ್ರೀ ವೀರಭದ್ರದೇವರಿಗೆ। ಭದ್ರಕಾಳಿಯನ್ನು ಕಾಣುತ್ತಲೇ। ಶಾಂತಿಗುಣ ಹುಟ್ಟಿತು। ಆಗ ವೀರೇಶನು। ಸೃಷ್ಟೀಶನ ಪಾದಕ್ಕೆರಗಿ ಹೇಳುತ್ತಾನೆ । ಎಲೈ ಶಂಕರನೇ ನನ್ನನ್ನು। ಉದ್ಭವಿಸಿದ ಕಾರಣವೇನು। ನೆಗ್ಗಲೋ ಬ್ರಹಾಂಡವಂ ದಿಗ್ಗಜಂಗಳ್ ಮಗ್ಗುಲಂ ಕೀಳಲೋ ಫಣಿಪತಿಯ ಬಗ್ಗುರಿಯಂ। ಶೀಳಲೋ। ಎನ್ನ ವೈರಿಗಳು ಎಲ್ಲಿಹರು। ತೋರೋ ತೋರೋ ಇದೇ ಖಡ್ಗಕ್ಕೆ। ಬಲಿಯನ್ನು ಕೊಡುವೆನು।ಹೀಗೆಂದು ಕೋಟಿ ಸಿಡಿಲಾಗುವಂತೆ ಘರ್ಜಿಸುವ। ನಮ್ಮ ಶ್ರೀ ವೀರಭದ್ರನನ್ನು ನೋಡಿ ಎಲೈ ಪುತ್ರನಾದ ವೀರಭದ್ರನೇ। ಎನ್ನ ಶತ್ರುವಾದ। ದಕ್ಷಬ್ರಹ್ಮನು। ಸುರವೃಂದವನ್ನು ಕೂಡಿಕೊಂಡು। ಸದ್ಯದಲ್ಲಿ ಅಧ್ವಾರವ ಮಾಳ್ಪನಂತೆ। ಈ ಕಥನದಿಂದೀಶ್ವರಿಯು। ದಕ್ಷನ ಯಜ್ಞದ। ಯಜ್ಞೇಶ್ವರನ ಪಾಲಾದಳು। ಆದ್ದರಿಂದ। ನೀನು ಅವನಲ್ಲಿಗೆ ಹೋಗಿ।ಅವನಿಗೆ ಪರಿಪರಿಯಾದ। ರೀತಿಗಳನ್ನು ಹೇಳಿ ನಮ್ಮ ರುದ್ರಜಾಗವಾದ। ಹವಿರ್ಭಾಗವನ್ನು ಕೊಡಬೇಕೆಂದು ಕೇಳು। ಕೊಟ್ಟರೆ ಸರಿ। ಕೊಡದೆಯಿದ್ದ ಪಕ್ಷದಲ್ಲಿ। ಆ ದಕ್ಷಬ್ರಹ್ಮನ। ಮಾರ್ಬಲವಂ। ಸಂಹಾರ ಮಾಡಿ। ಗೀರ್ವಾಣಂ। ಓರ್ವರಂ ಬಿಡದೆ ಎಳೆತರುವುದೆಂದು। ಆಶೀರ್ವದಿಸಿ। ೯೮ ಕೋಟಿ ಭೂತ ಬೇತಾಳ ಶಾಕಿನಿ। ಡಾಕಿನಿ। ಚಂಡಿ ಚಾಮುಂಡಿ ಮೊದಲಾದ। ರಾಕ್ಷಸರ

ಹಿಂಡುಗಳ ತಂಡವನ್ನೆಲ್ಲಾ। ನಮ್ಮ ಶ್ರೀ ವೀರಭದ್ರದೇವರ ಬೆಂಬಲಕ್ಕೆ ಕೊಡಲು ಆಗ ನಮ್ಮ ಶ್ರೀ ವೀರಭದ್ರದೇವರು। ಸಕಲ ಭೂತಂಗಳೊಡನೆ। ಯಾಗ ಶಾಲೆಗೆ ಬರುವಾಗ। ಭೂಮಿಯು ಇಬ್ಬಾಗವಾಯಿತು। ಸಪ್ತಕುಲ ಪರ್ವತಗಳು। ಅಲ್ಲಾಡಿದವು। ಆದಿಶೇಷನು ತಲೆಬೊಗ್ಗಿಸಿದನು। ಕೂರ್ಮನು ಈ ಭೂಮಿಯನ್ನು ಹೊರಲಾರದೆ। ಹೊರಳಾಡಿದನು। ಆಗ ನಮ್ಮ ಶ್ರೀ ವೀರಭದ್ರದೇವರು। ಯಜ್ಞ ಶಾಲೆಗೆ। ಬರುವ ಸಂಭ್ರಮವೆಂತೆಂದೆಡೆ। ಪಿಸಿದ ಹಲಗೆ। ಪಿನಾಕಿ। ಬಾಣ। ಜಡಿಯ ಝುಲ್ಲೆಯ। ನೆಲಕ್ಕೆಳೆಯುತ್ತ ಆದರು ಗತ್ತಿ। ಬಿದರಗತ್ತಿ। ಗರಗಸಗತ್ತಿ। ಮೊದಲಾದ ಬತ್ತೀಸು ಆಯುಧಗಳ ಹಿಡಿದುಕೊಂಡು। ಯಾಗ ಶಾಲೆಯನ್ನೇ। ಹೊಕ್ಕು ಯಾಗಶಾಲೆಯಂ ಕಾದಿರುವ। ಭೈರವನನ್ನು। ಕಾಲಿಲೊದ್ದು। ಚವುಡೇಶ್ವರಿಯ। ಕರ್ಣವಂ ಕಿತ್ತು। ಲಕ್ಷ್ಮೀದೇವಿಯ ಮುಂದಲೆಯಾ ಕೊಯಿದು। ಸರಸ್ವತಿಯ ಮೂಗನ್ನು ಕೊಯಿದು। ಶಚಿದೇವಿಗಚ್ಚೊತ್ತಿ। ಮುಂದಕ್ಕಡಿಯಿಡುವಷ್ಟರಲ್ಲಿಯೇ ಪಂಚಾಂಗ ಪ್ರಶ್ನೆಗಳನ್ನು। ಸುಡಹಾಕಿ। ಮುಂಚೋಡುತ್ತಿರಲು ಶುಕ್ರ ಬೃಹಸ್ಪತಿಗಳು ವೀರಭದ್ರನನ್ನು ಕಂಡು। ಸೂರ್ಯ ಚಂದ್ರಾದಿಗಳು ದಿಗ್‌ದೆಸೆಯಾಗಿ ಓಡುತ್ತಿರಲು। ನಾರಿಗೆ ಮನಸೋತು। ಘೋರಪಾತಕರಿವರೆಂದು ಅವರನ್ನು ಎಳತಂದು। ಸೂರ್ಯನ ಹಲ್ಲು ಮುರಿದನು ಚಂದ್ರನನ್ನ ಸದೆಬಡಿದು ವಿಘ್ನೇಶ್ವರನ ಹೊಟ್ಟೆಯ। ಒಡಿಯಲೊ। ಅಷ್ಟರಲ್ಲಿಯೇ ಶ್ರೇಷ್ಠನಾದ ವಿಘ್ನೇಶ್ವರನು। ಹೊಟ್ಟೆಗೆ ಪನ್ನಗನಂ। ಬಿಗಿದುಕೊಂಡು ಓಡಿದನು।ವಿಷ್ಣು ಬಿದ್ದುದನ್ನು। ಬ್ರಹ್ಮನು ಕಂಡು ಭ್ರಷ್ಟನಾಗಿ। ಕೆಟ್ಟೆನೋ। ಕೆಟ್ಟೆನೋ ಎನುತ। ತನ್ನ ಜುಟ್ಟು ಅಲ್ಲಾಡಿಸುತ್ತಾ ಓಡಿಹೋದನು। ಆಗ। ನಮ್ಮ ಶ್ರೀ ವೀರಭದ್ರ ದೇವರು । ಯಾಗ ಶಾಲೆಯಂ ಒಳಹೊಕ್ಕು ಯಾಗ ಶಾಲೆಯೋಳ್ ಕುಳಿತಿರ್ದ ಕೋಟ್ಯಾನುಕೋಟಿ ಬ್ರಾಹ್ಮಣರ। ಹಿಂಡುಗಳ ತಂಡವನ್ನೆಲ್ಲಾ। ಭಂಗಮಾಡುವಷ್ಟರಲ್ಲಿಯೇ ಆ ಬ್ರಾಹ್ಮಣರು ಕೊಂಡಾಡುತ್ತಿದ್ದರು। ನಮ್ಮ ಗಂಡುಗಲಿ ಶರಭಯ್ಯ। ಶರಣೂ ಶರಣೂ ರಕ್ಷಾ ಮಣಿಯೇ ಶರಭಯ್ಯಾ। ನಮ್ಮ ಹರಿಯ ಪ್ರಾಣ ನಿಮ್ಮದಪ್ಪಾ ರುದ್ರಾ। ಅರುಹು ಇದ್ದಿಲ್ಲೋ ನಿಮ್ಮ ಮಹಿಮೆ। ಶರಭಯ್ಯಾ। ಜಗದ ಕುರಿಯ ಹಿಂಡು। ನರಪಶುಗಳಪ್ಪಾ ರುದ್ರಾ। ಹೆಣ್ಣು ಬಳಗದ ದೋಷರು ಶರಭಯ್ಯಾ। ಮೂರು ಕಣ್ಣಿನ ಮುಕ್ಕಣ್ಣ। ನೀನೇ ಸಲಹಯ್ಯಾ ರುದ್ರಾ ತಂಗಳು ಬಿಸಿಯನ್ನು ಉಣ್ಣಲಿಲ್ಲಾ ಶರಭಯ್ಯಾ। ದಕ್ಷನ ಅಂಗಳಕೊನೆಯು। ಹಾಳಾಗಿ ಹೋಗಲಪ್ಪಾ ರುದ್ರಾ। ಅನ್ನದಾನ ಗೋದಾನ ನೆರನಿಂದು ಬಂದೆವು ಶರಭಯ್ಯಾ। ಇಂಥಾ ಭಿನ್ನ ಕೃತಿಯನ್ನು ಕಂಡಿದ್ದಿಲ್ಲವಪ್ಪಾ ರುದ್ರಾ ಈ ರೀತಿಯಾಗಿ ಗೋಳಾಡುತ್ತಿರುವ ಸಮೂಹವನ್ನು ನೋಡಿ। ನಕ್ಕು ನಕ್ಕು ಶರೆಯಬಿಟ್ಟ ರುದ್ರಾ। ಆಗ ವೀರೇಶನು ದಕ್ಷನಿದ್ದೆಡೆಗೆ। ಹೋಗಿ। ಎಲೈ ಹರಿಸುರ ಮುನಿಗಳಿರ। ಯಾರ ನೊಲಿಸುವದೆ। ಯಜ್ಞವ ಮಾಳ್ಪಿರಿ ಈಗ ನೆರೆದಿರುವ। ಬ್ರಹ್ಮಾರುತರು। ನೀವು ಯಾರಿಂದ ಜನಿಸಿದಿರಿ। ಆಹುತಿಯಾಗುವ ವಸ್ತುಗಳು। ನೀವು ಸ್ತುತಿಮಂತ್ರಗಳು। ಯಾರ ನುತಿಪವು। ಹರನೇ ಸರ್ವೋತ್ತಮನೆಂದು ಅರಿಯದೆ। ಘೋರತನದಲ್ಲಿ ಈ ಪರಿಯಿಂದ ಕಂಡು ಇರುವಿರಾ। ಹೀಗೆಂದು। ವೀರಭದ್ರ ದೇವರು ಕೇಳಿದರು। ಆಗ ದಕ್ಷಬ್ರಹ್ಮನು ಬಂದು। ಯಾರ ಮಗನಯ್ಯಾ ನೀನು। ಯಾರ ಬಸುರಿನಲಿ ಬಂದಿ ಘೋರತನದಲ್ಲಿ ನಮ್ಮದಳೆವ। ಸಂಹರಿಸಿದ ಕಾರಣವೇನು। ನಮ್ಮ ಮಂತ್ರತಂತ್ರ ರಹಸ್ಯಗಳಗೊಡವೆ ನಿಮಗ್ಯಾತಕ್ಕೆ ಬೇಕು। ನೀನು ಕಾದುವ ರೀತಿಯೇನು। ಹೀಗೆಂದು ಆರ್ಭಟಿಸಿ ನುಡಿದ। ದಕ್ಷ ಬ್ರಹ್ಮನನ್ನು ನೋಡಿ। ಎಲೈ ದುರಳನಾದ ದಕ್ಷನೇ। ಶಿವನ ನಿಟಿಲ ನೇತ್ರದಿಂದ ಉದ್ಭವಿಸಿದ। ಹರನ ಕುಮಾರನಾದ ವೀರಭದ್ರನೇ ನಾನು ನನ್ನ ಪಿತನಾದ ಶಂಕರನು। ನಿನಗೆ ಪರಿಪರಿಯಾದ। ನೀತಿಗಳಂ ಹೇಳಿ। ನಮ್ಮ

ರುದ್ರಭಾಗದ। ಹವಿರ್ಭಾಗವಂ। ತರಬೇಕೆಂದು। ಪರಶಿವನಪ್ಪಣೆಯಾಗಿರುವುದು। ಆದ್ದರಿಂದ। ತಡಮಾಡದೆ। ನಮ್ಮ ರುದ್ರಭಾಗವಾದ ಹವಿರ್ಭಾಗವನ್ನು ಕೊಡಲಾ ದಕ್ಷಾ। ಹೀಗೆಂದು। ವಿರೇಶನು ಹೇಳಲು ಆಗ ದಕ್ಷಬ್ರಹ್ಮನು। ಕೋಟಿ ಸಿಡಿಲಿನಂತೆ। ಆರ್ಭಟಿಸಿ। ಎತ್ತಣವನು। ಈಶ್ವರನು। ರುದ್ರಭಾಗಿಯದೆತ್ತ। ಆ ಬೂದಿಬಡಕನಿಗೆ। ಪುತ್ರನಾಗಿರುವ ಈ ಬಾಯಿಬಡುಕನ। ಕತ್ತನ್ನು ಹಿಡಿದು ನೂಕೆನುತ। ಆರ್ಭಟಿಸಿ। ಹೇಳುವಷ್ಟರಲ್ಲಿಯೇ। ನಮ್ಮ ಶ್ರೀ ವೀರಭದ್ರದೇವರಿಗೆ। ಕೋಪವು ಮಿತಿ ಮೀರಿತು। ಆಗ ವೀರೇಶನು ಇನ್ನು ತಡಮಾಡಕೂಡದೆಂದು। ತಮ್ಮ ಕರದೊಳಗಿದ್ದ। ಗರಗಸಗತ್ತಿಯಿಂದ। ಆ ದಕ್ಷಬ್ರಹ್ಮನ ಶಿರವನೇ। ಚರಚರನೇ ಕೊರೆದು। ಉರಿಯೊಳಗೆ ಹಾಕಲು ಅಷ್ಟರಲ್ಲಿಯೇ। ಈ ದುಃಖಾವಸ್ತೆಯನ್ನು। ದಕ್ಷನ ಪತ್ನಿಯಾದ। ಪ್ರಸೂತಾದೇವಿಯು ಬಂದು। ಎಲೈ ದೇವರಿಗೆ ವಲ್ಲಭನಾದ ಶ್ರೀ ರುದ್ರನೇ। ನನ್ನ ಮುತ್ತೈದೆತನವನ್ನು। ಪಾಲಿಸಬೇಕೆಂದು ಪರಿಪರಿಯಿಂದ। ಬೇಡಿಕೊಳ್ಳಲು। ಆಗ ನಮ್ಮ ಶ್ರೀ ವೀರಭದ್ರ ದೇವರಿಗೆ। ಅಂತಃಕರಣ ಹುಟ್ಟಿ। ಚರಣಕ್ಕೆರಗಿದ। ತರುಣಿಯ ಶಿರವ ಪಿಡಿದೆತ್ತಿ। ಅದೇ ಹೋಮದ ಸಮೀಪದೊಳ್। ಬಿದ್ದಿದ್ದ ಕುರಿತಲೆಯಂ ತೆಗೆದು। ದಕ್ಷಬ್ರಹ್ಮನ ಹರಿತಲೆಗೆ। ಕುರಿತೆಲೆಯನ್ನು। ಕುರಿತಲೆ ನರದಾಕಾರವಾಗಿ ಇರುವ ದಕ್ಷಬ್ರಹ್ಮ। ಹರಿಸುರ ಬ್ರಹ್ಮಾದಿಗಳನ್ನು ಕೂಡಿಕೊಂಡು। ವೀರೇಶನು। ಕೈಲಾಸಕ್ಕೆ ಹೋಗಿ ನಮ್ಮ ಪರಶಿವಮೂರ್ತಿಗೆ ಅಡ್ಡಕೆಡುವಲು। ಅಷ್ಟರಲ್ಲಿಯೇ ನಾರದರು। ಹೋಗಿ। ದಕ್ಷದ್ವರದಲ್ಲಿ ನಡೆದ ಸಂಗತಿಯನ್ನೆಲ್ಲಾ ತಿಳಿಸಿದರು। ಆಗ ನಮ್ಮ ಪರ ಶಿವಮೂರ್ತಿಯು। ಎಲೈ ಪುತ್ರನಾದ ವೀರಭದ್ರನೇ। ನೀನು ದಕ್ಷನ ಯಜ್ಞದಲ್ಲಿ ನಡೆಸಿದ ಪರಾ ತಾಯಿ ಜಗನ್ಮಾತೆ ಪಾರ್ವತಿದೇವಿಯೇ ನಮ್ಮನ್ನು ರಕ್ಷಿಸುವಾಗ। ನಮಗೆ ತರಭಯ। ಮತ್ತು ಇದಕ್ಕೆ ಅಂಜುವ ಕ್ಷಣವೇ ಇಲ್ಲವೆಂದು ಸಿದ್ಧನಾದನು। ಆಗ ದೇವಾನು ದೇವತೆಗಳು। ಮತ್ತು ಪಾರ್ವತಿ ದೇವಿಯು। ಕಾಮರತಿಯರಿಗೆ ಸಂತೋಷದಿಂದ ಆಶೀರ್ವದಿಸಿದರು।

ಆಹಾವೀರಾ। ಆಹಾ ಶರಭಾ। ಆಗ ಕಾಮನು ತನ್ನ ಪರಿವಾರದವರಾದ। ಚಂದ್ರನಂಥ ಮುಖವುಳ್ಳ ಸುಂದರ ಸ್ತ್ರೀಯರು। ಸುವಾದನೆಯುಳ್ಳ ಮಂದ ಮಾರುತ। ಇಂಪಾಗಿ ಹಾಡುವ ಗಿಳಿ ಕೋಗಿಲೆಗಳು। ಮತ್ತು ವಸಂತರಾಜ। ಇವರೆಲ್ಲರನ್ನು ಕರೆದುಕೊಂಡು। ಪರಮೇಶ್ವರನಿದ್ದಲ್ಲಿಯೇ ಬಂದನು। ಮೊದಲು ಕಾಮರತಿಯರಿಬ್ಬರು। ತಮ್ಮ ಮನಮೋಹಕ ಲೀಲೆಗಳಿಂದ ನರ್ತನವನ್ನು ಮಾಡಿದರು। ಆದರೂ ಪರಶಿವನು ಏಳಲಿಲ್ಲ। ಆಗ ಕಾಮನು ಪರಶಿವನ ಮೇಲೆ। ಬಾಣಗಳನ್ನು ಹೊಡೆದನು। ಅವು ಯಾವುವೆಂದರೆ; ೧) ಕಮಲ, ೨) ಕುಮುದ, ೩) ಅಶೋಕ, ೪) ಮಲ್ಲಿಗೆ ಮತ್ತು ೫) ಚಂಪಕ ಈ ೫ ಬಾಣಗಳನ್ನು ಪರಶಿವನ ಮೇಲೆ ಬಿಟ್ಟನು ಆ ಬಾಣಗಳು ತಾಕಲು ಆಗ ಪರಮೇಶ್ವರನು। ತನ್ನನ್ನು ತಪೋಭಂಗ ಮಾಡಿದವರು, ಯಾರೆಂದು। ಸಿಟ್ಟಿನಿಂದ ಕಣ್ತೆರೆದನು। ಆಗ ಮೂರನೇಯ ಕಣ್ಣು ತೆರೆಯಿತು। ಆಗ ಎದುರಿಗಿದ್ದ ಕಾಮನು।ಪರಮೇಶ್ವರನ ಉರಿಗಣ್ಣಿನ ಜ್ವಾಲೆಯಿಂದ ಸುಟ್ಟು ಭಸ್ಮವಾದನು। ಆಗ ಆತನ ಹೆಂಡತಿಯಾದ ರತಿದೇವಿಯು ದುಃಖಿಸುತ್ತಾ। ಪಾರ್ವತಿಯನ್ನು ಮೊರೆಹೊಕ್ಕಳು। ತನ್ನ ಮಾಂಗಲ್ಯ ಭಾಗ್ಯವನ್ನು ಕಾಪಾಡಬೇಕೆಂದು। ಅನನ್ಯ ಭಾವನೆಯಿಂದ ಬೇಡಿಕೊಂಡಳು। ಆಗ ಭಗವತಿಗೆ ಕರುಣೆಯು ಬಂದು। ತಾನು ಕೊಟ್ಟ ಆಶ್ವಾಸನೆಯು ನೆನಪಾಯಿತು। ಆಗ ಪರಶಿವನಿಗೆ ಹೇಳುತ್ತಾಳೆ। ರತಿಯ ಮಾಂಗಲ್ಯ ಕಾಪಾಡಬೇಕು। ಮತ್ತು ಇವಳು ನಿರಪರಾಧಿಯು। ಆದ ಕಾರಣ। ಅವಳ ಪತಿಯನ್ನು ಬದುಕಿಸಲೇಬೇಕೆಂದು ಹೇಳಿದಳು।

ಆಹಾವೀರಾ। ಆಹಾ ಶರಭಾ। ಆಗ ಪರಶಿವನು ಹೇಳುತ್ತಾನೆ। ಎಲೈ ರತಿದೇವಿಯೇ। ನಿನ್ನ ಪತಿಯು ಲೋಕ ಕಲ್ಯಾಣಕ್ಕಾಗಿ ಮಾಡಿದ ಸ್ವಾರ್ಥತ್ಯಾಗ ಇವು ಮೆಚ್ಚುವಂಥದ್ದು। ಮತ್ತು। ಆತನು ದೇಹದಿಂದ ಸುಟ್ಟು ಹೋದರು। ಚಂದ್ರನಂಥ ಮುಖವುಳ್ಳ। ಸುಂದರ ಸ್ತ್ರೀಯರ ಕಡೆಗಣ್ಣಿನ ನೋಟದಲ್ಲಿ। ಸದಾಕಾಲ ನೆಲಸಲಿ। ಮತ್ತು ಈ ರೀತಿಯ ಸಂಕೇತವಾಗಿ। ಭೂಲೋಕದ ಜನರು। ಪ್ರತಿವರ್ಷವೂ। ಪಾಲ್ಗುಣ ಶು॥ ಪೂರ್ಣಿಮೆಯ ದಿನ। ನಿಮ್ಮ ಮೂರ್ತಿಗಳನ್ನು ಪ್ರತಿಷ್ಠಾಪಿಸಿ। ಮೋಜು ಮಜಲುಗಳಿಂ। ೫ ದಿನಗಳವರೆಗೆ। ಈ ಕಾಮನ ಹಬ್ಬವನ್ನು। ಸಂತೋಷ ಉಲ್ಲಾಸಗಳಿಂದ ಆಚರಿಸಲಿ। ಕೊನೆಯ ದಿನ। ಅಂದರೆ ೫ನೇಯ ದಿನ। ನಾನು ಕಾಮನನ್ನು ಯಾವ ರೀತಿ ಸುಟ್ಟು ಭಸ್ಮ ಮಾಡಿದೆನೋ। ಅದೇ ರೀತಿ ಆತನನ್ನು ಸುಟ್ಟು ಭಸ್ಮ ಮಾಡಿ। ಬಣ್ಣ ಬಣ್ಣದ ಹೋಕುಳಿಯನ್ನು ಆಡಲಿ। ಅದು 'ರಂಗ ಪಂಚಮಿ' ಎಂದು ಹೆಸರಾಗಲಿ। ಮತ್ತು ವರ್ಷದ ಎಲ್ಲಾ ಹಬ್ಬ ಹುಣ್ಣಿಮೆ ವ್ರತಗಳನ್ನು ಹೆಣ್ಣು ಮಕ್ಕಳು ಆಚರಿಸಿದರೆ ಆ ಕಾಮನ ಹಬ್ಬವನ್ನು। ಗಂಡಸರು ಸಂತೋಷ ಉಲ್ಲಾಸದಿಂದ ಆಚರಿಸಲಿ। ಹೀಗೆಂದು ಪರಶಿವನು ಆಶೀರ್ವದಿಸಿದನು। ಅಂದಿನಿಂದ ಇಂದಿನವರೆಗೂ ಈ ಹೋಳಿ ಹಬ್ಬವನ್ನು ಆಚರಿಸುವರು ಕಡೆ ಕಡೆ(ಶಂಕ್ರಪ್ಪ ಬಸಪ್ಪ, ತೊಂಡಿಹಾಳ, ೨೦೦೦, ೬೬).

## ಶ್ರೀ ವೀರಭದ್ರನಿಂದ ಮೇಘಾಸುರನ ಸಂಹಾರ :

ಅಹಹಾ ವೀರ। ಅಹಹಾ ರುದ್ರ। ಭಕ್ತಾದಿಗಳೇ; ಮೇಘಾಸುರನ ಸಂಹಾರವನ್ನು ಹೇಳುವೆನು ಕೇಳಿ। ಒಂದಾನೊಂದು ಕಾಲ। ಆ ಕಾಲದಲ್ಲಿ ಓರ್ವ ರಾಕ್ಷಸನ ಹೆಸರು ಮೇಘಾಸುರ। ಎಂದಿತ್ತು। ಅವನು ಒಂದು ರಾಜ್ಯದ ಅರಸನಾಗಿದ್ದನು। ಅವನ ರಾಜ್ಯದ ಹೆಸರು ಶಾಲ್ಮಲೀದ್ವೀಪವಾಗಿತ್ತು। ಅವನು ತನ್ನ ರಾಜ್ಯದಲ್ಲಿ ಜನರನ್ನು ಕಾಡುತ್ತಿದ್ದನು। ಅಲ್ಲದೆ ಸುತ್ತಲಿನ ಏಳು ದ್ವೀಪಗಳಿಗೂ ಕಾಡುತ್ತಿದ್ದನು। ಎಲ್ಲರಿಗೂ ಕಂಟಕನಾಗಿದ್ದನು। ಭೂಲೋಕಕ್ಕೂ ಸೀಮಿತವಾಗಿರಲಿಲ್ಲ। ಬರಬರುತ್ತಾ। ಅದು ಇಂದ್ರನ ಅಮರಾವತಿಗೂ ಕಾಲಿಟ್ಟಿತ್ತು। ಅವನ ರಾಜ್ಯಕ್ಕೂ ಧಾಳಿ ಇಟ್ಟನು। ಅವನ ಕಾಟಕ್ಕೆ ದೇವೇಂದ್ರನೂ ಬಲಿಯಾದನು। ಅವನೂ ಭಯಗ್ರಸ್ಥನಾದನು। ಹೀಗೆ ಮೇಘಾಸುರನ ಕಾಟಕ್ಕೆ ಭೂಲೋಕ ಸ್ವರ್ಗ ಲೋಕಗಳೆರಡೂ ಸಂಕಟಕ್ಕೀಡಾದವು। ಇದರಿಂದ ದೇವಾನು ದೇವತೆಗಳೂ, ಮಾನವರೂ ಕೂಡಿಕೊಂಡರು। ಅವರೆಲ್ಲರೂ ದಾನವನಾದ ಮೇಘಾಸುರನ ಕಾಟವನ್ನು ಶಿವನ ಮುಂದೆ ಹೇಳಿದರು। ಅವರೆಲ್ಲರ ಸಂಕಟಕ್ಕೆ ಶಿವನು ಕರುಣಾಭರಿತನಾದನು। ಅವನನ್ನು ಸಂಹರಿಸಲು ಯಾರಿಂದಲೂ ಸಾಧ್ಯವಿಲ್ಲ ವೀರಭದ್ರನೊಬ್ಬ ನಿಂದಲೇ ಸಾಧ್ಯವೆಂದು ಮನಗಂಡನು।

ಅಹಹಾ ವೀರ। ಅಹಹಾ ರುದ್ರ। ಆದಕ್ಕಾಗಿ ಶ್ರೀ ವೀರಭದ್ರನನ್ನು ಶಿವನು ಮೇಘಾಸುರನ ಸಂಹಾರಕ್ಕೆ ಕಳಿಸಿಕೊಟ್ಟನು। ವೀರಭದ್ರನನ್ನು ಕರೆದನು ವೀರಭದ್ರ ಬಂದನು। ಮೇಘಾಸುರನ ಸಂಹಾರ ಮಾಡಲು ಆಜ್ಞಾಪಿಸಿದನು। ವೀರಭದ್ರನು ಕೇಕೆಯನ್ನು ಹೊಡೆದನು। ಭೂಲೋಕಕ್ಕೆ ಜಿಗಿದನು। ಭೂಲೋಕ ನಡುಗಿತು। ಮೇಘಾಸುರನಲ್ಲಿಗೆ ಹೋದನು। ವೀರಭದ್ರನು ಒಂದು ಕೋಟಿ ಸೂರ್ಯರಷ್ಟು ಪ್ರಕಾಶಮಾನವುಳ್ಳವನಾಗಿದ್ದನು। ಒಂದು ಕೋಟಿ ಸೂರ್ಯರಷ್ಟು ಬಿಸಿಲಿನ ತಾಪವುಳ್ಳವನಾಗಿದ್ದನು।

ಉಗ್ರವಾಗಿದ್ದನು। ಹೀಗೆ ವೀರೇಶನು ಮೇಘಾಸುರನನ್ನು ಎದುರಿಸಿದನು। ಇದಕ್ಕೆ ಪ್ರತಿಯಾಗಿ ಮೇಘಾಸುರನು ಹನ್ನೆರಡು ಮೇಘವಾಗಿ ಆರ್ಭಟಿಸಿದನು. ಅದಕ್ಕೆ ಪ್ರತಿಯಾಗಿ ವೀರೇಶನು ತನ್ನ ನೊಸಲಾಗ್ನಿಯಿಂದ ನೋಡಿದನು। ಚಂಡಮಾರುತನಂತೆ ಬೀಸಿದನು। ಮೇಘಾಸುರನ ಮೇಘವು ವೀರಭದ್ರನು ಚಂಡಮಾರುತನಂತೆ ಬೀಸಿದನು। ಮೇಘಾಸುರನ ಮೇಘವು ವೀರಭದ್ರನ ಚಂಡಮಾರುತಕ್ಕೆ ಸಿಕ್ಕೂ ದೂಳಿಯಂತೆ ಹಾರಿ ಹೋಯಿತು। ವೀರಭದ್ರನ ಗಾಳಿಯ ಹೊಡೆತಕ್ಕೆ ರಕ್ಕಸನು ದಿಕ್ಕು ಕಾಣದೆ ಓಡಾಡಹತ್ತಿದನು।

ಮೇಘಾಸುರನು ವೀರಭದ್ರನೊಡನೆ ಯುದ್ಧಮಾಡುವದೊತ್ತಟ್ಟಿಗಿರಲಿ। ತನ್ನ ಜೀವ ಉಳಿಸಿಕೊಳ್ಳುವುದೇ ಕಷ್ಟವಾಯಿತು। ಗಾಳಿಯ ಹೊಡೆತಕ್ಕೆ ಮೇಘವು ದಿಕ್ಕೆಟ್ಟು ಓಡಿತು। ಮೇಘಾಸುರನು ಉಸಿರಾಡಿಸುವದು ಕಷ್ಟವಾಯಿತು। ಉಸಿರುಗಟ್ಟಿತು। ಸಿಕ್ಕ ಸಿಕ್ಕ ಕಡೆಗೆ ಮೇಘಾಸುರನು ಓಡಾಡಿದನು। ಶ್ರೀ ವೀರಭದ್ರನ ಪ್ರಚಂಡ ಮಾರುತದ ಹೊಡೆತಕ್ಕೆ ಗತಿ ಕಾಣದೆಹೋಯಿತು। ಮೇಘಾಸುರನು ಗತಿಗಾಣದೆ ಮರಣ ಹೊಂದಿದನು।

ಇದನ್ನು ಆಕಾಶದಿಂದ ನೋಡಿದ ದೇವಾನುದೇವತೆಗಳು। ಶ್ರೀ ವೀರಭದ್ರನ ಮೇಲೆ ಪುಷ್ಪ ವೃಷ್ಟಿಗೈದರ। ಶಿವನು ವೀರಭದ್ರನನ್ನು ಕರೆಯಿಸಿ ರತ್ನ ಖಚಿತವಾದ ಸಿಂಹಾಸನದ ಮೇಲೆ ಕೂಡಿಸಿ। ಬೆನ್ನು ಚಪ್ಪರಿಸಿದನು। ಭದ್ರಕಾಳಿಯು। ರನ್ನದ ಆರತಿ ಬೆಳಗಿದಳು। ಮಾನವರೆಲ್ಲರೂ, ದೇವಾನುದೇವತೆಗಳೆಲ್ಲರೂ ಶ್ರೀ ವೀರಭದ್ರನನ್ನು ಹೊಗಳಿದರು। ಅವನ ಶೂರತನಕ್ಕೆ ಬೆರಳು ಕಚ್ಚಿದರು। ಗಂಧರ್ವ ಕನ್ನಿಕೆಯರು ನರ್ತನೆಗೈದರು। ನಾರದರು ವೀಣೆಯನ್ನು ಝೇಂಕರಿಸಿ ನಾದಗೈದರು। ಗಿಳಿಗಳು ಹಾಡಿದವು। ಕೋಗಿಲೆಗಳು ಕುಣಿದವು। ಮಾರುತನು ಸಂತುಷ್ಟನಾದನು।

ಭೂಲೋಕ ಸಂತುಷ್ಟವಾಯಿತು। ಸ್ವರ್ಗಲೋಕ ಸುಖಿಯಾಯಿತು। ಶ್ರೀ ವೀರಭದ್ರನ ಪರಾಕ್ರಮಕ್ಕೆ ಎದುರಾಗುವವರಾರು? ಕಡೆ ಕಡೆ। ಗಂಡುಗಲಿ ವೀರಭದ್ರ ಕಡೆ ಕಡೆ॥

## ಶ್ರೀ ವೀರಭದ್ರನಿಂದ ಮೇಢ್ರಾಸುರನ ವಧೆ :

ಅಹಹಾ ವೀರ। ಅಹಹಾ ರುದ್ರ। ಪಂಚಮೇಢ್ರಾಸುರನ ವಧೆಯನ್ನು ಕುರಿತು ಹೇಳುವೆನು। ಕೇಳಿರಿ ಕೇಳಿರಿ ವೀರಭದ್ರನ ಭಕ್ತರೇ ಕೇಳಿರಿ। ವೀರಭದ್ರನ ಭಕ್ತರೇ ಕೇಳಿರಿ। ಒಂದಾನೊಂದು ಕಾಲದಲ್ಲಿ ವಾಮನಕೆರಿ ಎಂಬ ಗ್ರಾಮವಿತ್ತು। ಅದರಲ್ಲಿ ವಿಜ್ಜುಮ್ಮಾಸುರನಿದ್ದನು। ಅವನ ರಾಣಿ ವಿಜ್ಜುಮದೇವಿ। ಅವಳ ಮಗ ಪಂಚಮೇಢ್ರಾಸುರನೆಂಬುವನಿದ್ದನು। ಅವನು ಐದು ಸಾವಿರ ವರ್ಷ ಕಠಿಣ ತಪಸ್ಸನ್ನಾಚರಿಸಿದನು। ತಪಸ್ಸಿನಿಂದ ಬ್ರಹ್ಮದೇವನನ್ನು ಒಲಿಸಿಕೊಂಡಿದ್ದ। ಅವನಿಂದ ವರ ಪಡೆದಿದ್ದನು।

ಪಂಚಮೇಡ್ರಾಸುರನ ಶರೀರ ೪೦೦ ಯೋಜನ ಅಗಲ ಇತ್ತು, ಆದರ ಉದ್ದ ೫೦೦೦ ಯೋಜನ ಉದ್ದ ಇತ್ತು। ಅವನ ಬಾಯಿ ೩೦೦ ಗಾವುದ ಅಗಲ। ಅವನ ನಾಲಿಗೆ ೪೦೦ ಯೋಜನ ಉದ್ದ ಇತ್ತು। ಅವನಿಗೆ ೮ ಮುಖಗಳಿದ್ದವು। ೧೬ ಕರ್ಣಗಳಿದ್ದವು೧೬ ತೋಳುಗಳಿದ್ದವು। ೧೬ ಕಣ್ಣುಗಳಿದ್ದವು। ೮ ಕೋರಿ ಮೀಸೆಗಳಿದ್ದವು। ಮೂವತ್ತು ಗಾವುದ ಉದ್ದ ಮೂಗು ಇತ್ತು। ಅವನ ಕಾಲು ಹದಿನಾರು ಅಡಿ। ಐದು ಮೇಡ್ರ, ಹನ್ನೆರಡು ವೃಷಣಗಳು ಅವನಿದ್ದವು। ಒಂದೊಂದು ಮೇಢ್ಢ ಹನ್ನೆರಡು ಗಾವುದ ಉದ್ದ ಇದ್ದವು। ಇವೆಲ್ಲವುಗಳಿಂದ ಅವನು ಅಂಜನ ಗಿರಿಯಂತೆ ತೋರುತ್ತಿದ್ದನು। ಅವನ ಹೊಟ್ಟೆ ಐವತ್ತು ಗಾವುದ ಅಗಲ ಇತ್ತು। ಐದು ನೂರ ಗಾವುದ ಉದ್ದವಾದ ಕತ್ತಿಯನ್ನು ಹಿಡಿದು ಜಾಬರ ಜಂಗಿಯೆಂಬ ಸ್ತ್ರೀಯ ಸಲುವಾಗಿ ದೇವತೆಗಳೊಡನೆ ಕಾದಾಡುತ್ತಿದ್ದನು। ಅವಳಿಗಾಗಿ ಸಿಕ್ಕ ಸಿಕ್ಕವರನ್ನು ನುಂಗುತಿದ್ದನು।

ಒಮ್ಮೆ ಅವನು ಆರ್ಭಟಿಸಿದನು। ಆರ್ಭಟಿಸಿ ತನ್ನ ಎರಡೂ ಕೈಗಳಿತಾದ ದೇವರ್ಕಳೆಂಬವಳನ್ನು ಹಿಡಿದನು। ಹಿಡಿದು ನುಂಗುತ್ತಿದ್ದನು। ಅವಳು ಶಿವ ಭಕ್ತಳಾಗಿದ್ದಳು। ಇದರಿಂದ ಅವಳು ಭಯಗ್ರಸ್ಥಳಾಗಿ ಶಿವನಾಮ ಸ್ಮರಿಸಹತ್ತಿದಳು। ಶಿವನನ್ನು ಮೊರೆಹೊಕ್ಕಳು। ಶಿವನು ಅವಳ ಸ್ಥಿತಿಯನ್ನು ಅರಿತನು। ವೀರಭದ್ರನನ್ನು ಅವಳ ಸಂರಕ್ಷಣೆಯ ಸಲುವಾಗಿ ಕಳಿಸಿದನು। ಆಗ ವೀರಭದ್ರನು ಭೂಲೋಕಕ್ಕೆ ಜಿಗಿದನು। ಚುಕ್ಕೆಗಳು ಉದುರಿದವು। ಧ್ರುವ ನಕ್ಷತ್ರ ತತ್ತರಿಸಿತು। ಭೂಮಿ ನಡುಗಿತು। ವೀರಭದ್ರನು ಅವನ ಮೇಲೆ ಒಂದು ಸಾವಿರ ಗುಂಡುಗಳನ್ನು ಹೊಡೆದನು। ಆ ಎಲ್ಲ ಗುಂಡುಗಳು ಅವನಿಗೆ ಉಸುಕಿನ ಕಣದಂತೆ ಹತ್ತಿದ್ದವು। ಅದರಿಂದ ಅವನು ನನ್ನ ಮೇಲೆ ಉಸುಕು ಚಲ್ಲಿದವರ್‍ಯಾರು ಎಂದನು। ನಂತರ ವೀರಭದ್ರನು ಪಂಚಮೇಡ್ರಾಸುರನ ಮೇಲೆ ಬೆಟ್ಟಗಳನ್ನು ಕಿತ್ತು ಒಗೆದನು। ಅದಕ್ಕೆ ಅವನು ನನ್ನ ಮೇಲೆ ಬೆರಣಿಯನ್ನಿಡುವವನಾರು ಎಂದನು। ದೇವಾನುದೇವತೆಗಳು ಇದನ್ನು ನೋಡಿ ಭಯಗ್ರಸ್ಥರಾದರು। ಭಯದಿಂದ ಅಡಗಿಕೊಂಡರು।

ಅಹಹಾ ವೀರ। ಅಹಹಾ ರುದ್ರ। ಒಂದು ಕಡೆ ಈ ಸಮಯದಲ್ಲಿ ಪಂಚಮೇಡ್ರಾಸುರನ ಸ್ತ್ರೀ ಜಬರ ಜಿಂಗಿ ಬೆಟ್ಟದಂತೆ ಮಲಗಿದ್ದಳು। ಆಕೆಯು ಹೊರಳಿ ಮಲಗಿದಳು। ಅಡಗಿಕೊಂಡ ದೇವತೆಗಳು ಅವಳ ಮಗ್ಗುಲಲ್ಲಿ ಸಿಕ್ಕೂ ನುಗ್ಗು ನುಗ್ಗಾದರು। ಅವರು ಶಿವನನ್ನು ನೆನೆದರು। ಶಿವನು ವೀರಭದ್ರನಿಗೆ ಪ್ರೇರಣೆ ಇತ್ತನು। ಈ ಪ್ರೇರಣೆಯಿಂದ ವೀರಭದ್ರನು ಅವಳಿಗೆ ದೊಡ್ಡ ದೊಡ್ಡ ಮರಗಳನ್ನು ಕಿತ್ತು ಹೊಡೆದನು। ಮರಗಳ ಹೊಡೆತ ತಾಳಲಾರದೆ ಅವಳು ದಿಕ್ಕೆಟ್ಟು ಓಡಿದಳು। ಇತ್ತ ವೀರಭದ್ರನು ಪಂಚ ಮೇಡ್ರಾಸುರನ ಎದೆಗೆ ಜೋರಾಗಿ ಒದೆಯಲು। ನುಂಗಿದ ದೇವಾನುದೇವತೆಗಳನ್ನು ರಕ್ಕಸನು ಕಕ್ಕಿದನು। ಕಕ್ಕಿಬಿಕ್ಕಿದನು। ಅವನ ಶರೀರದಿಂದ ನುಂಗಲ್ಪಟ್ಟ ದೇವತೆಗಳು ಹೊರಬಿದ್ದು ಭೂಮಿಗೆ ಬಿದ್ದರು।

ರಕ್ಕಸನು ಕಾರಿಕೊಂಡ ದೇವತೆಗಳಿಗೆ ವೀರಭದ್ರನು ಅಡಿಯಿಂದ ಮುಡಿಯವರೆಗೆ ವಿಭೂತಿ ಭಸ್ಮ ಲೇಪಿಸಿದನು। ಪ್ರಾಣದಾನ ಮಾಡಿದನು। ಆತನ ಸತಿಗೂ ಪ್ರಾಣದಾನ ಮಾಡಿದನು।

ಇತ್ತ ರಕ್ಕಸನಾದ ಪಂಚ ಮೇಢ್ರಾಸುರನು ತನ್ನ ಬಲವಾದ ಖಡ್ಗದಿಂದ ವೀರಭದ್ರನಿಗೆ ಎದುರಾದನು। ವೀರಭದ್ರನು ತನ್ನ ಕಿರುಬೆರಳಿನ ಉಗುರಿನಿಂದ ರಕ್ಕಸನ ತಲೆಯನ್ನು ಚಿವುಟಿ ಬಗೆದನು। ಚಿವುಟಲ್ಪಟ್ಟ ರುಂಡವು ವೀರಭದ್ರನ ಸ್ತೋತ್ರವನ್ನು ಮಾಡಹತ್ತಿತು। ವೀರಭದ್ರನು ಅವನನ್ನು ನಿಮ್ಮ ಪಾದಸೇವೆ ಮಾಡಿಕೊಂಡಿರಲು ಅನುಗ್ರಹಿಸೆಂದು ಪ್ರಾರ್ಥಿಸಿಕೊಂಡನು। ವೀರೇಶನು ಆಗಲೆಂದು ಅನುಗ್ರಹಿಸಿದನು।

ಅಂದಿನಿಂದ ಇಂದಿನವರೆಗೂ ದ್ರೋಹಿಗಳಿಗೆಲ್ಲಾ ನೀನೇ ಗಂಡ। ಗಂಡರ ಗಂಡ।ಮಿಂಡರ ಮಿಂಡ। ರುದ್ರರಿಗೆ ಕಾಲ ರೌದ್ರ।ಸಂಹಾರ ಸಿಂಹ।ಭದ್ರಕಾಳಿಯ ರಮಣ।ಶ್ರೀ ಗೊಡಚಿ ವೀರಭದ್ರ।ಕಡೆಕಡೆ ಕರುಣಾನಿಧಿ ಕಡೆ ಕಡೆ॥

## ಶರಭಾವತಾರಿ ಶ್ರೀ ವೀರಭದ್ರ :

ಅಹಹಾ ವೀರ। ಅಹಹಾ ರುದ್ರ। ವೀರಭದ್ರನು ಶರಭಾವತಾರಿಯಾದ ಪರಿಯನ್ನು। ಹೇಳುವೆನು ಲಕ್ಷಗೊಟ್ಟು ಕೇಳಿರಿ ಮಹಾಜನಗಳೇ। ಆದಿಬ್ರಹ್ಮನೆಂಬವನಿದ್ದನು। ಅವನ ಮಗ ಕಶ್ಯಪನಾಗಿದ್ದನು। ಅವನ ಮಗನೇ ಹಿರಣ್ಯಕಶ್ಯಪು। ಅವನು ವರ ಪಡೆದು ರಾಜ್ಯಗಳಿಸಿದನು। ಅವನು ರಾಜ್ಯವಾಳುತ್ತಾ ಸೊಕ್ಕಿಗೆ ಬಂದನು। ಎಲ್ಲ ಜನರಿಗೂ ಕಂಟಕನಾದನು। ಎಲ್ಲ ದೇವಾನುದೇವತೆಗಳೆಲ್ಲರಿಗೂ ಕಂಟಕ ಪ್ರಾಯನಾದನು। ಆದರಿಂದ ಎಲ್ಲರಿಗೂ, ಭಯವಾಯಿತು। ತಮ್ಮ ಪ್ರಾಣಭಯದಿಂದ ಅವರೆಲ್ಲರೂ ಶಿವನಿಗೆ ಮೊರೆಹೊಕ್ಕರು। ಅವನಿಗೆ ತಮ್ಮ ಸಂಕಟಗಳನ್ನೆಲ್ಲಾ ತೋಡಿಕೊಂಡರು ಶಿವನಿಗೆ ಅವರ ಮೇಲೆ ಅಂತಃಕರಣ ಬಂದಿತು। ದಯೆಬಂದಿತು। ಅವರನ್ನು ರಕ್ಷಿಸಲು ಇಚ್ಛಿಸಿದನು। ಅವರೆಲ್ಲರಿಗೆ ಕಂಟಕಪ್ರಾಯನಾದ ಹಿರಣ್ಯಕಶ್ಯಪುನನ್ನು ಕೊಲ್ಲಲು ಹರಿಯನ್ನು ಕಳಿಸಿದನು। ಹರಿಯು ನರಸಿಂಹರೂಪ ಧರಿಸಿದನು।ನರಸಿಂಹನಾಗಿ ತನ್ನ ಉಗುರುಗಳಿಂದ ಹಿರಣ್ಯಕಶ್ಯಪುವಿನ ಎದೆಯನ್ನು ಸೀಳಿಕೊಂದನು। ಅವನ ರಕ್ತವನ್ನು ಕುಡಿದು ಸೊಕ್ಕೇರಿದನು। ಇದರಿಂದ ಲೋಕವನ್ನೇ ಕೊಲ್ಲಲು ಶುರುಮಾಡಿದನು।

ಅಹಹಾ ವೀರ। ಅಹಹಾ ರುದ್ರ। ದೇವತೆಗೆ ಹರಿಯುವ ಕಾಟವನ್ನು। ಕೊಡಲಿಕ್ಕೆ ಸುರು ಮಾಡಿದನು। ಅವನ ಕಾಟಕ್ಕೆ ದೇವಾನುದೇವತೆಗಳು ಬೇಸತ್ತರು। ಅವರೆಲ್ಲರೂ ಶಿವನನ್ನು ಮೊರೆಹೊಕ್ಕರು। ಶಿವನು ವೀರಭದ್ರನನ್ನು ಕರೆದನು। ನರಸಿಂಹನನ್ನು ಸಂಹರಿಸಲು ಆಜ್ಞಾಪಿಸಿದನು। ಅವನನ್ನು ಕೊಲ್ಲಲು ಯಾರಿಗೂ ಸಾಧ್ಯ ಇದ್ದಿಲ್ಲ। ಇದರಿಂದ ಶ್ರೀ ವೀರಭದ್ರನು ಕಲೊರದಾಡೆ ವಜ್ರಕ್ಕೆ ಸರಿಯಾದ ಉಗುರುಗಳಿಂದ ಎಂಟುಪಾದ, ನಾಲ್ಕು ಬಾಲ, ಎರಡು ಪಕ್ಕ ಚಂಚಪುವರ್ಧಮೃಗ ವರ್ಧಗಳಿಂದ। ಶರಭ ರೂಪವನ್ನು ತಾಳಿ। ಮೇಲಿನ ನಾಲ್ಕು ಪಾದಗಳಿಂದ। ನರಸಿಂಹನನ್ನು ಒದ್ದನು। ನರಸಿಂಹನು ಶ್ರೀ ವೀರಭದ್ರನ ಒಂದೇ ಒಂದು ಒಡೆತದಿಂದ ನೆಲಕ್ಕೆ ಬಿದ್ದು ರಕ್ತಕಾರಿಕೊಳ್ಳ ಹತ್ತಿದನು।

ಬಳಿಕ ನರಸಿಂಹನು ಶಿವನನ್ನು ಸ್ತುತಿಸಿದನು। ವೀರಭದ್ರನು ಮೆಚ್ಚಿದನು। ನರಸಿಂಹನನ್ನು ರಕ್ಷಿಸಿದನು। ವರಬೇಡಲು ತಿಳಿಸಿದನು। ನನ್ನ ಚರ್ಮವನು ಶಿವನು ಉಟ್ಟುಕೊಳ್ಳಲಿ। ನನ್ನ ಮುಖವನ್ನು ಕೀರ್ತಿಯು ಮುಖವಾಗಿ ನೀನು ಧರಿಸೆಂದು। ನರಸಿಂಹನು ವೀರಭದ್ರನನ್ನು ಬೇಡಿಕೊಂಡನು। ವೀರಭದ್ರನು ಸಂತುಷ್ಟನಾದನು।

ಹಾಗೆಯೇ ಆಗಲೆಂದು ಶಿವನು ನರಸಿಂಹನ ಚರ್ಮವನ್ನು ಉಟ್ಟುಕೊಂಡನು। ಶ್ರೀ ವೀರಭದ್ರನು ಕೀರ್ತಿಮುಖವನ್ನು ಧರಿಸಿಕೊಂಡನು। ಕಾಳಕೂಟದಂತಿರುವ ಕಾರುಡಗಿಯ ವೀರಭದ್ರನೆ, ನರಕೇಸರಿಯಂತಿರುವ ಕಾರುಡಗಿಯ ವೀರಭದ್ರನೆ, ಕಡೆ। ಕಡೆ।.

## ವ್ಯಾಳಾಸುರನ ಸಂಹಾರ :

ಅಹಹಾ ವೀರ। ಅಹಹಾ ರುದ್ರ। ವ್ಯಾಳಾಸುರನೆಂಬ ರಾಕ್ಷಸನ ಸಂಹಾರವನ್ನು ಹೇಳುವೆನು। ವೀರಭದ್ರನ ಭಕ್ತರೆ ಚಿತ್ತಗೊಟ್ಟು ಕೇಳಿರಿ। ವ್ಯಾಳಾಸುರನೆಂಬ ಒಬ್ಬ ರಾಕ್ಷಸನಿದ್ದನು। ಅವನು ವಾಲ್ಮೀಕಿ ಮುನಿಯ ತಪಸ್ಸಿನಿಂದ ಜನ್ಮ ತಾಳಿದನು।

ಸಿಂಧುಗಿರಿ ಎಂಬ ಪರ್ವತವಿತ್ತು। ಅಲ್ಲಿ ವಾಲ್ಮೀಕಿ ಋಷಿಯು ತಪಸ್ಸು ಮಾಡುತ್ತಿದನು। ಅವನು ಘನಗೋರ ತಪಸ್ಸು ಮಾಡಿದನು। ಅವನ ತಪಸ್ಸಿಗೆ ದೇವಾನುದೇವತೆಗಳೂ ಹೆದರಿದರು। ಅವರೆಲ್ಲರೂ ಎದೆ ಒಡೆದುಕೊಂಡರು। ಅವರ ಬಾಯಿ ಬತ್ತಿತು। ಅವನ ಮೇಲೆ ಹೊಟ್ಟೆಕಿಚ್ಚು ಪಡಹತ್ತಿದರು। ಅವನನ್ನು ಜರಿಯ ಹತ್ತಿದರು। ಅವನ ಮೇಲೆ ಇಲ್ಲದ ಆರೋಪ ಮಾಡಿದರು। ಸಂಕಟಪಟ್ಟರು। ಅವನ ತಪಸ್ಸಿಗೆ ತೊಂದರೆಯನ್ನುಂಟು ಮಾಡಿದರು। ಇದರಿಂದ ವಾಲ್ಮೀಕಿ ಮುನಿಯು ಕುಪಿತನಾದನು। ಅವನ ಕೋಪನೆತ್ತಿಗೇರಿತು। ಕೋಪ ಬೋರ್ಗರೆಯ ಹತ್ತಿತ್ತು। ಅವನ ಆ ಕೋಪ ಸರ್ಪದ ರೂಪ ತಾಳಿತು। ಅವನ ಮುಂದೆ ಬಂದು ನಿಂತಿತು। ತನ್ನ ತಪಸ್ಸನ್ನು ಜರಿದ ದೇವತೆಗಳೆಲ್ಲರನ್ನೂ ನುಂಗಲಿಕ್ಕೆ ಹೋಗೆಂದು ಆ ಸರ್ಪಕ್ಕೆ ಆಜ್ಞಾಪಿಸಿದನು।

ಅಹಹಾ ವೀರ। ಅಹಹಾ ರುದ್ರ। ಆ ಸರ್ಪವು ವ್ಯಾಳಾಸುರನೆಂಬ ರಕ್ಕಸನ ರೂಪವನ್ನು ತಾಳಿತು। ಸರ್ಪ ರೂಪದಿಂದ ವ್ಯಾಳಾಸುರ ರಕ್ಕಸನು ಲೋಕಗಳನ್ನು ನುಂಗತ್ತಾ ನಡೆದನು। ಇದೇ ರೀತಿಯಿಂದ ಲೋಕಗಳಿಗೆಲ್ಲಾ ಬಾಧೆ ಕೊಡಲಾರಂಭಿಸಿದನು।

ಅವನ ಉಪಟಳಕ್ಕೆ ಬೇಸತ್ತ ದೇವಾನುದೇವತೆಗಳು ಬಯಗ್ರಸ್ಥರಾದರು। ತಮ್ಮ ಪ್ರಾಣ ಉಳಿಸಿಕೊಳ್ಳಲು ಶಿವನನ್ನು ಮೊರೆಹೊಕ್ಕರು। ಅವರನ್ನು ರಕ್ಷಿಸಲು ಶಿವನು ಯಡೂರ ಶ್ರೀ ವೀರಭದ್ರನನ್ನು ಕಳಿಸಿದನು।

ಶ್ರೀ ಯಡೂರ ವೀರಭದ್ರನಿಗೂ ವ್ಯಾಳಾಸುರನಿಗೂ ಕಾದಾಟಸುರುವಾಯಿತು। ಈ ಕಾದಾಟದಲ್ಲಿ ವ್ಯಾಳಾಸುರನು ಮೇಘರೂಪ ತಾಳಿದನು। ಶ್ರೀ ವೀರಭದ್ರನು। ಚಂಡ ಮಾರುತ ರೂಪಧರಿಸಿದನು। ನಂತರ ವ್ಯಾಳಾಸುರನು ಪರ್ವತನಾದನು। ಶ್ರೀ ವೀರಭದ್ರನು ಅದಕ್ಕೆ ವಜ್ರನಾದನು। ನಂತರ ರಕ್ಕಸನು ಕೋಣನಾದನು। ವೀರೇಶನು ಹುಲಿಯಾದನು। ನಂತರ ವ್ಯಾಳನು ಆನೆಯಾದನು। ವೀರಭದ್ರನು ಸಿಂಹನಾದನು। ನಂತರ ರಕ್ಕಸನು ವ್ಯಾಳನಾದನು। ವೀರೇಶನು ಬೇರುಂಡನಾದನು। ರಕ್ಕಸನು ಅರಣ್ಯವಾದನು ವೀರೇಶನು ವಡವಾಗ್ನಿ ಯಾದನು।

ಹೀಗೆ ವ್ಯಾಳಾಸೂರ ರಕ್ಕಸ ಶ್ರೀ ಯಡೂರ ವೀರಭದ್ರನನ್ನು ಕೊಲ್ಲಲು ಅನೇಕ ರೂಪಗಳನ್ನು ಧರಿಸಿದನು। ಆದರೆ ರಕ್ಕಸನ ಎಲ್ಲಾ ರೂಪಗಳಿಗೆ ವೀರಭದ್ರನು ಪ್ರತಿ ರೂಪಗಳನ್ನು ಧರಿಸಿ ಅವನನ್ನು ಸಂಹರಿಸಿದನು। ವ್ಯಾಳಾಸೂರನನ್ನು ಸಮೂಲ ನಾಶ ಮಾಡಿದನು।

ವೀರಭದ್ರನು ಇತ್ತ ಈ ಮೊದಲೇ ವ್ಯಾಳಾಸುರನಿಂದ ಮೃತರಾದ। ಎಲ್ಲ ದೇವಾನುದೇವತೆಗಳ ಮೇಲೆ ವಿಭೂತಿಯನ್ನು ಸಿಂಪಡಿಸಿ। ಅವರ ಪ್ರಾಣ ತಿರುಗಿ ಬರುವಂತೆ ಮಾಡಿದನು। ದೇವತೆಗಳನ್ನು ರಕ್ಷಿಸಿ ಸುಖದಲ್ಲಿರುವಂತೆ ಮಾಡಿದನು। ಕಾಲಾಗ್ನಿ ಯಂತೆ ಭುಗಿಲೆನ್ನು ವಯಡೂರ ವೀರಭದ್ರನ ಕಡೆ। ಕಡೆ॥.

## ಮಾತಂಗ ಸುರನ ವಧೆ :

ಆಹಹಾ ವೀರ। ಆಹಹಾ। ರುದ್ರ। ಒಂದಾನೊಂದು ಕಾಲದಲ್ಲಿ ಒಬ್ಬ। ರಾಕ್ಷಸನಿದ್ದನು। ಅವರ ಹೆಸರು ಮಾತಂಗ ಸುರನೆಂದಿತ್ತು। ಅವನು ಶೃಂಗ ಪರ್ವತದಲ್ಲಿ ವಾಸವಾಗಿರುತಿದ್ದನು। ಅವನ ಶರೀರವು ಪುರುಷಾ ಕೃತಿಯಂತೆ ಇತ್ತು। ಮುಖವು ಮಾತ್ರನೆಯಂತಿತ್ತು। ಅವನು ಮಾನವ। ದೇವತೆ ಪಶು ಪಕ್ಷಿಗಳನ್ನು ತಿನ್ನುತಿದ್ದನು।

ಒಂದು ದಿನ ಬ್ರಹಸ್ಪತಿಯು ಯಕ್ಷರ ಯಜ್ಞ ಶಾಲೆಗೆ ಹೋಗುತ್ತಿದ್ದನು। ಆಗ ಅವನ ಮಾತಂಗ ಸುರನ ಕೈಯಲ್ಲಿ ಸಿಕ್ಕನು। ತನ್ನ ಕೊಲ್ಲಬೇಡ। ನೀನು ನನ್ನನ್ನು ಕೊಲ್ಲದಿದ್ದರೆ। ನಿನಗೆ ಎಂದು ದಾಯದಿರುವ ಮದ್ದನ್ನು ಕೊಡುವೆನೆಂದೆ। ಬ್ರಹ್ಮಸ್ಪತಿಯು ಮಾತಂಗ ಸುರನಿಗೆ ತಿಳಿಸಿದನು। ಅದನ್ನು ಮೊದಲು ಕೊಡಲು ಮಾತಂಗಸುರನು ಕೇಳಿದನು। ಆದರಂತೆ ಬ್ರಹಸ್ಪತಿಯು ಮದ್ದನ್ನು ಕೊಟ್ಟನು। ನೀನು ತಪಸ್ಸನ್ನು ಮಾಡಿದಷ್ಟು ಬಲಶಾಲಿಯಾಗುವಿಯೆಂದು ಹೇಳಿಕೊಟ್ಟನು। ಬ್ರಹ್ಮಸ್ಪತಿಯನ್ನು ಸುರಕ್ಷಿತವಾಗಿ ಬಿಟ್ಟನು।

ಆದರಿಂದ ರಕ್ಕಸನು ಆನಂದಿತನಾದನು। ಮದ್ದನ್ನು ಸ್ವೀಕರಿಸಿದನು। ಘೋರ ತಪಸ್ಸು ಮಾಡಿದನು। ಬ್ರಹ್ಮಸ್ಪತಿಯು ಹೇಳಿದಂತೆ ಅನಂತ ಕೋಟಿ ಬಲವನ್ನು ಪಡೆದನು। ಆದರಿಂದ ಅವನ ಸೊಕ್ಕು ಇನ್ನೂ ಹೆಚ್ಚಾಯಿತು। ಬಹಳ ಮದೋನ್ಮತ್ತನಾದನು। ಹೆಚ್ಚಿನ ಗರ್ವಿಷ್ಟನಾದನು। ಗರ್ವದ ಮದವೇರಿತು।

ಗರ್ವದಲ್ಲಿ ಏನೆಲ್ಲವನ್ನು ಮಾಡುವೆವೆಂದು ಹೇಳಹತ್ತಿದನು। ಭೂಲೋಕವನ್ನು ಕೈವಶ ಮಾಡಿಕೊಂಡನು। ಭೂಲೋಕದ ಮಾನವರು ಅವನಿಗೆ ಅಂಜಿದರು। ಅಂಜಿ ಅಡವಿ ಸೇರಿದರು। ಇದರಿಂದ ತನಗೆ ಎಲ್ಲರೂ ಅಂಜುವರೆಂದು ನಂಬಿದನು। ಭೂಲೋಕದಲ್ಲಿ ಅವನಿಗೆ ಯಾರೂ ಸರಿಸಾಟಿ ಇಲ್ಲದವರಾದರು। ಇದರಿಂದ ಅವನು ಕೈಲಾಸಕ್ಕೆ ಮನಸ್ಸಿಟ್ಟನು। ಕೈಲಾಸವನ್ನು ಮುತ್ತಿದನು। ದೇವತೆಗಳೆಲ್ಲಾ ಅಂಜಿದರು ಶಿವನಲ್ಲಿ ಮೊರೆ ಹೊಕ್ಕರು.

ಅಹಹಾ ವೀರ। ಅಹಹಾ ರುದ್ರ। ಶಿವನು ಅವರ ಮನದ ಇಂಗಿತವನ್ನು ಕೇಳಿದನು। ಅಂತಃಕರುಣ ವುಳ್ಳವನಾದನು। ಅವರ ರಕ್ಷಣೆ ಭರವಸೆಕೊಟ್ಟನು। ಮಾತಂಗ ಸುರನ ಸೊಕ್ಕನ್ನು ಮುರಿಯಬೇಕೆಂದು ವಿಚಾರಿಸಿದನು। ತಕ್ಕ ಉಪಾಯವನ್ನು ಯೋಚಿಸಿದನು। ಈ ಕೆಲಸಕ್ಕೆ ವೀರಭದ್ರನೇ ಯೋಗ್ಯನೆಂದು ತಿಳಿದನು।ಹರಿದ್ವಾರದ ಶ್ರೀ ವೀರಭದ್ರನನ್ನು ಕರೆಯಿಸಿದನು। ಅವನಿಗೆ ಮಾತಂಗಸುರನನ್ನು ಕೊಲ್ಲಲು ಆಜ್ಞಾಪಿಸಿದನು।

ವೀರಭದ್ರನು ಭುಗಿಭುಗಿಲ್ ಎಂದು ಆರ್ಭಟಿಸಿದನು। ಭಡಿಭಿಡಿಲ್ ಎಂದು ಆರ್ಭಟಿಸಿದನು। ಭುಗಿ ಧಿಡಿಲ್ ಎಂದು ಚೀತ್ಕಾರನೇ ಚೀರಿದನು। ವೀರಭದ್ರನ ನುಡಿಗೆ ಭೂಮಿಯು ಸೀಳಿತು। ಮಾತಂಗಸುರನ ಎದೆ ನಡುಗಿತು। ಸೂರ್ಯ ದೇವರ ರಥವು ದಿಕ್ಕೆಟ್ಟು ಓಡಿತು। ಆಕಾಶದಲ್ಲಿ ಗುಡುಗು ಸಿಡಿಲು ಒಟ್ಟುಗೂಡಿ ಬಡಿಯುವಂತೆ ಹರಿದ್ವಾರದ ವೀರಭದ್ರನು ಆರ್ಭಟಿಸಿದನು।

ವೀರಾವೇಶದಿಂದ ತುಂಬಿದ ವೀರಭದ್ರನು ಮಾತಂಗಸುರನು ಇದ್ದಲ್ಲಿಗೆ ಜಿಗಿದುಬಂದನು। ರಕ್ಕಸನನ್ನು ಗಜದಂಡದಿಂದ ಇರಿದನು। ಒಂದೇ ಒಂದು ಗಜದಂಡದ ಇರಿತದಿಂದ ಮಾತಂಗಸುರನು ನೆಲಕ್ಕುರುಳಿದನು ಪ್ರಾಣ ಕಳೆದುಕೊಂಡನು।

ಇದನ್ನು ಕೇಳಿ ದೇವತೆಗಳು ಸಂತೋಷಪಟ್ಟರು। ಆಕಾಶದಿಂದ ವೀರಭದ್ರನಿಗೆ ಪುಷ್ಪವೃಷ್ಟಿ ಮಾಡಿದರು। ಜೈಜೈಕಾರ ಮಾಡಿದರು। ಭೂಲೋಕದ ಜನರು ನಿಶ್ಚಿಂತೆಯುಳ್ಳವರಾದರು। ಭದ್ರಕಾಳಿ ವೀರಭದ್ರನಿಗೆ ರನ್ನದ ಆರತಿ ಬೆಳಗಿದಳು। ಕಡೆ। ಕಡೆ॥

## ವೀರಭದ್ರನು ಮಾರುತಿಗೆ ಲಿಂಗಧಾರಣ ಮಾಡಿದ್ದು :

ಅಹಹಾವೀರ। ಅಹಹಾರುದ್ರ। ವೀರಭದ್ರನು ಮಾರುತಿಗೆ ಲಿಂಗಧಾರಣ ಮಾಡಿದ ಪರಿಯನ್ನು ಹೇಳುವೆನು। ಕೇಳಿರಿ। ಮಾರುತಿಯು ಶ್ರೀರಾಮನಿಗೆ ಎಲ್ಲ ರೀತಿಯಿಂದ ಸಹಾಯ ಸಹಕಾರಗಳನ್ನು ಮಾಡಿದನು। ಸೀತಾದೇವಿಯನ್ನು ಹುಡುಕಿ ತಂದುಕೊಟ್ಟನು। ಇನ್ನು ತನಗೆ ಮೋಕ್ಷ ಮಾರ್ಗವನ್ನು ಕಂಡು ಹಿಡಿಯಲು ಶ್ರೀರಾಮನನ್ನು ಕೇಳಿದನು। ತನ್ನಿಂದ ಆ ಮಾರ್ಗ ತೋರಿಸಲು ಶಕ್ಯವಿಲ್ಲೆಂದನು। ನಂತರ ಮಾರುತಿಯು ವೈಶಿಷ್ಟ್ಯ ಋಷಿಯಲ್ಲಿಗೆ ಹೋದನು। ಅಲ್ಲಿ ಋಷಿಯನ್ನು ಕೇಳಿದನು। ಅದು ತನ್ನಿಂದ

ಸಾಧ್ಯವಿಲ್ಲೆಂದನು। ಕೈಲಾಸದಲ್ಲಿರುವ ಕೈಲಾಸಕ್ಕೆ ಹೋಗೆಂದನು। ಅಲ್ಲಿಂದ । ಮಾರುತಿಯು ಕೈಲಾಸಕ್ಕೆ ಜಿಗಿದನು। ಕೈಲಾಸದಲ್ಲಿ ಶಿವನನ್ನು ಕಾಣಲು ಹಾತೊರೆದನು ಶಿವನ ಸಾಮಿಪ್ಯಕ್ಕೆ ಹೋಗಲು ಇಚ್ಛಿಸಿದನು। ದ್ವಾರದಲ್ಲಿದ್ದ ನಂದಿಯು ಅವನನ್ನು ತಡೆದನು। ಲಿಂಗವಿಲ್ಲದವರನ್ನು ಶಿವನ ಸಾನ್ನಿಧ್ಯಕ್ಕೆ ಬಿಡುವುದಿಲ್ಲೆಂದನು.

ಅವನಿಗೆ ಈಗ ಏನು ಮಾಡಬೇಕೆಂದು ತಿಳಿಯಲಿಲ್ಲ। ಶಿವನ ಸಾನಿಧ್ಯಕ್ಕೆ ಹೋಗಬೇಕಾದರೆ ಲಿಂಗಬೇಕೆಂದನು। ಲಿಂಗ ಬೇಕಾದರೆ ಲಿಂಗ ಧಾರಣ ಮಾಡಿಸಿಕೊಳ್ಳಬೇಕೆಂದು ವಿಚಾರಿಸಿದನು। ಶಿವನ ಸಾನಿಧ್ಯವಿಲ್ಲದೆ ಮೋಕ್ಷವಿಲ್ಲ। ಆದಕ್ಕಾಗಿ ಏನು ಮಾಡಬೇಕೆಂದು ದೀರ್ಘವಾಗಿ ವಿಚಾರಿಸಿದನು।

ತನಗೆ ಲಿಂಗಧಾರಣ ಮಾಡುವವರ್ಯಾರು। ಅವರನ್ನು ಹುಡುಕಲು ವಿಚಾರಮಾಡಿಯೇ ಮಾಡಿದನು। ತನ್ನಗಿಂತಲೂ ಸರ್ವ ಶ್ರೇಷ್ಟ ವ್ಯಕ್ತಿಯಿಂದ ಲಿಂಗಧಾರಣ ಮಾಡಿಸಿಕೊಳ್ಳಬೇಕೆಂದು ವಿಚಾರಿಸಿದನು। ತನಗಿಂತ ಸರ್ವವಿಧದಲ್ಲಿ ಸರ್ವಶ್ರೇಷ್ಠ ವ್ಯಕ್ತಿ ಯಾರು। ರಾಚೂಟಗಿರಿ ವೀರಭದ್ರನೇ ಈ ಕಾರ್ಯಕ್ಕೆ ಯೋಗ್ಯನೆಂದು ತಿಳಿದನು।

ಅಹಹಾ ವೀರ। ಅಹಹಾ ರುದ್ರ। ರಾಚೂಟಗಿರಿಯ ಶ್ರೀ ವೀರಭದ್ರನನ್ನು ಕುರಿತು ಘೋರ ತಪಸ್ಸು ಮಾಡಲು ಪ್ರಾರಂಭಿಸಿದನು। ಅನೇಕ ವರ್ಷಗಳು ಕಳೆದವು। ಅನೇಕ ರೀತಿಯಿಂದ ತಪಗೈದನು। ಕೊನೆಗೆ ವೀರಭದ್ರನು ಒಲಿದನು। ಅವನು ಮಾರುತಿಗೆ ಪ್ರತ್ಯಕ್ಷ ರೂಪ ತೋರಿದನು। ಅವನ ಎದುರಿಗೆ ನಿಂತನು। ಮಾರುತಿಯನ್ನು ಕುರಿತು। ವರ ಬೇಡಲು ತಿಳಿಸಿದನು। ನನಗೆ ಲಿಂಗಧಾರಣ ಮಾಡಲು ತಿಳಿಸಿದನು। ವೀರಭದ್ರನು ಲಿಂಗಧಾರಣ ಮಾಡಿದನು। ಲಿಂಗವನ್ನು ಕೊಟ್ಟನು। ಲಿಂಗದೀಕ್ಷೆ ಮಾಡಿದನು। ಶ್ರೀ ವೀರಭದ್ರನಿಂದ ಲಿಂಗ ದೀಕ್ಷೆ ಪಡೆದನು। ಮಾರುತಿಯು ವೀರಭದ್ರನ ಶಿಷ್ಯನಾದನು। ವೀರಭದ್ರನು ಮಾರುತಿಯನ್ನು ತನ್ನ ಶಿಷ್ಯನನ್ನಾಗಿ ಮಾಡಿಕೊಂಡನು।

ಕೆಲವು ಕಾಲ ಮಾರುತಿಯು ದೀಕ್ಷಾ ಗುರುವಾದ ಶ್ರೀ ವೀರಭದ್ರ ದೇವರ ಸೇವೆಯನ್ನು ಮಾಡಿಕೊಂಡಿದ್ದನು। ನಂತರ ವೀರಭದ್ರನ ಅಪ್ಪಣೆಯನ್ನು ಪಡೆದುಕೊಂಡು ಕೈಲಾಸಕ್ಕೆ ಹೊರಟು ಹೋದನು। ಆಗ ಶಿವಲೋಕದ ಹೆಬ್ಬಾಗಿಲಲ್ಲಿದ್ದ ನಂದಿಯು ಅವನನ್ನು ಒಳಗೆ ಬಿಟ್ಟನು। ಮಾರುತಿಯು ಶಿವನ ದರ್ಶನ ಪಡೆದನು। ಶಿವನ ದರ್ಶನ ಪಡೆದು ಮೋಕ್ಷ ಪಡೆದನು।

ರಾಮಾಯಣದಲ್ಲಿ ಮಾರುತಿಯು ಮಂತ್ರಶಕ್ತಿಯಿಂದ ರಾಕ್ಷಸಿಯ ದೇಹದೊಳಗೆ ಹೊಕ್ಕು ಬಂದನೆಂದು ಹೇಳಿದೆ। ಶ್ರೀ ವೀರಭದ್ರನಿಂದ ಲಿಂಗಧಾರಣ ಮಾಡಿಸಿಕೊಂಡು। ಲಿಂಗ ತತ್ವಗಳನ್ನು ಅಳವಡಿಸಿಕೊಂಡು ಮಾರುತಿಯೇ ಇಷ್ಟೊಂದು ಅದ್ಭುತ ಕಾರ್ಯಗಳನ್ನು ಎಸಗಿದನೆಂದ ಮೇಲೆ। ಅವನು ಗುರುವಾದ ಶ್ರೀ ವೀರಭದ್ರನ ಅದ್ಭುತ ಕಾರ್ಯಗಳ ಬಗ್ಗೆ ಹೇಳುವುದೇನಿದೆ। ಬೆಂಗಳೂರ

ಗವಿಪುರದಲ್ಲಿರುವ ವೀರಭದ್ರ ದೇವಾಲಯದಲ್ಲಿ ಲಿಂಗಧಾರಿಯಾದ ಮಾರುತಿಯ ವಿಗ್ರಹವನ್ನು ನಾವು ನೋಡಬಹುದು (ಪುಟ ೮೮, ವೀರೇಶ ಚರಿತೆ - ಡಾ. ಬಿ. ಶಿವಮೂರ್ತಿ ಶಾಸ್ತ್ರಿ - ಶಾರದಾ ಮಂದಿರ ರಾಮಯ್ಯ ರಸ್ತೆ ಮೈಸೂರ ೪ ಪ್ರಕಟಣೆ) ಶಿರೋಮಾಲೆಗಳಿಂದ ಭೀಕರನೆನಿಸಿದ। ಕೆಂಗಣ್ಣುಳ್ಳ। ಕೋರೆದಾಡೆಗಳುಳ್ಳ। ಪ್ರಳಯ ಕೋಲಾಹಳನಾದ ರಾಚೂಟಗಿರಿಯ ವೀರಭದ್ರನೇ। ಕಡೆ ಕಡೆ॥

## ತ್ರಿಕಾಲ ಇಷ್ಟಲಿಂಗ ಪೂಜಾನಿರತ ಹನುಮಂತ :

ಅಹಹಾ ವೀರ। ಅಹಹಾ ರುದ್ರ। ಹನುಮಂತನು ತ್ರಿಕಾಲ ಇಷ್ಟಲಿಂಗ ಪೂಜಾ ನಿರತನಾಗಿದ್ದ ನೆಂಬುದನ್ನು ಕುರಿತು ಹೇಳುವೆನು ಕೇಳಿರಿ। ಹನುಮಂತನು ಶ್ರೀ ವೀರಭದ್ರನಿಂದ ಲಿಂಗದೀಕ್ಷೆಯನ್ನು ತೆಗೆದುಕೊಂಡಿದ್ದನು। ಹನುಮಂತನಿಗೆ ಲಿಂಗಧಾರಣ ಮಾಡಿದ್ದನು। ವೀರಭದ್ರನು ಅವನಿಗೆ ತ್ರಿಕಾಲ ಇಷ್ಟಲಿಂಗ ಪೂಜೆಯನ್ನು ಮಾಡಲು ತಿಳಿಸಿದನು। ದಿನಾಲು ಮೂರು ವೇಳೆ ಶಿವಲಿಂಗವನ್ನು ತಪ್ಪದೇ ಪೂಜಿಸಲು ಉಪದೇಶಿಸಿದ್ದನು। ಹನುಮಂತನು ಶ್ರೀ ವೀರಭದ್ರನಿಂದ ಉಪದೇಶ ಪಡೆದು ಹಾಡುತ್ತಿದ್ದನು। ಅವನನ್ನು ಕುರಿತು ಹಾಡುತ್ತಿದ್ದನು। ಅವನ ಹಾಡಿಗೆ ಶಿವನು ಮೆಚ್ಚಿದ್ದನು।

ಆದ್ದರಿಂದ ಶಿವನು ಮಾರುತಿಯನ್ನು ಕುರಿತು ನಂದಿಯನ್ನು ಏರಿ ನಮಗೆ ರಾಗವನ್ನು ಕೇಳಿಸು ಬಾ ಎಂದನು। ಸದ್ಧರ್ಮ ಗುರು ನಂದೀಶ್ವರನ ಮೇಲೆ ನಾನು ಏರಲು ಸಾಧ್ಯವಿಲ್ಲ ಎಂದು ಹನುಮಂತನು ನುಡಿದನು। ಹಾಗಾದರೆ ಹೇಗೆ ಮಾಡುವದು। ಹೇಗೆ ಹಾಡು ಕೇಳಿಸುವದು ಎಂದು ವಿಚಾರಿಸಿದನು। ಆಗ ತನ್ನ ಭುಜದ ಮೇಲೆ ಶಿವನನ್ನು ಕೂಡ್ರಿಸಿಕೊಂಡು ರಾಗವನ್ನು ಹಾಡುವವರ ಮುಖವನ್ನು ನೋಡಬೇಕೆಂದು ಕಟ್ಟಳೆ ಇರುವಾಗ। ನೀನು ನಮ್ಮ ಕಡೆಗೆ ಮುಖ ಮಾಡಿಕೊಂಡು ಹಾಡು ಎಂದು ಶಿವನು ಹೇಳಿದನು। ಅಷ್ಟರಲ್ಲಿ ಲಿಂಗ ಪೂಜಾ ಸಮಯವಾಗಿದೆಯೆಂದು ಹನುಮಂತ ಹೇಳಿದನು। ಅದಕ್ಕಾಗಿ ನಾನು ಲಿಂಗ ಪೂಜಾ ಮಾಡಲು ಹೋಗುತ್ತೇನೆಂದನು। ಶಿವನು ಹೋಗಬೇಕೆಂದನು।

ಅಹಹಾ ವೀರ। ಅಹಹಾ ರುದ್ರ। ತ್ರಿಕಾಲ ಲಿಂಗ ಪೂಜೆಯನ್ನು ಮಾಡೆಂದು ತನ್ನ ಗುರುವರನಾದ ಶ್ರೀ ವೀರಭದ್ರನ ಆಜ್ಞೆಯಾಗಿದೆ। ಅವನ ಆಜ್ಞೆಯನ್ನು ಯಾರಿಂದಲೂ ಮೀರಲಿಕ್ಕೆ ಸಾಧ್ಯವಿಲ್ಲೆಂದು ಲಿಂಗ ಪೂಜೆಗೆ ಹೋದನು। ಪೂಜಾ ಮಾಡಲಿಕ್ಕೆ ಹೋದಾಗ್ಗೆ ಶಕ್ತಿ ಪೀಠದಿಂದ ಗೋಳಕ ಬಯಲಾಗಿತ್ತು। ಕೂಡಲೇ ಹನುಮಂತನು ತನ್ನ ಗುರುವಾದ ವೀರಭದ್ರನನ್ನು ಕುರಿತು ಹಾಡತೊಡಗಿದನು। ವೀರಭದ್ರನು ಬಂದು ಅವನ ಸಂಕಟವನ್ನು ಕೇಳಿದನು। ಉರಿಗಣ್ಣು ತೆಗೆದು ವೀರಭದ್ರನು ಗೋಳಕವನ್ನು ಹುಡುಕ ಹತ್ತಿದನು। ಆದರ ಉರಿಗಣ್ಣಿನಿಂದ ಬ್ರಹ್ಮಾಂಡ ಲೋಕವೆಲ್ಲ ಸುಡಹತ್ತಿತ್ತು।

ಆಗ ಶಿವನು ಬಂದನು। ಲೋಕವನ್ನು ರಕ್ಷಿಸೆಂದು ವೀರಭದ್ರನಿಗೆ ಹೇಳಿದನು। ಒಬ್ಬ ಶರಣನಿಗೆ ಲೋಕವನ್ನೆಲ್ಲಾ ಸುಡುವರೇ?। ಎಂದು ವೀರಭದ್ರನನ್ನು ಸಂತೈಸಲು ಯತ್ನಿಸಿದನು। ವೀರಭದ್ರನು ಸಾಂತ್ವನಗೊಳ್ಳಲಿಲ್ಲ। ಅದಕ್ಕೆ ಪ್ರತಿಯಾಗಿ। ಅನಂತಕೋಟಿ ಬ್ರಹ್ಮಾಂಡಗಳು ಒಬ್ಬ ಶರಣನು ಒಂದು ಕಡೆ ಕೊಡಲಿಕ್ಕೆ ಸರಿಯಲ್ಲೆಂದು ವೀರಭದ್ರನು ಉತ್ತರಿಸಿದನು। ಶಿವನು ವೀರಭದ್ರನ ಮಾತಿಗೆ ತಲೆದೂಗಿದನು। ಅವನ ಭಕ್ತಿಗೆ ಮೆಚ್ಚಿದನು। ವಿಶ್ವಾಸಕ್ಕೆ ಮಣಿದನು। ಅವನ ಮಾತಿಗೆ ಗೌರವಕೊಟ್ಟನು। ಆದ್ದರಿಂದ ಶಿವಲಿಂಗವನ್ನು ಶಕ್ತಿಪೀಠಕ್ಕೆ ಬರಿಸಿದನು। ಲಿಂಗ ಪೂಜೆಯನ್ನು ಮಾಡೆಂದು ಶಿವನು ಹಾಗೂ ವೀರಭದ್ರನು ಹನುಮಂತನಿಗೆ ತಿಳಿಸಿದರು।

ಹನುಮಂತನು ಸಮುದ್ರ ಮಧ್ಯದಲ್ಲಿ ಕುಳಿತು ಲಿಂಗ ಪೂಜಾ ಮಾಡಿದನು। ಇಪ್ಪತ್ತೈದು ಪದ್ಯಗಳನ್ನು ರಾಗಬದ್ಧವಾಗಿ ಹಾಡಿದನು। ರಾಗ ಇಂಪಾಗಿತ್ತು। ಇಂಪಾದ ರಾಗಕ್ಕೆ ಶಿವನು ಮೆಚ್ಚಿದನು। ಶಿವನ ಕಂಠದಲ್ಲಿದ್ದ ಆದಿಶೇಷನೂ ಗೋಣು ಹಾಕಿದನು। ಶಿರಬಾಗಿದನು। ಹೆಡೆತೆಗೆದು ಆಡಿದನು। ಅಂದಿನಿಂದ ಇಂದಿನವರೆಗೂ ಹಾಡಿನ ಇಂಪಾದ ರಾಗಕ್ಕೆ ನಾಗೇಂದ್ರನು ತನ್ನ ಹೆಡೆತೆಗೆದು ಆಡುವುದನ್ನು ಬಿಟ್ಟಿಲ್ಲ। ಕಡೆ। ಕಡೆ॥ ವೀರಭದ್ರ ಕಡೆ। ಕಡೆ॥

## ಏಣಾದಿನಾಥನಿಗೆ ಕನಸಿನೊಳಗೆ ಶ್ರೀ ವೀರಭದ್ರನು ಖಡ್ಗ ಫಳಕವನ್ನು ಕೊಟ್ಟದ್ದು:

ಅಹಹಾ ವೀರ। ಅಹಹಾ ರುದ್ರ। ಶ್ರೀ ವೀರಭದ್ರನು ಏಣಾದಿನಾಥನಿಗೆ ಕನಸಿನೊಳಗೆ ಖಡ್ಗ ಫಳಕವನ್ನು ಕೊಟ್ಟದ್ದನ್ನು ಹೇಳುವೆನು ಕೇಳಿರಿ ಭಕ್ತಾದಿಗಳೇ। ಭಾರತದಲ್ಲಿ ಚೋಳಪಟ್ಟಣವಿತ್ತು। ಅದು ಬಹಳ ಪ್ರಸಿದ್ಧವಾಗಿತ್ತು। ಈ ಪಟ್ಟಣದೊಳಗೆ ಕರವೂರೆಂಬ ಗ್ರಾಮ ಇತ್ತು। ಈ ಗ್ರಾಮದೊಳಗೆ ಪಗಲೋಳನೆಂಬ ರಾಜನು ಇದ್ದನು। ಅವನು ಬಹಳವಾಗಿ ಜನರಿಗೆ ಬೇಕಾಗಿದ್ದನು। ಅವನ ರಾಜ್ಯದಲ್ಲಿ ಎಲ್ಲಾ ಪ್ರಜೆಗಳು ಸುಖದಿಂದ ಇದ್ದರು। ರಾಜ್ಯದಲ್ಲಿಯ ಎಲ್ಲಾ ಪ್ರಜೆಗಳು ತನ್ನ ಮಕ್ಕಳೆಂದು ಅವರ ಹಿತವನ್ನು ಸಾಧಿಸುತ್ತಿದ್ದನು।

ಒಮ್ಮೆ ಆ ಪಟ್ಟಣಕ್ಕೆ ಏಣಾಧಿನಾಥನೆಂಬ ಶಿವಭಕ್ತನು ಬಂದನು। ಎರಡನೆಯವರನ್ನು ಓಲೈಸಿಗಳಿಸಿ ತಂದರ್ಥವು ಕಷ್ಟವೆಂದು ತಿಳಿದು ಶಿವಧ್ಯಾನದಲ್ಲಿ ಚಿಂತಿಸುತ್ತಿದ್ದನು। ಹೀಗೆ ಚಿಂತಿಸುತ್ತಿರಲು ಒಂದು ದಿನ ಅವನ ಕನಸಿನಲ್ಲಿ ಶ್ರೀ ವೀರಭದ್ರ ದೇವರು ಬಂದು ಒಂದು ಖಡ್ಗವನ್ನು ಕೊಟ್ಟನು। ಅದರಿಂದ ಅವನಿಗೆ ವೀರಶ್ರೀ ಸಂಚಾರವಾಯಿತು। ಹರ್ಷ ಪುಳಕಿತನಾಗಿ ಎಚ್ಚತ್ತನು।

ಶಿವಲಾಂಚನವೆನಿಸಿದ ಭಸ್ಮವಿಲ್ಲದ ಶಸ್ತ್ರ ಜೀವಿಗಳ ಗಂಡನೆಂದು ಸಾರುತ್ತಾ ಇದಿರಾದವರನ್ನು ಗೆದ್ದ। ಹಣವನ್ನು ತಂದು ಜಂಗಮಕ್ಕೆ ನೀಡುತ್ತಿದ್ದನು। ಓರ್ವನು ಹಗಲು ದೀವಿಗೆಯನ್ನು ಹಿಡಿದುಕೊಂಡಿರುವ ಬಿರುದಾಂಕ ಸುಭಟರಿಗೆ ಶರಭ ಬೇರುಂಡನೆಂಬ ಬಿರುದು ಹೊಗಳಿಸಿಕೊಳ್ಳುತ್ತಿದ್ದನು। ಒಂದು ಬಡಿಗೆಯ ತುದಿಗೆ ಏಳು ನೂರು ಗಂಟನ್ನು ಕಟ್ಟಿಸಿ ತನ್ನೊಡನೆ ಕಾದಿ ಗೆದ್ದವರಿಗೆ ಅದನ್ನು ಕೊಡುವೆನು ಎಂದು ಸಾರುತ್ತ ನಡೆದಿದ್ದನು। ಏಣಾಧಿನಾಥನು ಅವನನ್ನು ಕಂಡು ಅವನಿಗೆ ಎದುರಾದನು। ಹೊನ್ನ ಗಂಟನ್ನು ಅವನಿಂದ ಕಿತ್ತುಕೊಂಡು ಬಂದು ಜಂಗಮ ದಾಸೋಹವನ್ನು ಮಾಡಿದನು।

ಪಗಲ್ಬೋಳರಾಯನ ಮುಂದೊಬ್ಬ ಭಟನ ಕಾಳಗದಲ್ಲಿ ಖಡ್ಗ ಪಳಕದಿಂದ ತಲೆಯನ್ನು ಕಡಿದೊಗೆದನು। ಅವನ ಜೀವವನ್ನು ಕೈಲಾಸಕ್ಕೆ ಕಳಿಸಿದನು। ಈ ರೀತಿಯಲ್ಲಿ ಕೆಲವು ದಿನಗಳು ಕಳೆಯಲು। ಒಂದು ದಿನ ಏಣಾಧಿನಾಥನೊಡನೆ ಕಾದಿಗೆಲ್ಲಬೇಕೆಂದು ಅಸೂಹೆಯಿಂದ ರಾಜಗುರು ಎಂಬವನು ಸಾವಿರ ಹೊನ್ನ ಗಂಟ ಕಟ್ಟಿ। ಅದನ್ನು ಬಿದುರಿನ ಗಳಕ್ಕೆ ತುದಿಯಲ್ಲಿ ಕಟ್ಟಿ। ತನ್ನನ್ನು ಕಾದಿಗೆದ್ದವರಿಗೆ ಕೊಡುವೆನೆಂದು ಬರುತ್ತಿದ್ದನು। ಏಣಾದಿನಾಥನು ಖಡ್ಗ ಪಳಕವನ್ನು ವೈರಿಯ ತಲೆಯ ಮೇಲೆ ಹೊಡೆದು ಕೊಂದನು। ಇದರಿಂದ ಪಗಲ್ಬೋಳನು ಮೆಚ್ಚಿದನು। ಅವನು ಅವನನ್ನು ಆನೆಯ ಮೇಲೆ ಕೂಡ್ರಿಸಿ ಮೆರೆಸಿದನು। ಮತ್ತು ಸಾವಿರ ಹೊನ್ನು ಕೊಟ್ಟನು। ಅಲ್ಲದೆ ಅವನಿಗೆ ತಿಂಗಳೊಂದಕ್ಕೆ ಸಾವಿರ ಹೊನ್ನು ಕೊಡಹತ್ತಿದನು।

ಏಣಾದಿನಾಥನು ಜೋಳನಿಂದ ಧನವನ್ನು ತೆಗೆದುಕೊಂಡು। ಜಂಗಮಭಕ್ತಿಯನ್ನು ಮಾಡುತ್ತಾ ನಾಲ್ವತ್ತು ವರ್ಷ ಸುಖದಲ್ಲಿದ್ದನು। ಅಹಹಾ ವೀರ। ಅಹಹಾ ರುದ್ರ। ದ್ರೋಹಿಗಳ ಗಂಡ ಶ್ರೀಶೈಲದ ನಾಗಲೂಟಿ ವೀರಭದ್ರ। ಕಡೆ। ಕಡೆ॥

## ಶಿವನೆನ್ನುತ್ತಾ ಪ್ರಾಣಬಿಟ್ಟ ವಿದಳನೆಂಬ ಅರಸನಿಗೆ ಶ್ರೀವೀರಭದ್ರನು ಗಣ ಪದವಿಯನ್ನು ಕೊಟ್ಟದ್ದು :

ಅಹಹಾ ವೀರ। ಅಹಹಾ ರುದ್ರ। ಶಿವನೆನ್ನುತ್ತಾ ಪ್ರಾಣಬಿಟ್ಟ ವಿದಳನೆಂಬ ಅರಸನಿಗೆ ಶ್ರೀ ವೀರಭದ್ರನು ಗಣಪದವಿಯನ್ನು ಕೊಟ್ಟದ್ದು ಹೇಗೆಂಬುದನ್ನು ಹೇಳುವೆನು ಮನ್ನಣೆವಿತ್ತು ಕೇಳಿರಿ। ಲಿಂಗ ಪುರಾಣದಲ್ಲಿ ಶಿವರಹಸ್ಯದಲ್ಲಿಯ ಶಿವನು ಷಣ್ಮುಖನಿಗೆ ನಿರೂಪಿಸಿದ್ದು ಏನೆಂದರೆ; ಒಂದಾನೊಂದು ಕಾಲದಲ್ಲಿ ವಿದಳನೆಂಬ ಅರಸನು ಇದ್ದನು। ಅವನು ಬುದ್ಧಿವಂತರಾದ ತನ್ನ ಎಲ್ಲಾ ಮಂತ್ರಿಗಳನ್ನು ಬಿಟ್ಟು। ಯೌವ್ವನದ ಕೊಬ್ಬಿನಿಂದ ಜೂಜು। ಪಗಡೆ, ಪರಿಹಾಸ್ಯ, ಕಾಮ ಕಲಹಗೋಷ್ಠಿ ಮುಂತಾದವುಗಳಿಂದ ಕಾಲಕಳೆಯುತ್ತಿದ್ದನು। ಎರಡನೆಯ ಅರಸರು ಅವನ ರಾಜ್ಯವನ್ನು ಅಪಹರಿಸಿಕೊಂಡಿದ್ದರು। ಅದರಿಂದ ವಿದಳನು ಅಡವಿಯಲ್ಲಿ ಇರಹತ್ತಿದ್ದನು। ಕಳ್ಳತನ ಮಾಡಿ ಹೊಟ್ಟೆ ಹೊರೆದುಕೊಳ್ಳುತ್ತಿದ್ದನು। ಆ ನಂತರ ಕೋಟಿಕೋಟಿ ಪ್ರಾಣಿಗಳನ್ನು ಕೊಲ್ಲುತ್ತಾ ತನ್ನ ಬಾಳನ್ನು ಮುಂದುವರೆಸಿದ್ದನು।

ಹೀಗಿರಲು ಒಂದು ದಿನ ವಿದಳನೆಂಬ ಅರಸನಿಗೆ ಮರಣ ಬಂದಿತು। ಮೊದಲಿನ ನಿಯೋಗದವರು ಮತ್ತು ಮಂತ್ರಿಗಳು ಅವನ ಮರಣ ಕಾಲಕ್ಕೆ ಅವನ ಹತ್ತಿರ ಬಂದು 'ನಮಗೇನು ಬುದ್ಧಿ' ಎಂದು ಹೇಳಿದರು। ಅಷ್ಟರಲ್ಲಿಯೇ:'ಅಹರ ಪಹರ'ವೆಂದು ಅನ್ನುತ್ತಾ ಪ್ರಾಣಬಿಟ್ಟನು।

ಅಹಹಾ ವೀರ। ಅಹಹಾ ರುದ್ರ। ಇತ್ತ ಅವನನ್ನು ಯಮದೂತರು ಬಯ್ಯಲು ಬಂದರು। ಆದರೆ 'ಹರಿ' ಎಂದು ಜೀವ ಬಿಟ್ಟಿದ್ದರಿಂದ ಯಮದೂತರು ಆತನನ್ನು ಒಯ್ಯಲು ಅಸಮರ್ಥರಾದರು। ಶ್ರೀ ವೀರಭದ್ರನ ನಿರೂಪದಿಂದ ಜ್ವಾಲಮುಖದ ಗಣೇಶ್ವರರು ಬಂದರು। ಅವರು ತಮ್ಮ ಶೂಲದಿಂದ ಇರಿದು ಯಮದೂತರನ್ನು ಸಂಹರಿಸಿದರು। ಮತ್ತು ಶಿವನೆನ್ನುತ್ತಾ ಪ್ರಾಣಬಿಟ್ಟ ವಿದಳನೆಂಬ ಅರಸನನ್ನು ಸತ್ಕರಿಸಿ ಅವನಿಗೆ ಗಣಪದವಿಯನ್ನು ಕೊಟ್ಟರು। ಬೆಂಗಳೂರಿನ ಪ್ರಳಯ ಕಾಲ ವೀರಭದ್ರ। ಕಡೆ। ಕಡೆ॥

## ಶ್ರೀ ವೀರಭದ್ರ ದೇವರ ಅಪ್ಪಣೆಯಿಂದ ಭೂತಗಳು ಸಿದ್ಧರೆಲ್ಲರನ್ನು ಓಡಿಸಿದ್ದು :

ಅಹಹಾ ವೀರ। ಅಹಹಾ ರುದ್ರ। ಶ್ರೀ ವೀರಭದ್ರ ದೇವರ ಅಪ್ಪಣೆಯಿಂದ ಭೂತಗಳು ಸಿದ್ಧರೆಲ್ಲರನ್ನು ಓಡಿಸಿದ್ದನ್ನು ಹೇಳುವೆನು ಕೇಳಿರಿ। ಉತ್ತರ ದೇಶದಲ್ಲಿ ಪ್ರಸಿದ್ಧವಾದ ಸಿದ್ಧಗಿರಿ ಎಂಬ ಬೆಟ್ಟವಿತ್ತು। ಆ ಬೆಟ್ಟವನೆಲ್ಲಾ ಬೆಳ್ಳಿಯನ್ನಾಗಿ ಮಾಡುವೆನೆಂದು ಮೇಘನಾಥ ಮಯೂರ ಕಂಠ ಮೇಘರೂಪ ಸಾರಂಗ ಬೈರೆರ್ವರ್ಣ ಎಂಬ ಮುಖ್ಯವಾದ ಆರುನೂರಾ ಎಪ್ಪತ್ತು ಮೂರು ಜನ ರಸವಾದ ಸಿದ್ಧರು ಕೂಡಿಟ್ಟರು.

ಅವರೆಲ್ಲರೂ ಋಷಬಾದ್ರಿಯಲ್ಲಿದ್ದ ಸುವರ್ಣವೆಂಬ ಮೂಲಕಿಯನ್ನು ತರುವುದಕ್ಕೆ ದಿಗಂಬರ ಮೊದಲಾದ ವೇಷವನ್ನು ತೊಟ್ಟುಹೋದರು। ಅಲ್ಲಿದ್ದ ಭೂತಗಳು ಆ ಮೂಲಿಕೆಯನ್ನು ತರಗೊಡಲಿಲ್ಲ। ಮತ್ತು ಶ್ರೀ ವೀರಭದ್ರ ದೇವರ ಅಪ್ಪಣೆಯಿಂದ ಸಿದ್ಧರುಗಳನ್ನೆಲ್ಲಾ ಓಡಿಸಿದವು।

ಬಳಿಕ ಅವರು ಬೆಳ್ಳಿಯನ್ನು ಮಾಡಲಾರದೆ ವೈದಿಕರಾದರು। ಅಡ್ಡೆಯನ್ನು ಕಟ್ಟ ಹತ್ತಿದರು। ಮೂಲಿಕೆಯನ್ನು ಹೊತ್ತುಕೊಂಡು ದೇಶ ವಿದೇಶಕ್ಕೆ ತಿರಗಹತ್ತಿದರು। ನಂತರ ಸಿದ್ಧರೆಲ್ಲರೂ ಸೋಗು ಹಾಕಿದರು। ಸೋಗು ಹಾಕಿಕೊಂಡು ಚದುರಿ ಹೋದರು। ಹಂಪೆಯಲ್ಲಿರುವ ಉದ್ದಾನ ವೀರಭದ್ರ ಕಡೆ।ಕಡೆ।

## ಲಕ್ಷ್ಮಿಯಧಿಕ್ಕಾರ :

ಅಹಹಾ ವೀರ। ಅಹಹಾ ರುದ್ರ। ಲಕ್ಷ್ಮಿಯು ಮುತ್ತೈದೆಯಾದಳೆಂಬುದನ್ನು ಹೇಳುವೆನು ಕೇಳಿರಿ। ಭಾಗ್ಯಲಕ್ಷ್ಮಿಯು ಎಂಬಾಕೆಯು ಜಗತ್ತನ್ನು ರಕ್ಷಿಸುವ ವಿಷ್ಣುವಿಗೆ ಪಟ್ಟದ ರಾಣಿಯಾಗಿದ್ದಳು। ಆಕೆಯು ಸದ್ಗುಣ ಸಂಪನ್ನೆಯೆಂದು ಆಕೆಯ ಮೇಲೆ ಸವತಿಯರಾಗಿ ಹದಿನಾರು ಸಾವಿರ ಸ್ತ್ರೀಯರನ್ನು ತಂದು ನಾರಾಯಣನು ಆಳುತ್ತಿದ್ದನು। ಅವರಲ್ಲಿ ರುಕ್ಮಿಣಿ ದೇವಿ ಜಾಂಬುವತಿ ದೇವಿ, ಸತ್ಯವಾಣಿ ದೇವಿ, ಭಾವ ಜಿಜ್ಞಿತೆ ದೇವಿ, ಕಾಳಿಗದಿನಿ ದೇವಿ, ಮಿತ್ರವಿಂದ್ಯಾ ದೇವಿ, ಸತ್ಯಭಾಮೆ ದೇವಿ ಎಂಬ ಈ ಏಳು ಸ್ತ್ರೀಯರೂ ಹದಿನಾರು ಸಾವಿರ ಸ್ತ್ರೀಯರಲ್ಲಿ ವಿಷ್ಣುವಿಗೆ ಅತಿ ಮೆಚ್ಚಿನವರಾಗಿದ್ದರು। ಅಲ್ಲದೆ ಅನೇಕ ಜಾತಿಯ ಸ್ತ್ರೀಯರು ವಿಷ್ಣುವಿಗೆ ವಧುವಾಗಿದ್ದರು।

ಆದರೂ ಲಕ್ಷ್ಮಿ ಒಲಿದವನೆ ಕುಲಜನೆಂಬ ನಾಣ್ಣುಡಿಯನ್ನು ಪ್ರಸಿದ್ಧಪಡಿಸುತಿದ್ದನು। ಆದರೆ ಲಕ್ಷ್ಮಿಯ ಚಂಚಲೆ ಅವಳು ಹಲವು ಪುರುಷರ ಕೂಡ ಬಾಳುವಾಕೆ ಎಂಬುದನ್ನು ಮರೆತು। ಲಕ್ಷ್ಮಿ ಪತಿವ್ರತೆ ಎನ್ನುವರು! ಇದು ವಿಚಿತ್ರ॥

ಹತ್ತು ವೇಳೆ ಹರಿಯು ಸತ್ತನು। ಹತ್ತುಸಾರೆ ಲಕ್ಷ್ಮೀ ಮುತ್ತೈದೆತನ ಕಳೆದುಕೊಂಡಳು। ತಲೆಯನ್ನು ಬೋಳಿಸಿಕೊಂಡಳು। ಬಳೆಯನ್ನು ತೆಗೆದಳು। ಅವಳ ತುರುಬು ಹೋಯಿತೇ।

ಆದರಲ್ಲಿಯೂ ದಕ್ಷನ ಯಜ್ಞ ಭೂಮಿಯಲ್ಲಿ ಹವಿಸ್ಸುತನದೆಂದು ವಿಷ್ಣು ತೆಗೆದುಕೊಳ್ಳುವಾಗ ಶ್ರೀ ವೀರಭದ್ರನು ಅವನನ್ನು ಕೊಲ್ಲಲು ಹೋದಾಗ। ಎರಳೆಯಾಗಿ ಓಡ ಹತ್ತಿದನು। ಶ್ರೀ ವೀರಭದ್ರನು ಸರಳಿನಿಂದ ಹೊಡೆದು ಕೆಡವಿದನು। ಆ ಎರಳೆಯು ಆಗ ಶಿವನನ್ನು ಸ್ತುತಿಸಲು। ಶ್ರೀ ವೀರಭದ್ರನು ವಿಷ್ಣುವಿಗೆ ಪ್ರಾಣದಾನ ಮಾಡಿದನು। ಲಕ್ಷ್ಮಿಯು ಮುತ್ತೈದೆಯಾದಳು। ಅವಳಿಗೆ ಶ್ರೀ ವೀರಭದ್ರನು ಮಾಂಗಲ್ಯವನ್ನು ಕರುಣಿಸಿದನು।

ಈ ರೀತಿಯಾಗಿ ಲಕ್ಷ್ಮಿಯು ಹತ್ತುಸಾರೆ ಭವದಲ್ಲಿ ಹತ್ತು ಸಾರೆ ರಂಡೆ ಮುಂಡೆಯಾಗಿದ್ದಾಳೆ। ಈ ರೀತಿ ಭೂಲೋಕದಲ್ಲಿ ಹತ್ತು ಸಾರೆ ಮುತ್ತೈದೆಯಾಗಿ ಲಕ್ಷ್ಮಿಯ ಬಾಳುವೆಯು ಯಾತರ ಬಾಳುವೆ ಎಂದು ಲೋಕ ಹೀಯಾಳಿಸುತ್ತದೆ। ಶ್ರೀ ರಂಭಾಪ್ರುರ ವೀರ ಸಿಂಹಾಸನ ಮಠ ಚಿಕ್ಕಮಗಳೂರ ಗಂಡುಗಲಿ ವೀರಭದ್ರ। ಕಡೆ। ಕಡೆ॥

## ಸರಸ್ವತಿಯ ಮೂಗು ಕೊಯ್ದದ್ದು :

ಅಹಹಾ ವೀರ। ಅಹಹಾ ರುದ್ರ ಶ್ರೀ ವೀರಭದ್ರನು ಸರಸ್ವತಿಯ ಮೂಗು ಕೊಯ್ದದ್ದನ್ನು ಹೇಳುವೆನು ಕೇಳಿರಿ। ಆದಿಬ್ರಹ್ಮ ಬ್ರಹ್ಮನ ಸ್ವಸ್ತ್ರೀಯಾದ ಸರಸ್ವತಿಯು ಸಕಲ ವಿದ್ಯೆಯನ್ನು ದೇವಾನುದೇವತೆಗಳಿಗೂ ಮತ್ತು ಸುರರಿಗೂ ಕೊಡುವಳೆಂದು ವಿದ್ವಜ್ಜನರು ಕೊಂಡಾಡುತ್ತಿದ್ದರು। ಅವಳು ತನ್ನ ವಿದ್ಯೆಯ ಬಲದಿಂದ ಶಿವನ ಮಹತ್ವವನ್ನು ಕಡೆಗಣಿಸಿರುವಳೆಂದು ನಿಶ್ಚಯಿಸಿದರು।

ಭೂಮಿಯನ್ನು ಕಾಗದವನ್ನಾಗಿ ಮಾಡಿ। ಸುರತರುಗಳನ್ನೇ ಲೆಕ್ಕಣಿಕೆಯನ್ನಾಗಿ ಮಾಡಿ। ಏಳು ಸಮುದ್ರಗಳನ್ನು ಮಸಿಯನ್ನಾಗಿ ಮಾಡಿ। ಬ್ರಹ್ಮ ಕಲ್ಪ ಕೋಟಿಯುಗ। ವರ್ಷಗಳಲ್ಲಿಯೂ ಬರೆದು। ಏನು ಕಾರಣಲಾರದೆ ಹೋದ ಅವಳ ವಿದ್ಯೆಯ ಮಹತ್ವವೇನು। ಎಂದು ಪ್ರಮಥರು ನಗುತ್ತಿದ್ದರು।

ಪುಷ್ಪದತ್ತ ಮೊದಲಾದವರು ಶಿವನನ್ನು ಸ್ತುತಿಸುತ್ತಿರುವಾಗ ಅವನನ್ನು ಧಿಕ್ಕರಿಸಿ, ವಿದ್ಯೆಯ ಮೂರ್ತಿಯೇ ತಾನೆಂದು ಮಹಾ ಗರ್ವದಿಂದ ಸರಸ್ವತಿಯು ದಕ್ಷನ ಯಜ್ಞಕ್ಕೆ ಹೋಗಿದ್ದಳು। ಬುದ್ಧಿ ತಪ್ಪಿದ ಹಾಗೂ ಮೇರೆದಪ್ಪಿದ ಗರ್ವಿಷ್ಠಳಾದ ಅವಳ ಮೂಗನ್ನೇ ಶ್ರೀ ವೀರಭದ್ರನು ಕೊಯ್ದುಬಿಟ್ಟನು।

ಅಹಹಾ ವೀರ। ಅಹಹಾ ರುದ್ರ ತಲೆಯಿಲ್ಲದ ಮೋಟಾದ ಬ್ರಹ್ಮನ ಸತಿ ಮೂಗು ಇಲ್ಲದವಳೆಂದು ಮರುಳು ತಾಂಡುಗಳು ನೋಡಿ ನಗುತ್ತಿದ್ದರು। ಮತ್ತು ಹರ್ಷದಿಂದ ಕುಣಿದಾಡುತ್ತಿದ್ದರು। ತಲೆ ಇಲ್ಲದ ಬ್ರಹ್ಮ ಮೂಗು ಇಲ್ಲದ ಸರಸ್ವತಿ ಎಂದು ಲೋಕ ಪ್ರಸಿದ್ಧವಾಯಿತು। ಮೂಗು ಇಲ್ಲದ ಸರಸ್ವತಿಯ ಬಾಳವೆ ಯಾತರ ಬಾಳುವೆ ಎಂದು ಲೋಕ ಜರಿಯುತ್ತಿತ್ತು। ಛಲದಂಕ ಮಲ್ಲ ಓರಂಗಲ್ಲಿನ ವೀರಭದ್ರ ದೇವರೇ। ಕಡೆ। ಕಡೆ॥

ಮದೋನ್ಮತ್ತದಿಂದ ಗುಡುಗಿದನು। ದಕ್ಷನು ತನ್ನ ಸೈನ್ಯ ಮುಖಂಡರಾದ ಬ್ರಹ್ಮ, ವಿಷ್ಣುಗಳಿಗೆ ಗಳಿಗೆ ಏಳಿರಿ, ಏಳಿರಿ, ಎಚ್ಚರಾಗಿರಿ। ಯುದ್ಧಕ್ಕೆ ಸಿದ್ಧರಾಗಿರಿ। ಬೋಳೆ ಶಂಕರನ ಸೈನಿಕರನ್ನು ಕೊಲ್ಲಿರಿ। ವೀರಭದ್ರನನ್ನು ಶೆರೆ ಹಿಡಿಯಿರಿ। ಎಂದು ತನ್ನ ಸೈನಿಕರನ್ನು ಸೈನ್ಯದ ಮುಖಂಡರನ್ನು ಹುರಿದುಂಬಿಸಿದನು।

ವೀರಭದ್ರನ ಸೈನಿಕರು ದಕ್ಷನ ಯಜ್ಞಶಾಲೆಗೆ ಬಂದರು। ಅಷ್ಟರಲ್ಲಿ ದಕ್ಷನ ಸೈನ್ಯ ಯುದ್ಧಕ್ಕೆ ಸಿದ್ಧವಾಗಿತ್ತು। ಎರಡೂ ಸೈನ್ಯಗಳಿಗೆ ಯುದ್ಧ ಶುರುವಾಯಿತು। ವೀರಭದ್ರನ ಸೈನ್ಯವು ಶರವೇಗದಿಂದ ಬರುತ್ತಿತ್ತು। ವೀರಭದ್ರನ ಸೈನಿಕರು ಚಕ್ರ, ಕೊಡಲಿ, ಗರಗಸ, ಕತ್ತಿ ಮುಂತಾದ ಆಯುಧಗಳಿಂದ ಯುದ್ಧ ಮಾಡಿದರು। ವೀರಭದ್ರನ ಸೈನ್ಯದ ಹೊಡೆತಕ್ಕೆ ದಕ್ಷನ ಸೈನ್ಯವು ಬಿರುಗಾಳಿಯ ಹೊಡೆತಕ್ಕೆ ಮೇಘಗಳು ದಿಕ್ಕೆಟ್ಟು ಓಡಿಹೋಗುವಂತೆ। ಓಡಿ ಹೋಯಿತು। ವೀರಭದ್ರನನ್ನು ನೋಡಿ ವಿಷ್ಣುವು ಗಾಬರಿಯಾದನು। ಬ್ರಹ್ಮನು ಅಂಜಿ ಬೆವತನು। ಇಂದ್ರನು ಎದೆ ಬಡೆದುಕೊಂಡನು। ವರುಣನು ಅತ್ತಿತ್ತ ಓಡಾಡಿದನು। ವಿಷ್ಣುವು ತಪ್ಪಿಸಿಕೊಳ್ಳಲು ಜಿಂಕೆಯ ರೂಪ ಧರಿಸಿದನು। ವೀರಭದ್ರನು ಅದಕ್ಕೆ ಬಾಣಬಿಟ್ಟನು। ಜಿಂಕೆ ಸತ್ತಿತು। ವಿಷ್ಣುವು ತಾನು ಇನ್ನು ಉಳಿಯುವುದಿಲ್ಲೆಂದು ತನ್ನ ನಿಜ ರೂಪ ಧರಿಸಿ ವೀರಭದ್ರನಿಗೆ ಮೊರೆ ಹೊಕ್ಕನು।

ನಂತರ ವೀರಭದ್ರನು ದಕ್ಷನ ಶಿರವನ್ನು ಹಾರಿಸಿದನು। ಆ ಶಿರವು ಹಾರಿ ಅಗ್ನಿಕುಂಡದಲ್ಲಿ ಬಿದ್ದು ಭಸ್ಮವಾಯಿತು। ವೀರಭದ್ರನ ಸೈನಿಕರು ದಕ್ಷನ ಯಜ್ಞಕ್ಕೆ ಬಂದ ಮುನಿಗಳ ಮೀಸೆಗಳನ್ನು ಕಿತ್ತರು। ಗಡ್ಡಗಳಿಗೆ ಉರಿ ಹಚ್ಚಿದರು। ಲಕ್ಷ್ಮಿಯ ತುರುಬು ಕೊಯ್ದರು। ಉಳಿದ ದೇವತಾ ಸ್ತ್ರೀಯರನ್ನು ಸೆರೆ ಹಿಡಿದರು।

ವೀರಭದ್ರನ ವೀರಶ್ರೀಯನ್ನು ನೋಡಿ ನಾರದನು ಆನಂದದಿಂದ ಸಂಗೀತ ಮಾಡಿದನು। ಮರುಳುಗಳು ಕುಣಿದಾಡಿದವು। ಶಾಕಿನಿ, ಡಾಕಿನಿಯರು ನಲಿದರು। ಮೃತ್ಯು ದೇವತೆ ತೃಪ್ತಿ ಹೊಂದಿದಳು। ದೇವಾನುದೇವತೆಗಳ ವಿಜಯಿಯಾದ ವೀರಭದ್ರನ ಮೇಲೆ ಆಕಾಶದಿಂದ ಹೂ ಮಳೆಗರೆದರು। ಭದ್ರಕಾಳಿ ಚಿನ್ನದ ಆರತಿ ಬೆಳಗಿದಳು। ಪರಶಿವ ಪರಮೇಶ್ವರನು ಭಲೆ!ಭಲೆ! ಭಪ್ಪರೆ ವೀರಭದ್ರ ಎಂದು ಬೆನ್ನು ಚಪ್ಪರಿಸಿ, ತನ್ನ ರತ್ನದ ಸಿಂಹಾಸನದಲ್ಲಿ ಕೂಡ್ರಿಸಿದನು। ರೋಣದ ವೀರಭದ್ರ ಕಡೆ। ಕಡೆ॥

## ಶ್ರೀ ವೀರಭದ್ರನಿಂದ ಶಿವನಿಗೆ ಕಾಣಿಕೆ:

ಅಹಹಾ ವೀರ। ಅಹಹಾ ರುದ್ರ। ಶಿವಭಕ್ತ ಸಜ್ಜನರೆ ವೀರಭದ್ರನು। ಶಿವನಿಗೆ ಕಾಣಿಕೆ ಅರ್ಪಿಸಿದ್ದನ್ನು ತಿಳಿಸುವೆನು ಕೇಳಿರಿ। ಶಿವನು ವೀರಭದ್ರನಿಗೆ ದಕ್ಷನ ಯಜ್ಞವನ್ನು ಧ್ವಂಸ ಮಾಡಲು ಅಪ್ಪಣೆ ಮಾಡಿದನು। ದಕ್ಷನ ಯಜ್ಞಕ್ಕೆ ಬಂದವರೆಲ್ಲರನ್ನು ದಮನಗೊಳಿಸಲು ತಿಳಿಸಿದ್ದನು। ಆದರಂತೆ ಶಿವನ ಆಶೀರ್ವಾದದಿಂದ, ಶಿವನ ಮಹಿಮೆಯಿಂದ ದಕ್ಷನ ಯಜ್ಞವನ್ನು ಧ್ವಂಸಗೊಳಿಸಿ, ಅದಕ್ಕೆ ಬಂದವರೆಲ್ಲರನ್ನೂ ದಮನಗೊಳಿಸಿ ಶ್ರೀ ವೀರಭದ್ರನು ಜಯಶೀಲನಾಗಿ ಶಿವನಿಗೆ ಕಾಣಿಕೆಗಳನ್ನು ತಂದನು। ಇದು ದಕ್ಷನ ಮುಕಟ। ಇದನ್ನು ಕಾಣಿಕೆಯಾಗಿ ತಂದಿದ್ದೇನೆ ತೆಗೆದುಕೊಳ್ಳು। ಇದನ್ನು ವಿಷ್ಣುವಿನ ಚಕ್ರ। ಇದನ್ನು ನಿನಗೆ ಕಾಣಿಕೆಯಾಗಿ

ತಂದಿದ್ದೇನೆ। ತೆಗೆದುಕೊಳ್ಳು। ಇದು ಬ್ರಹ್ಮನ ಕಿವಿ। ಇದನ್ನು ನಿನಗೆ ಕಾಣಿಕೆಯಾಗಿ ತಂದಿದ್ದೇನೆ। ತೆಗೆದುಕೊಳ್ಳು। ಇದು ಸರಸ್ವತಿಯ ಮೂಗು। ಇದನ್ನು ನಿನಗೆ ಕಾಣಿಕೆಯಾಗಿ ತಂದಿದ್ದೇನೆ। ತೆಗೆದುಕೊಳ್ಳು। ಇದು ಲಕ್ಷ್ಮಿಯ ತುರುಬು। ಇದನ್ನು ನಿನಗೆ ಕಾಣಿಕೆಯಾಗಿ ತಂದಿದ್ದೇನೆ। ತೆಗೆದುಕೊಳ್ಳು। ಇದು ಇಂದ್ರನ ಕಣ್ಣು । ಇದನ್ನು ನಿನಗೆ ಕಾಣಿಕೆಯಾಗಿ ತಂದಿದ್ದೇನೆ। ತೆಗೆದುಕೊಳ್ಳು। ಇದು ಯಮನ ತೋಳು। ಇದನ್ನು ನಿನಗೆ ಕಾಣಿಕೆಯಾಗಿ ತಂದಿದ್ದೇನೆ। ತೆಗೆದುಕೊಳ್ಳು। ಇದು ಸೂರ್ಯ ದೇವನ ಹಲ್ಲು। ಇದನ್ನು ನಿನಗೆ ಕಾಣಿಕೆಯಾಗಿ ತಂದಿದ್ದೇನೆ। ತೆಗೆದುಕೊಳ್ಳು। ಎಂದು ವೀರಭದ್ರನು ತಾನು ಜಯಹೊಂದಿದ ಕುರುಹಾಗಿ ಜಯದ ವಿವಿಧ ಕಾಣಿಕೆಗಳನ್ನು ತಂದಿದ್ದನು। ಆ ಎಲ್ಲ ಕಾಣಿಕೆಗಳನ್ನು ಒಡಪಿನಂತೆ ಒಡೆ ಒಡೆದು ಒಂದೊಂದನ್ನೇ ಶಿವನ ಪಾದಕ್ಕೆ ಕಾಣಿಕೆಯಾಗಿ ಅರ್ಪಿಸಿದನು। ಹುಬ್ಬಳ್ಳಿಯ ಬಮ್ಮಾಪುರ ಗಲ್ಲಿಯ ವೀರಭದ್ರ ಕಡೆ। ಕಡೆ॥

ವೀರೇಶನು ಶಿವನ ಮುಂದೆ ನಿಂತು ಆರ್ಭಟಿಸಹತ್ತಿದನು। ಶ್ರೀ ವೀರಭದ್ರನು ಬೆಂಕಿಯಂತೆ ಉಜ್ವಲ ದೇಹಧರಿಸಿದ್ದನು। ನಿಡಿದಾದ ಜಡೆಯನ್ನು ಬಿಟ್ಟಿದ್ದನು। ಕೆಂಜೆಡೆಯನ್ನು ಬಿಟ್ಟಿದ್ದನು। ಲಿಂಗಧರಿಸಿದ್ದನು। ಲಿಂಗಾಂಗಿಯಾಗಿದ್ದನು।ಬಂಗಾರದ ಮುಕುಟ ಧರಿಸಿದ್ದನು। ಮಣಿಕುಂಡಲಗಳನ್ನು ಧರಿಸಿದ್ದನು। ಪಂಚ ತೇಜಮುಖವುಳ್ಳವನಾಗಿದ್ದನು। ಸಾವಿರಾರು ಭುಜಗಳುಳ್ಳವನಾಗಿದ್ದನು। ಅನಂತ ಶಸ್ತ್ರಾಸ್ತ್ರಗಳನ್ನು ಧರಿಸಿದ್ದನು। ಕೆಂಡಕಾರುವ ಕಣ್ಣುವುಳ್ಳವನಾಗಿದ್ದನು। ವಿಭಾಷಣಗಳನ್ನು ಹಿಡಿದಿದ್ದನು। ಮೃತ್ಯುರೂಪವಾದ ಶ್ರೀ ವೀರಭದ್ರನು ಶಿವನು ಮುಂದೆ ಬಂದು ನಿಂತನು। ಶ್ರೀ ವೀರಭದ್ರನು ಕಾಲನಾಗಿದ್ದನು। ಪ್ರಳಯಕಾಲದ ಬೆಂಕಿಯಂತಿದ್ದನು। ಉಗ್ರ ರೂಪದ ವಿರಕ ಹೊಯ್ದ ವಿಗ್ರಹದಂತಿದ್ದನು। ಎಲೈ ಶಿವನೇ, ನಿನ್ನ ಅಪ್ಪಣೆ ಏನು ತಿಳಿಸುವಂತವನಾಗು। ಬ್ರಹ್ಮ, ವಿಷ್ಣು, ಅಗ್ನಿ, ಯಮ, ವರುಣ, ಕುಬೇರ ಮೊದಲಾದ ದೇವಾನುದೇವತೆಗಳ ರುಂಡಗಳನ್ನು ಚಂಡಾಡಲೋ? ಭೂಮಿಯನ್ನು ಬಿರಿಯುವಂತೆ ಒದೆಯಲೋ? ಆದಿ ಶೇಷನನ್ನು ಬುಡಮೇಲು ಮಾಡಲೋ? ಸಮುದ್ರದ ನೀರನ್ನೆಲ್ಲಾ ಕುಡಿದು ಬರಿದು ಮಾಡಲೋ? ಗಿರಿ ಪರ್ವತಗಳನ್ನು ಪುಡಿ ಪುಡಿ ಮಾಡಲೋ? ಬ್ರಹ್ಮಾಂಡವನ್ನು ಚಂಡಿನಂತೆ ಹಾರಿಸಲೋ? ನಕ್ಷತ್ರಗಳನ್ನು ಉದುರಿಸಲೋ? ಎಂದು ವೀರಭದ್ರನು ಶಿವನ ಆಜ್ಞೆಯನ್ನು ಕೇಳಿದನು। ಆಗ ಶಿವನು ಶಿವದ್ರೋಹಿಯಾದ ದಕ್ಷನ ಯಜ್ಞವನ್ನು ಹಾರಿಸು। ಬ್ರಹ್ಮ ವಿಷ್ಣು ಮೊದಲಾದವರನ್ನು ಕೊಲ್ಲು। ಶರಣೆಂದು ಬಂದವರನ್ನು ರಕ್ಷಿಸು। ಅಹಂಕಾರಗಳನ್ನು ಕೊಲ್ಲು। ಎಂದು ಹರಸಿದನು।

ಶ್ರೀ ವೀರಭದ್ರನು ತನ್ನ ಸತಿಯಾದ ಭದ್ರಕಾಳಿಯೊಡನೆ ದಕ್ಷಯಾಗಕ್ಕೆ ಹೊರಟನು। ವೀರಭದ್ರನ ಸೈನ್ಯವು ಹೊರಟಿತು। ವೀರಭದ್ರನು ದಕ್ಷನ ಯಜ್ಞವನ್ನು ಧ್ವಂಸ ಮಾಡಿದನು। ಯಜ್ಞಜಕ್ಕೆ ಬಂದವರನ್ನು ಕೊಂದನು। ಶರಣು ಬಂದವರನ್ನು ರಕ್ಷಿಸಿದನು। ಶಿವನ ಆಜ್ಞೆಯಂತೆ ಮಾಡಿದನು। ಶ್ರೀ ಗೊಡಚಿ ವೀರಭದ್ರ। ಕಡೆ। ಕಡೆ॥

## ಶ್ರೀ ವೀರಭದ್ರನ ಸೈನ್ಯ :

ಆಹಹಾ ವೀರ। ಆಹಹಾ ರುದ್ರ। ಶ್ರೀ ವೀರಭದ್ರನು ಶಿವನ ಅಪ್ಪಣೆ ಪಡೆದು ತನ್ನ ಸೈನ್ಯ ಸಮೇತ ದಕ್ಷನ ಯಜ್ಞವನ್ನು ಧ್ವಂಸ ಮಾಡಲು ಹೊರಟಿದ್ದನ್ನು ಕುರಿತು ಹೇಳುವೆನು ಶಿವಭಕ್ತರೆ ಕೇಳಿರಿ। ಅಸಂಖ್ಯಾತ ಸೈನ್ಯವು ವೀರಭದ್ರನ ಮುಂದಾಳುತನದಲ್ಲಿ ದಕ್ಷನ ಯಜ್ಞಶಾಲೆಗೆ ಹೊರಟಿತು। ಅವನ ಸೈನ್ಯಕ್ಕೆ ಭೂಮಿ ನಡುಗಿತು। ಗಿರಿ ಪರ್ವತಗಳು ಸಾಪಾದವು। ವೀರಭದ್ರನ ಸೈನ್ಯವು ಗುಡ್ಡ ಗವ್ವರಗಳನ್ನು ಚಂಡಿನಂತೆ ತೂರುತ್ತಾ ಬರುತ್ತಿತ್ತು। ಬ್ರಹ್ಮಾಂಡವನ್ನು ಕೈಯಿಂದಾಡುವ ಗುಂಡಗಳಂತೆ ಮಾಡುತ್ತಾ ಬರುತ್ತಿತ್ತು। ದಿಗ್ಗಜಗಳ ದಂಪಗಳನ್ನು ಭರ್ಚಿಯಂತೆ ಮಾಡಿಕೊಂಡು ಬರುತ್ತಿತ್ತು। ಯಮನ ಕೋಣದ ಕೋಡುಗಳನ್ನು ಬಾಣಗಳಂತೆ ಮಾಡಿಕೊಂಡು ಬರುತ್ತಿತ್ತು। ಸೂರ್ಯಚಂದ್ರರನ್ನು ತಳಗಳನ್ನಾಗಿ ಮಾಡಿಕೊಂಡು ಬಾರಿಸುತ್ತಾ ಬರುತ್ತಿತ್ತು।

ಶ್ರೀ ವೀರಭದ್ರನ ಸೈನಿಕರು ಕೋಡೆಗಳಿಂದ ಸೂರ್ಯಚಂದ್ರರು ಆಕಾಶದಲ್ಲಿ ಮುಚ್ಚಿ ಮರೆಯಾಗಿದ್ದರು। ಭೂಲೋಕ ಮಬ್ಬು ಮುಸುಕಿ ಕತ್ತಲಾದಂತೆ ತೋರುತ್ತಿತ್ತು। ಆದರೆ ಶೂರ ಸೈನಿಕ ಹಿಡಿದು ಹೊಳೆಯುವದನ್ನು ಗತ್ತಿಗಳಿಂದ, ಮಿಳಗತ್ತಿಗಳಿಂದ, ಬೆಳಕು ಚೆಲ್ಲಿತ್ತು। ಭೂಲೋಕ ಪ್ರಕಾಶಮಾನವಾಗಿತ್ತು।

ಶ್ರೀ ವೀರಭದ್ರನ ಸೈನ್ಯವು ಮಾರ್ಗಮಧ್ಯದಲ್ಲಿ ಬರುತ್ತಿರಲಾಗಿ ಅಲ್ಲಿದ್ದ ರಾಜಾಧಿರಾಜರು ವೀರಭದ್ರನ ಸೈನಿಕರು ಬರುತ್ತಿದ್ದಾರೆ। ದಾರಿಬಿಡಿ। ದಾರಿಬಿಡಿ। ಎಂದು ಎಚ್ಚರಗೊಳಿಸುತ್ತಿದ್ದರು।

ಮಾರ್ಗ ಮಧ್ಯದಲ್ಲಿ ವೀರಭದ್ರನ ಶೂರ ಸೈನಿಕರು ಬರುತ್ತಿದ್ದಾರೆಂದು ನಾರದನು ದಕ್ಷನಿಗೆ ಮೊದಲು ಹೋಗಿ ತಿಳಿಸಿದನು। ದಕ್ಷನು ಆ ಬಡ ಹುಡುಗ ವೀರಭದ್ರನು ನನ್ನ ಅತುಲ ಪರಾಕ್ರಮ ಸೈನ್ಯದ ಮುಂದೆ ಅವನ ಬಡ ಶಿವಗಣಂಗಳ ಸೈನಿಕರು ಏನು ಮಾಡಿಯಾರು? ಎಂದು ಅಹಂಕಾರ ಮದೋನ್ಮತ್ತದಿಂದ ಗುಡುಗಿದನು। ದಕ್ಷನು ತನ್ನ ಸೈನ್ಯದ ಮುಖಂಡರಾದ ಬ್ರಹ್ಮ, ವಿಷ್ಣುಗಳಿಗೆ ಏಳಿರಿ, ಏಳಿರಿ, ಎಚ್ಚರಾಗಿರಿ। ಯುದ್ಧಕ್ಕೆ ಸಿದ್ಧರಾಗಿರಿ। ಬೋಳೆ ಶಂಕರನ ಸೈನಿಕರನ್ನು ಕೊಲ್ಲಿರಿ। ವೀರಭದ್ರನ್ನನು ಶೆರೆ ಹಿಡಿಯಿರಿ। ಎಂದು ತನ್ನ ಸೈನಿಕರ್ನು ಸೈನ್ಯದ ಮುಖಂಡರನ್ನು ಹುರಿದುಂಬಿಸಿದನು।

ವೀರಭದ್ರನ ಸೈನಿಕರು ದಕ್ಷನ ಯಜ್ಞಶಾಲೆಗೆ ಬಂದರು। ಅಷ್ಟರಲ್ಲಿ ದಕ್ಷನ ಸೈನ್ಯ ಯುದ್ಧಕ್ಕೆ ಸಿದ್ಧವಾಗಿತ್ತು। ಎರಡೂ ಸೈನ್ಯಗಳಿಗೆ ಯುದ್ಧ ಶುರುವಾಯಿತು। ವೀರಭದ್ರನ ಸೈನ್ಯವು ಶರವೇಗದಿಂದ ಬರುತ್ತಿತ್ತು। ವೀರಭದ್ರನ ಸೈನಿಕರು। ಚಕ್ರ, ಕೊಡಲಿ, ಗರಗಸ, ಕತ್ತಿ ಮುಂತಾದ ಆಯುಧಗಳಿಂದ ಯುದ್ಧ ಮಾಡಿದರು। ವೀರಭದ್ರನ ಸೈನ್ಯದ ಹೊಡೆತಕ್ಕೆ ದಕ್ಷನ ಸೈನ್ಯವು ಬಿರುಗಾಳಿಯ ಹೊಡೆತಕ್ಕೆ ಮೇಘಗಳು ದಿಕ್ಕೆಟ್ಟು ಓಡಿ ಹೋಗುವಂತೆ। ಓಡಿ ಹೋಯಿತು। ವೀರಭದ್ರನನ್ನು ನೋಡಿ ವಿಷ್ಣುವು ಗಾಬರಿಯಾದನು। ಬ್ರಹ್ಮನು ಅಂಜಿ ಬೆವತನು। ಇಂದ್ರನು ಎದೆ ಬಡೆದುಕೊಂಡನು। ವರುಣನು ಅತ್ತಿತ್ತ ಓಡಾಡಿದನು। ವಿಷ್ಣುವು ತಪ್ಪಿಸಿಕೊಳ್ಳಲು ಜಿಂಕೆಯ ರೂಪ ಧರಿಸಿದನು। ವೀರಭದ್ರನು ಅದಕ್ಕೆ ಬಾಣಬಿಟ್ಟನು। ಜಿಂಕೆ ಸತ್ತಿತು। ವಿಷ್ಣುವು ತಾನು ಇನ್ನು ಉಳಿಯುವುದಿಲ್ಲೆಂದು ತನ್ನ ನಿಜ ರೂಪ ಧರಿಸಿ ವೀರಭದ್ರನಿಗೆ ಮೊರೆ ಹೊಕ್ಕನು।

ನಂತರ ವೀರಭದ್ರನು ದಕ್ಷನ ಶಿರವನ್ನು ಹಾರಿಸಿದನು। ಆ ಶಿರವು ಹಾರಿ ಅಗ್ನಿಕುಂಡದಲ್ಲಿ ಬಿದ್ದು ಭಸ್ಮವಾಯಿತು। ವೀರಭದ್ರನ ಸೈನಿಕರು ದಕ್ಷನ ಯಜ್ಞಕ್ಕೆ ಬಂದ ಮುನಿಗಳ ಮೀಸೆಗಳನ್ನು ಕಿತ್ತರು। ಗಡ್ಡಗಳಿಗೆ ಉರಿ ಹಚ್ಚಿದರು। ಲಕ್ಷ್ಮಿಯ ತುರುಬು ಕೊಯ್ದರು। ಉಳಿದ ದೇವತಾ ಸ್ತ್ರೀಯರನ್ನು ಶೆರೆ ಹಿಡಿದರು।

ವೀರಭದ್ರನ ವೀರಶ್ರೀಯನ್ನು ನೋಡಿ ನಾರದನು ಆನಂದದಿಂದ ಸಂಗೀತ ಮಾಡಿದನು। ಮರುಳುಗಳು ಕುಣಿದಾಡಿದವು। ಶಾಕಿನಿ, ಡಾಕಿನಯರು ನಲಿದರು। ಮೃತ್ಯು ದೇವತೆ ತೃಪ್ತಿ ಹೊಂದಿದಳು। ದೇವಾನುದೇವತೆಗಳ ವಿಜಯಿಯಾದ ವೀರಭದ್ರನ ಮೇಲೆ ಆಕಾಶದಿಂದ ಹೂ ಮಳೆಗರೆದರು। ಭದ್ರಕಾಳಿ ಚಿನ್ನದ ಆರತಿ ಬೆಳಗಿದಳು। ಪರಶಿವ ಪರಮೇಶ್ವರನು ಭಲೆ!ಭಲೆ! ಭಪ್ಪರೆ ವೀರಭದ್ರ ಎಂದು ಬೆನ್ನು ಚಪ್ಪರಿಸಿ, ತನ್ನ ರತ್ನದ ಸಿಂಹಾಸನದಲ್ಲಿ ಕೂಡ್ರಿಸಿದನು। ರೋಣದ ವೀರಭದ್ರ ಕಡೆ। ಕಡೆ॥

## ಶ್ರೀ ವೀರಭದ್ರನಿಂದ ಶಿವನಿಗೆ ಕಾಣಿಕೆ:

ಅಹಹಾ ವೀರ। ಅಹಹಾ ರುದ್ರ। ಶಿವಭಕ್ತ ಸಜ್ಜನರೆ ವೀರಭದ್ರನು। ಶಿವನಿಗೆ ಕಾಣಿಕೆ ಅರ್ಪಿಸಿದ್ದನ್ನು ತಿಳಿಸುವೆನು ಕೇಳಿರಿ। ಶಿವನು ವೀರಭದ್ರನಿಗೆ ದಕ್ಷನ ಯಜ್ಞವನ್ನು ಧ್ವಂಸ ಮಾಡಲು ಅಪ್ಪಣೆ ಮಾಡಿದನು। ದಕ್ಷನ ಯಜ್ಞಕ್ಕೆ ಬಂದವರೆಲ್ಲರನ್ನು ದಮನಗೊಳಿಸಲು ತಿಳಿಸಿದ್ದನು। ಅದರಂತೆ ಶಿವನ ಆಶೀರ್ವಾದದಿಂದ, ಶಿವನ ಮಹಿಮೆಯಿಂದ ದಕ್ಷನ ಯಜ್ಞವನ್ನು ಧ್ವಂಸಗೊಳಿಸಿ, ಆದಕ್ಕೆ ಬಂದವರೆಲ್ಲರನ್ನೂ ದಮನಗೊಳಿಸಿ ಶ್ರೀ ವೀರಭದ್ರನು ಜಯಶೀಲನಾಗಿ ಶಿವನಿಗೆ ಕಾಣಿಕೆಗಳನ್ನು ತಂದನು। ಇದು ದಕ್ಷನ ಮುಕಟ। ಇದನ್ನು ಕಾಣಿಕೆಯಾಗಿ ತಂದಿದ್ದೇನೆ ತೆಗೆದುಕೊಳ್ಳು। ಇದನ್ನು ವಿಷ್ಣುವಿನ ಚಕ್ರ। ಇದನ್ನು ನಿನಗೆ ಕಾಣಿಕೆಯಾಗಿ ತಂದಿದ್ದೇನೆ। ತೆಗೆದುಕೊಳ್ಳು। ಇದು ಬ್ರಹ್ಮನ ಕಿವಿ। ಇದನ್ನು ನಿನಗೆ ಕಾಣಿಕೆಯಾಗಿ ತಂದಿದ್ದೇನೆ। ತೆಗೆದುಕೊಲ್ಲು। ಇದು ಸರಸ್ವತಿಯ ಮೂಗು। ಇದನ್ನು ನಿನಗೆ ಕಾಣಿಕೆಯಾಗಿ ತೆಗೆದುಕೊಳ್ಳು। ಇದು ಸರಸ್ವತಿಯ ಮೂಗು। ಇದನ್ನು ನಿನಗೆ ಕಾಣಿಕೆಯಾಗಿ ತಂದಿದ್ದೇನೆ। ತೆಗೆದುಕೊಳ್ಳು। ಇದು ಲಕ್ಷ್ಮಿಯ ತುರುಬು। ಇದನ್ನು ನಿನಗೆ ಕಾಣಿಕೆಯಾಗಿ ತಂದಿದ್ದೇನೆ। ತೆಗೆದುಕೊಳ್ಳು। ಇದು ಇಂದ್ರನ ಕಣ್ಣು । ಇದನ್ನು ನಿನಗೆ ಕಾಣಿಕೆಯಾಗಿ ತಂದಿದ್ದೇನೆ। ತೆಗೆದುಕೊಳ್ಳು। ಇದು ಯಮನ ತೋಳು। ಇದನ್ನು ನಿನಗೆ ಕಾಣಿಕೆಯಾಗಿ ತಂದಿದ್ದೇನೆ। ತೆಗೆದುಕೊಳ್ಳು। ಇದು ಸೂರ್ಯ ದೇವನ ಹಲ್ಲು। ಇದನ್ನು ನಿನಗೆ ಕಾಣಿಕೆಯಾಗಿ ತಂದಿದ್ದೇನೆ। ತೆಗೆದುಕೊಳ್ಳು। ಎಂದು ವೀರಭದ್ರನು ತಾನು ಜಯಹೊಂದಿದ ಕುರುಹಾಗಿ ಜಯದ ವಿವಿಧ ಕಾಣಿಕೆಗಳನ್ನು ತಂದಿದ್ದನು। ಆ ಎಲ್ಲ ಕಾಣಿಕಗಳನ್ನು ಒಡಪಿನಂತೆ ಒಡೆ ಒಡೆದು ಒಂದೊಂದನ್ನೇ ಶಿವನ ಪಾದಕ್ಕೆ ಕಾಣಿಕೆಯಾಗಿ ಅರ್ಪಿಸಿದನು। ಹುಬ್ಬಳ್ಳಿಯ ಬಮ್ಮಾಪುರ ಗಲ್ಲಿಯ ವೀರಭದ್ರ ಕಡೆ। ಕಡೆ॥

**ಪರಾಕುಗಳು :**

ಕಾಶಿಕಟ್ಟಿದ ಕರವೀರಭದ್ರ ಬಹು ಪರಾಕ ॥
ದೊರೆಯೇ ನಿನಗಾರು ಸರಿಯೇ ಸರಿಯೆಂದವರ ಹಲ್ಲು ಮುರಿಯೇ ಬಹು ಪರಾಕ ॥

ಇಂದಿಗೆ ವರವುಂಟು ನಾಳಿಗೆ ವರವಿಲ್ಲವೆಂಬ ಜಂಗುಳಿ ದೈವದ ಗಂಡ ಬಹು ಪರಾಕ ॥
ಕಾಂಚನಗಿರಿ ಕೈಲಾಸಗಿರಿ ಮಹಾಂತ ಮಲ್ಲಯ್ಯ ಉಘೆ ಉಘೆ॥

ಶ್ರೀಮತ್ಪರಮ ಪಾವನ ಚರಿತ ಚಾರುತರ ಸಮ್ಮೋಹನಾಂಗ। ಮದನ ಮರ್ದನ ಮಾಯಾ ಕೋಲಾಹಲ। ನಿತ್ಯ ನಿರಂಜನ ನಿಗಮಗೋಚರ। ಸಚ್ಚಿದಾನಂದ ನಿತ್ಯ ಪರಿಪೂರ್ಣ। ಹೃದಯ ಜಗದ್ವಿಸ್ತಾರ ಮೂಲಸ್ತಂಭಾಯಮಾನ। ಪರಶಿವನ ಮೋಹದ ಕುಮಾರ ಶ್ರೀ ವೀರಭದ್ರನೇ ಬಹು ಪರಾಕ॥

ನವಭತ್ ಭಜನ ಕಿಲಲವಾಲಗ ಭಜಂತ್ರಿ। ಕರಡಿ ಸಂಬಾಳ ಭೇರಿ ತಮ್ಮಟ। ವಾದ್ಯ। ಅತಿ ರಭಸದಿಂದ ಎದ್ದು ಓಡಿ ಬರುವ ಬೆಟಗೇರಿ ಶ್ರೀ ವೀರಭದ್ರನೇ ಬಹು ಪರಾಕ॥

ಭಪ್ಪರೆ ಭಲೆರೆ ದೇವರಗಂಡ । ಜಗದೊಳಗೆ ಅತಿ ಉದ್ದಂಡ। ಹಾರಿಸಿದನು ದಕ್ಷನ ರುಂಡ। ಇಂತಪ್ಪ ಕೆಂಜೆಡೆಯ ನಂಜುಂಡೇಶ್ವರನ । ಉರಿ ನೇತ್ರದಿಂದ ಉದ್ಭವಿಸಿದ। ಶ್ರೀ ವೀರಭದ್ರನೇ ಬಹು ಪರಾಕ॥

ಸಿಂಹದ ಮೊಲೆಹಾಲು ಸಿಂಹದ ಮರಿಗಲ್ಲದೆ ಸೀಳು ನಾಯಿಗೆ ಸಲ್ಲುವದೇನಯ್ಯ। ನಾಯಿಯ ಮೊಲೆ ಹಾಲು ನಾಯಿಗಲ್ಲದೆ ಪಂಚಾಮೃತಕ್ಕೆ ಸಲ್ಲುವದೇನಯ್ಯ। ಶಿವನ ಪ್ರಸಾದವು ಶಿವಶರಣರಿಗಲ್ಲದೆ ಅನ್ಯರಿಗೆ ಸಲ್ಲುವದೇನಯ್ಯ ಅಖಂಡೇಶ್ವರ।

ಎಚ್ಚರವಿರಬೇಕು। ನಡೆನುಡಿಯಲ್ಲಿ। ಮತ್ಸರವಿರಬೇಕು ।ಭವಸಾಗರದಲ್ಲಿ। ಮನವು ಅಚ್ಚೊತ್ತಿದಂತಿರಬೇಕು ಲಿಂಗದಲ್ಲಿ। ಜನರ ।ಕಣ್ಣಿನಲ್ಲಿ । ಹುಚ್ಚನಾಗಿರಬೇಕು। ಅಂತರಂಗದಲ್ಲಿ ಜ್ಞಾನಿಯಾಗಿರಬೇಕು। ಇಂತಪ್ಪ ಗುಣವುಳ್ಳಾತನೆ ಅಚ್ಚ ಶರಣನೋಡಾ ಅಖಂಡೇಶ್ವರ ।

ಟೆಂಟನಿಸುವ ವೈರಿಯ ಗಂಟಲ ಗಾಣಕ್ಕೆಲ್ಲ। ಪ್ರಚಂಡ ಶ್ರೀಮತ್ ವೀರೇಶ ಶಿಖಾಮಣಿಯಾದ। ಶ್ರೀ ವೀರೇಶ ಸಾಂದ್ರಯತಿ ಕುಲಚಂದ್ರ ಬಹು ಪರಾಕ ।

ಕಡೆಗೀಲಿಲ್ಲದ ಬಂಡಿ ಹೊಡೆಗೆಡೆಯದೆ ಮಾಣ್ಬುದೆ ಕಡಿಗೀಲು ಬಂಡಿಗಾಧಾರ ಕಡುದರ್ಪವನೇರಿದ ಒಡಲೆಂಬ ಬಂಡಿಗೆ ಮೃಢಭಕ್ತರ ನುಡಿಗಡಣವೆ ಕಡೆಗೀಲು ಕಾಣಾ ರಾಮನಾಥ।

ಇಳೆ ನಿಮ್ಮದಾನ ಬೆಳೆ ನಿಮ್ಮದಾನ ಸುಳಿದು ಸೂಸುವ ಗಾಳಿ ನಿಮ್ಮದಾನ ನಿಮ್ಮದಾನವನುಂಡು ಅನ್ಯರ ಹೊಗಳುವ ಕುನ್ನಿಗಳನೇನೆಂಬೆ ಹೇಳೋ ರಾಮನಾಥ।

ಓಂ ನಮೋ ಭಗವತಿ। ಮಹಾಕಾಳಿ। ಸುರಸುಂದರಿ। ಪ್ರಾಣ ನಾಯಕಿ। ಸರ್ವೇಶ್ವರಿ। ಸರ್ವ ಪೀಡಾ ಹರಿಹಾರಿಣಿ। ಪರಮ ನಂದಿ। ಶತೃ ಸಂಹಾರಿಣಿ। ಸರ್ವಗೃಹ ದೋಷನಾಶಿನಿ। ಸರ್ವ ಕಾರ್ಯ ಫಲಕಾರಿಣಿ। ಸರ್ವ ಕಾಲ ರಕ್ಷಿಣಿ। ಓಂ ಪಟ ಪಟ ಸ್ವಃ

ಆಹಾ ವೀರಾ । ಆಹಾ ಶರಭಾ । ಅಸ್ಯ ಶ್ರೀ ವೀರಭದ್ರ ಮಂತ್ರಸ್ಯ।
ಅನುಷ್ಟಪ ಛಂದಃ ಅಘೋರ ಮುಖ ಶ್ರೀ ವೀರಭದ್ರ। ಆದಿಶಕ್ತಿಃ ಕಲಾಗ್ನಿ
ರುದ್ರಾಯ ದುರಿಂತಿ ಕ್ಷಯಾರ್ದಂ ಸರ್ವಭೂತ ಪ್ರೇತ ನಿವಾರಣಾರ್ಥ ಬೋರೆ
ಭಯ ನಿವಾರಣಾಯ ಸರ್ವ ದುಷ್ಟಗ್ರಹ ನಿವಾರಣಾಯ ಓಂ ಪಟ ಪಟ ಸ್ವಃ।

ಓಂ ಅಸ್ಯಶ್ರೀ ವೀರಭದ್ರ ಸ್ತೋತ್ರ ಮಂತ್ರಸ್ಯ ದಕ್ಷ ಕೋಲಾಹಲ।
ಗರ್ಜಿತ। ಮೇಘ ಸಂಹಾರ। ನವಬ್ರಹ್ಮ ಶಿರಚ್ಛೇದನ। ನರಸಿಂಹಾವತಾರ।
ಕಲಾಗ್ನಿ ನೇತ್ರ। ಕಪಟ ನಾಟಕ ಸೂತ್ರ। ರೌದ್ರಾವತಾರ। ಕಲಾಗ್ನಿ ಭೈರವ
ಬ್ರಹ್ಮ ಕುಷಿಧರ ಕಾಲ ಕರ್ಪೂರ ಸಂಹಾರ। ಸರಸ್ವತಿ ನಾಸಿಕಚ್ಛೇದನ ಶ್ರೀ
ಪಾರ್ವತಿ ರೂಪ ಕಡೆ ಕಡೆ .... (ಶಂಕ್ರಪ್ಪ ಬಸಪ್ಪ ತೊಂಡಿಹಾಳ, ೨೦೦೦,೪೦).

ಅಧ್ಯಾಯ - ೮

# ಆಧುನಿಕ ಜಗತ್ತು ಮತ್ತು ಗುಗ್ಗಳ ಆಚರಣೆ

ನಮ್ಮ ಸಮಾಜದಲ್ಲಿ ಆಚರಣೆಯಲ್ಲಿರುವ ನಾನಾ ಸಂಸ್ಕಾರಗಳು, ಹಬ್ಬಗಳು, ವಿಧಿ-ವಿಧಾನಗಳು ಹೇಗೆ ಹುಟ್ಟಿಕೊಂಡವು ಎಂಬುದನ್ನು ತಿಳಿಯಬೇಕಾದರೆ ನಾವು ಜಾನಪದವನ್ನು ಮೊರೆಹೋಗಬೇಕು. ಏಕೆಂದರೆ ಜನಪದರು ತಮ್ಮ ಎಲ್ಲಾ ಆಚರಣೆಗಳನ್ನು, ನಂಬಿಕೆಗಳನ್ನು ಬಿಟ್ಟು ಬಿಡದ ಹಾಗೆ ಆಚರಿಸುತ್ತಿದ್ದಾರೆ. ಕಾಲ ಕ್ರಮೇಣ ಈ ಆಚರಣೆಗಳು ಕುಂಠಿತವಾಗುತ್ತಾ ಬಂದವು.

ಆಧುನಿಕ ಜಗತ್ತು ವಿಸ್ತಾರವಾದಂತೆಲ್ಲಾ ಹೊಸ ಹೊಸ ಅವಿಷ್ಕಾರಗಳು ನಡೆಯುತ್ತಲೇ ಇವೆ. ಈ ಆಧುನಿಕ ಪ್ರಕ್ರಿಯೆ ನಿರಂತರವಾಗಿ ನಡೆಯುತ್ತಿರುತ್ತದೆ. ಅದು ಜನಪದರ ಮೇಲೆ ಗಾಢ ಪರಿಣಾಮ ಬೀರುತ್ತಾ ಹೋಗುತ್ತದೆ. ಆಧುನಿಕ ಜೀವನ ವಿಧಿ-ವಿಧಾನಗಳಿಂದಾಗಿ ಮಾನವೀಯತೆ, ಅಹಿಂಸೆ, ಅನುಕಂಪ, ಪ್ರೀತಿ-ವಾತ್ಸಲ್ಯ, ಕೌಟುಂಬಿಕ ಸಂಬಂಧಗಳ ಮೌಲ್ಯವೆಲ್ಲ ಕುಸಿಯುತ್ತಿದ್ದು, ಅವಿಭಕ್ತ ಕುಟುಂಬಗಳೆಲ್ಲಾ ವಿಭಕ್ತ ಕುಟುಂಬಗಳಾಗಿ ಪರಿವರ್ತನೆಯಾಗುತ್ತಿವೆ.

ಸಾಮಾಜಿಕ ಜನಜೀವನ ಬದಲಾವಣೆಯ ಜೊತೆಜೊತೆಗೆ, ನೂರಾರು ವರ್ಷಗಳಿಂದ ರೂಢಿಸಿ ಕೊಂಡು ಬಂದಿರುವಂತಹ ಸಂಪ್ರದಾಯ, ನಂಬಿಕೆ, ಜನಪದ ಕಲೆಗಳು ಮುಂದುವರಿಕೆಯ ಒಂದು ಭಾಗವಾಗಿ ನಡೆಯುತ್ತಿವೆ. ಕೆಲವು ನಂಬಿಕೆ, ಆಚರಣೆ ಮತ್ತು ಸಂಪ್ರದಾಯಗಳು ತಮ್ಮ ಜೀವಂತಿಕೆಯನ್ನು ಪಡೆದಿದ್ದವು. ಆದರೆ ಇಂದು ಆಧುನಿಕತೆಯ ಗಾಳಿ ಎಲ್ಲ ಸಮುದಾಯಗಳ ಮೇಲೆ ತನ್ನ ಪ್ರಭಾವವನ್ನು ಬೀರುತ್ತಿರುತ್ತವೆ. ಆದರಿಂದ ಪ್ರತಿಯೊಂದು ಸಮುದಾಯ ರೂಢಿಸಿಕೊಂಡು ಬಂದಿರುವ ಕಲೆಗಳು ಕೂಡ ಮಾರಕವಾಗಿ ಪರಿಣಮಿಸುತ್ತದೆ. ಸಾಮಾನ್ಯವಾಗಿ ಎಲ್ಲ ಜನಪದ ಕಲೆ ಕೂಡ ಇಂದು ನಿರ್ನಾಮದ ಹಂತವನ್ನು ತಲುಪಿವೆ. ಒಂದು ಸಮುದಾಯ ರೂಢಿಸಿಕೊಂಡು ಬಂದಿರುವ ಕಲೆಯನ್ನು ಉಳಿಸಿಕೊಳ್ಳಲು ಆಗದಂತೆ ಪರಿಸ್ಥಿತಿ ಬಂದೊದಗಿದೆ. ಹಬ್ಬ ಹರಿದಿನಗಳು ಕೂಡ ಇಂದು ನಾಮಕಾವಸ್ಥೆಗೆ ಮಾತ್ರ ಎಂಬ ಭಾವನೆ ಜನಪದರಿಗೆ ತಲೆ ದೋರಿದೆ.

ಈಗಿನ ಯುವ ಪೀಳಿಗೆ ಯಾವುದೇ ತೊಂದರೆಯಾಗದಂತೆ ಹೆಚ್ಚು ಸಮಯವನ್ನು ವ್ಯಯ ಮಾಡದೆ, ಮತ್ತು ದುಂದುವೆಚ್ಚಕ್ಕೆ ಅವಕಾಶ ಮಾಡದೆ, ನೆಪ ಮಾತ್ರಕ್ಕೆ ಮದುವೆಗಳು ಮತ್ತು ಆಚರಣೆಗಳನ್ನು ಮಾಡುತ್ತಾರೆ. ಹಿಂದಿನ ಕಾಲದಲ್ಲಿ ಗುಗ್ಗಳ ಆಚರಣೆಯನ್ನು ಮಾಡಬೇಕು ಎಂದರೆ ಸುತ್ತಮುತ್ತಲಿನ ಏಳು ಹಳ್ಳಿಗೂ ಹೋಗುತ್ತಾರೆ. ಗುಗ್ಗಳ ಮದುವೆ ಮಾಡುವಂತ ಮನೆಯ ಹಿರಿಯರು ಹಳ್ಳಿಗಳಿಗೆ ಹೋಗುವರು. ಅಲ್ಲಿ ಇಂತಹ ದಿನದಂದು ನಮ್ಮ ಮನೆಯಲ್ಲಿ ಗುಗ್ಗಳ ಮದುವೆ ಇದೆ. ಕುಟುಂಬ

ಪರಿವಾರ ಸಮೇತರಾಗಿ ಮೂರು ದಿನ ನಮ್ಮ ಮನೆಯಲ್ಲಿ ನಡೆಯುವ ಕಾರ್ಯಕಲಾಪಗಳ ಬಗ್ಗೆ ಮುತುವರ್ಜಿ ವಹಿಸಿ, ಇದು ನಿಮ್ಮ ಮನೆ ಎಂದು ಭಾವಿಸಿ ಎಂದು ಕರೆಯುವ ಪದ್ಧತಿ ಇತ್ತು. ಆದರೆ ಇತ್ತೀಚಿಗೆ ಬದುಕು ಕ್ಲಿಷ್ಟವಾದಂತೆ ಮತ್ತು ಅನುಕೂಲತೆಗಳು ಹೆಚ್ಚಾದಂತೆ ಕರೆಯುವ ಪದ್ಧತಿಯಲ್ಲೂ ಅನೇಕ ಸ್ಥಿತ್ಯಂತರಗಳಾಗಿವೆ. ಈ ಹಿನ್ನೆಲೆಯಲ್ಲಿ ಅನೇಕ ಆಚರಣೆಗಳು ಗೌಣವಾಗುತ್ತಿವೆ. ಕೆಲವು ಕಡೆ ದೈವದವರಿಗೂ ಕೂಡ ಊಟೋಪಚಾರದ ವ್ಯವಸ್ಥೆಯನ್ನು ಮಾಡದೇ, ದೈವಕ್ಕೆ ನಿಗದಿಪಡಿಸಿದ ಹಣವನ್ನು ಕಟ್ಟುವವರೂ ಇದ್ದಾರೆ. ಏಕೆಂದರೆ ಇತ್ತೀಚಿನ ಪೀಳಿಗೆ ಶ್ರಮಪಡದೇ ಕಾರ್ಯವನ್ನು ನೆರವೇರಿಸಬೇಕೆಂದು ಪರಿಪಾಠ ರೂಢಿಸಿಕೊಳ್ಳುತ್ತಿವೆ. ಹಾಗೂ ಇತ್ತೀಚಿನ ಬೆಳವಣಿಗೆಯಲ್ಲಿ ಸಮಯಕ್ಕೆ ಮಹತ್ವವಿರುವುದರಿಂದ ಹಾಗೂ ಸೌಲಭ್ಯಗಳು ಹೆಚ್ಚಾಗಿರುವುದರಿಂದ ಮೂರು ದಿನಗಟ್ಟಲೆ ನಡೆಯುವ ಮದುವೆ ಕಾರ್ಯಗಳು ಮೂರು ತಾಸಿಗೆ ಬಂದಿರುವುದು ಇಂದಿನ ಬೆಳವಣಿಗೆ. ಇಷ್ಟೇ ಅಲ್ಲದೆ ನಗರ ಮತ್ತು ಮಹಾ ನಗರಗಳಲ್ಲಿ ಅಂತರ್ಜಾತಿ ವಿವಾಹಗಳು ಹೆಚ್ಚಾಗುತ್ತಿವೆ. ಇದರಿಂದ ಗುಗ್ಗಳದಂತಹ ಆಚರಣೆಗಳು ಕಡಿಮೆಗೊಳ್ಳುತ್ತಿವೆ. ಹಳ್ಳಿಗಳಲ್ಲಿ ಅಂತರ್ಜಾತಿ ವಿವಾಹಗಳು ಆಗುವುದೇ ಇಲ್ಲವೆಂದಲ್ಲ. ಆದರೆ ಸಂಖ್ಯೆಗೆ ಹೋಲಿಸಿದಾಗ ಹಳ್ಳಿಗಳಲ್ಲಿ ಕಡಿಮೆ ಎಂದು ಹೇಳಬಹುದಷ್ಟೆ. ಒಂದೇ ಜಾತಿಯ ಎರಡು ಗಂಡು ಹೆಣ್ಣುಗಳು ಪರಸ್ಪರ ಪ್ರೇಮಿಸಿ ಮದುವೆಯಾಗುವಲ್ಲಿ ವಿರೋಧಗಳೇನಾದರೂ ಬರದಿದ್ದಲ್ಲಿ ಗಂಡಿನ ಕಡೆಯ ಸಂಪ್ರದಾಯ ದಂತೆ ಮದುವೆಗಳಾಗುತ್ತವೆ. ಆಗ ನಡೆದುಕೊಂಡ ಬಂದ ಆಚರಣೆಗಳನ್ನು ನಡೆಸುವುದುಂಟು. ಒಮ್ಮೊಮ್ಮೆ ಇಂತಹ ವಿವಾಹಗಳು ಹೆಚ್ಚಾಗಿ ದೇವಸ್ಥಾನದಲ್ಲಿ ಸರಳವಾಗಿ ನಡೆಯುತ್ತವೆ. ಆಗ ಗುಗ್ಗಳದಂತಹ ಆಚರಣೆಗಳು ಸ್ಥಗಿತಗೊಳ್ಳುತ್ತವೆ. ಅದೇನೇ ಇದ್ದರೂ ಇತ್ತೀಚಿಗೆ ಗುಗ್ಗಳದಂತಹ ಆಚರಣೆಗಳು ಅನೇಕ ಕಾರಣಗಳಿಗಾಗಿ ಕುಂಠಿತವಾಗುತ್ತದೆ.

ಬರಗಾಲದ ಪರಿಸ್ಥಿತಿಯಲ್ಲಿ ಗುಗ್ಗಳ ಆಚರಣೆಗೆ ಕಷ್ಟ. ಜೊತೆಗೆ ಬಂದಿರುವಂತಹ ಪುರವಂತರು ಕೇಳುವಂತಹ ಹಣದ ಕೊರತೆ, ಗುಗ್ಗಳಕ್ಕೆ ಬೇಕಾಗುವ ಸಾಮಾನುಗಳನ್ನು ತರಲಾರದೆ ಎಲ್ಲ ನೀನೇ ಕಾಪಾಡಬೇಕು ತಂದೆ ಎಂದು ಕೈ ಮುಗಿದು, ಸರಳವಾದ ಮದುವೆಯನ್ನು ಸಹ ಮಾಡುತ್ತಾರೆ. ನಂತರ ಇವತ್ತು ಹೊಟ್ಟೆಪಾಡಿಗಾಗಿ ದೊಡ್ಡ ದೊಡ್ಡ ಪಟ್ಟಣಗಳಿಗೆ ಹೋಗುವರು; ಅಲ್ಲಿ ಗುಗ್ಗಳವನ್ನು ಆಚರಿಸಲು ಸಾಧ್ಯವಿಲ್ಲ. ಈಗಿನ ವಿದ್ಯಾಭ್ಯಾಸದ ಸಂದರ್ಭದಲ್ಲಿ ಕಲಿತಂತಹ ವಿದ್ಯಾವಂತರು, ಅವರಿಗೆ ಎಷ್ಟೇ ಸಮಾಳ ಸೋನಾಯಿ ಇಂತಹ ಕೆಲವು ವಾದ್ಯಗಳನ್ನು ಬಾರಿಸಲು ಬಂದರೂ ತುಂಬಾ ಸಂಕೋಚಿತರಾಗುತ್ತಾರೆ. ಈ ಎಲ್ಲಾ ಕಾರಣದಿಂದ ಈ ಗುಗ್ಗಳದ ಆಚರಣೆಯು ಆಧುನಿಕ ಜಗತ್ತಿನಲ್ಲಿ ಕುಂಠಿತವಾಗುತ್ತಾ ಬಂದಿದೆ ಎಂದು ಹೇಳಬಹುದು. ನಾಗರೀಕತೆಯತ್ತ ನಾಗಾಲೋಟದ ಕಡೆಗೆ ಓಡುತ್ತಿರುವ ಈ ಜಗತ್ತಿಗೆ ಕಾಲಕ್ಕೆತಕ್ಕಂತೆ ಬದಲಾವಣೆ ಸಹಜ. ಆಧುನೀಕರಣ, ನಗರೀಕರಣದಂತಹ ಪರಿಸ್ಥಿತಿಯಲ್ಲಿ ಹುಟ್ಟು, ಮದುವೆ ಎಲ್ಲವೂ ಈಗಿನ ಮಾನವನಿಗೆ ಸಾಮಾನ್ಯವಾದ ಕೆಲಸವೆಂದು ಹೇಳುವರು. ಕಾರಣ ವೈಜ್ಞಾನಿಕ ಯುಗದ ಮಾನವ ಎಲ್ಲಾ ವಿಷಯದಲ್ಲಿಯು ಹಿಂದೆ ಮುಂದೆ ನೋಡಿ ನಡೆಯಬೇಕು. ಆದರೆ ಹಿಂದಿನ ಜನಪದರು ಅಥವಾ ಕೆಲವು ಹಳ್ಳಿಗಾಡಿನ ಜನರು ಈಗಲೂ ಅವರ ಪದ್ಧತಿಯನ್ನು ಮುಂದುವರಿಸಿಕೊಂಡು ಹೊರಟಿದ್ದಾರೆ. ಆದರೆ ಕಾಲಕ್ರಮೇಣ ಅವುಗಳು ನಶಿಸುತ್ತವೇನೋ ಎಂಬಂತಹ ವಾತಾವರಣ ನಿರ್ಮಾಣವಾಗುತ್ತಿದೆ.

ಇಂತಹ ಪರಿಸ್ಥಿತಿಯಲ್ಲಿ ಆಚರಣೆಗಳು ಹಿಂದೆ ಇದ್ದಂತೆ ಈಗ ಇಲ್ಲ ಹಾಗೂ ಈಗ ಇರುವ ಆಚರಣೆ ಮುಂದೆ ಇರಲಿಕ್ಕಿಲ್ಲ. ಅವುಗಳಲ್ಲೂ ಚಿಕ್ಕಪುಟ್ಟ ಮಾರ್ಪಾಟುಗಳಾಗುತ್ತಾ ಹೋಗುತ್ತವೆ. ಅದೇನೇ ಇದ್ದರೂ ನಮ್ಮ ಆಚರಣೆಗಳು ನಶಿಸಬಾರದು. ಈ ಹಿನ್ನೆಲೆಯಲ್ಲಿ ಅವುಗಳನ್ನು ಪೋಷಿಸಿಕೊಂಡು ಹೋಗುವಲ್ಲಿ ಇಂದಿನ ನಮ್ಮ ಜವಾಬ್ದಾರಿ ಹೆಚ್ಚಾಗಿದೆ.

ಕೆಲವು ಕಡೆ ವೀರಭದ್ರನ ಭಕ್ತರು ಗುಗ್ಗಳ ಕೊಡಗಳನ್ನು ಪುಟ ಮಾಡಿ ಮದುವೆ ಮಾಡಲು ಆಗುವುದಿಲ್ಲ. ಆಗ ವೀರಭದ್ರ ದೇವರ ಹಲಗೆಗಳನ್ನು ಕೆಲವರ ಮನೆಗಳಿಂದ ತರಿಸುತ್ತಾರೆ. ತಮ್ಮ ಮನೆಯ ವೀರಭದ್ರ ದೇವರನ್ನು ಮತ್ತು ಶಸ್ತ್ರಗಳನ್ನು ಕೆಲವು ವೀರಭದ್ರನ ಸಲಕರಣೆಗಳನ್ನು ತೆಗೆದುಕೊಂಡು ಗಂಗೆ ಪೂಜೆಗೆ ಹೋಗುತ್ತಾರೆ. ಅಲ್ಲಿ ತಾಮ್ರದ ಕೊಡದಲ್ಲಿ ನೀರು ತುಂಬುತ್ತಾರೆ. ಅದಕ್ಕೆ ಎಲೆ,ಕಾಯಿ ಇಡುತ್ತಾರೆ. ಅದನ್ನು ಪೂಜೆ ಮಾಡುವರು. ಮತ್ತು ಅಲ್ಲಿ ತೆಗೆದುಕೊಂಡ ಹೋಗಿರುವಂತಹ ದೇವರುಗಳನ್ನು ಜಂಗಮರ ಪಾದೋದಕದಿಂದ ಶುದ್ಧಗೊಳಿಸುತ್ತಾರೆ. ನಂತರ ಕೊಡವನ್ನು ಮನೆಯ ಹಿರಿಯ ಸೊಸೆಯ ಮೇಲೆ ಹೊರಿಸಿಕೊಂಡು ದೇವಸ್ಥಾನದಿಂದ ಮನೆಗೆ ಬರುತ್ತಾರೆ. ಮೊದಲೇ ಗಂಗೆ ಪೂಜೆಯಲ್ಲಿಯ ಮದುಮಕ್ಕಳಿಗೆ ಶಸ್ತ್ರವನ್ನು ಹಾಕುತ್ತಾರೆ. ಇಂತಹ ಆಚರಣೆಗೆ ಗಂಗೆ ಕಳಸ ಎಂದು ಕರೆಯುವರು. ಇಲ್ಲಿಯೂ ಕೂಡ ಶಸ್ತ್ರ ಪವಾಡಗಳು ನಡೆಯುತ್ತವೆ. ಪುರವಂತರೂ ಕೂಡ ಬಂದಿರುತ್ತಾರೆ. ಇಲ್ಲಿಯೂ ಕೂಡ ಪುರವಂತರ ಪಾತ್ರ ಬಹುಮುಖ್ಯವಾಗಿರುತ್ತದೆ.

ಅಧ್ಯಾಯ - ೯

# ಸಮಾರೋಪ

ಇಂಡಿಯಾದ ಈ ನೆಲ ತನ್ನ ಸಾವಿರಾರು ವರ್ಷಗಳ ಚರಿತ್ರೆಯಲ್ಲಿ ಹಲವು ಜನಾಂಗಗಳ, ಸಂಸ್ಕೃತಿಗಳ ಧರ್ಮ, ಪಂಥಗಳ ಉದಯಕ್ಕೆ ಕಾರಣವಾಗಿದೆ. ಹಾಗೆಯೇ ಸಂಘರ್ಷ ಮತ್ತು ಪತನಗಳ ಪ್ರಕ್ರಿಯೆಯಲ್ಲಿ ಉದಯಿಸಿದ ಹೊಸ ಮಾರ್ಗವೊಂದನ್ನು ಒಪ್ಪಿಕೊಳ್ಳುತ್ತಾ ಬಂದಿವೆ. ಒಪ್ಪಿಕೊಂಡ ಮಾರ್ಗವು ಹಲವು ಮಾರ್ಗಗಳನ್ನು ಪೋಷಿಸುತ್ತಾ ಬಂದಿದೆ. ಆ ಮೂಲಕ ಇಡೀ ಇಂಡಿಯಾ ಅತ್ಯಂತ ಸಂಕೀರ್ಣವಾದ ಸಾಂಸ್ಕೃತಿಕ ನಾಡಾಗುವಂತೆ, ಹಲವು ಪ್ರಕ್ರಿಯೆಗಳಿಗೆ ಒಳಗಾಗಿದೆ.

ಇಂತಹ ಸಾಂಸ್ಕೃತಿಕ ಭಾಗವಾಗಿರುವ ವೀರಭದ್ರನ ಸಂಪ್ರದಾಯ ಬಹುಮುಖ್ಯವಾದುದಾಗಿದೆ. ವಲಸೆ ಬಂದವರೆಂದು ಹೇಳಲಾದ ಆರ್ಯರು, ಇದೇ ನೆಲದ ಮೂಲ ನಿವಾಸಿಗಳೆಂದು ಹೇಳಲಾಗಿರುವ ದ್ರಾವಿಡರು ಮತ್ತು ಈ ಎರಡು ಜನಾಂಗಗಳ ನಡುವಿನ ಸಂಘರ್ಷ ಹಾಗೂ ಸಮ್ಮಿಲದಿಂದಾಗಿ ಹುಟ್ಟಿಕೊಂಡ ಹೊಸ ಮಾರ್ಗವನ್ನು ನೋಡಬೇಕಾಗುತ್ತದೆ.

ಹೊಸ ಮೌಲ್ಯಗಳನ್ನು ಪಡೆದಂತಹ ಜನಾಂಗಗಳು ಅವುಗಳನ್ನು ಬಳಸಿಕೊಳ್ಳಲು ಮತ್ತು ಪ್ರಸಾರ ಮಾಡಲು ತೊಡಗಿದ ಸಂದರ್ಭದಲ್ಲಿ ಸಂಘರ್ಷಗಳುಂಟಾಗಿವೆ. ಹೀಗೆ ಉಂಟಾಯಿತೆನ್ನಲಾದ ಸಂಘರ್ಷಗಳ ಹಿನ್ನೆಲೆಯಲ್ಲಿ ಕರ್ನಾಟಕದ ಸಂದರ್ಭ ಹಾಗೂ ಪಂಥವನ್ನು ಹೆಚ್ಚು ಆಸಕ್ತಿಯಿಂದ ನೋಡಬೇಕಾದ ಅವಶ್ಯಕತೆ ಇದೆ.

ಆರ್ಯರ ಯಜ್ಞ ಕಲ್ಪನೆಯನ್ನು ನಾಶ ಮಾಡಿದನು ವೀರಭದ್ರ. ಮೂಲದಲ್ಲಿ ವೀರಭದ್ರ ಶೈವನಾದರೂ ಮತ್ತೆ ಅದೇ ಆರ್ಯರ ಪುರೋಹಿತಶಾಹಿಯನ್ನು ಬೆಳೆಸಿಕೊಂಡು ಬಂದು ವೀರಶೈವರ ಆರಾಧ್ಯ ದೈವವಾಗಿ ಇಂದು ನಮಗೆ ಕಾಣಿಸುತ್ತಾನೆ. ಶೈವ ಸಂಪ್ರದಾಯದಲ್ಲಿ ಯಜ್ಞವನ್ನು ವಿರೋಧಿಸಿದರು. ಅಗ್ನಿ ಆರಾಧನೆಯನ್ನು ಅನುಸರಿಸುತ್ತಿದ್ದರು. ಗುಗ್ಗಳದ ಆಚರಣೆಯ ವಿಧಿವಿಧಾನ ಗಳನ್ನು ನೋಡಿದಾಗ ಅಗ್ನಿ ಆರಾಧನೆಯ ಪಳಿಯುಳಿಕೆಯಾಗಿ ಕಂಡು ಬರುತ್ತದೆ.

ಗುಗ್ಗಳದ ಆಚರಣೆಯನ್ನು ವೀರಭದ್ರನನ್ನು ದೈವವನ್ನಾಗಿ ಆರಾಧಿಸುವ ವೀರಶೈವ ಸಮುದಾಯದವರು ನೆರವೇರಿಸುವರು. ಅದರಲ್ಲೂ ಹೆಚ್ಚಾಗಿ ವೀರಶೈವರು ಒಂದು ಪಂಗಡವಾದ ಸಿಂಪಿಗರು ಆಚರಿಸುವರು. ಹಿರಿಮಗನ ಮದುವೆಯಲ್ಲಿ ಈ ಆಚರಣೆಯನ್ನು ನಡೆಸಲೇಬೇಕೆಂಬ ನಿಯಮವಿದೆ. ಹಾಗಾಗಿ ಮದುವೆಯ ಸಂದರ್ಭದಲ್ಲಿ ತುಂಬಾ ವಿಜೃಂಭಣೆಯಿಂದ ನಡೆಸುವರು. ಗುಗ್ಗುಳ ಆಚರಣೆಯಲ್ಲಿ ತುಂಬಾ ಕಟ್ಟುನಿಟ್ಟಾದ ವಿಧಿ ನಿಷೇಧಗಳಿದ್ದು, ಅವುಗಳನ್ನು ತಪ್ಪದೆ ಆಚರಿಸಿಕೊಂಡು ಬರುತ್ತಿದ್ದಾರೆ.

ಆಧುನಿಕ ಜಗತ್ತಿನ ತೀವ್ರ ಒತ್ತಡ ಹಾಗೂ ಕಡಿಮೆಯಾಗುತ್ತಿರುವ ಧಾರ್ಮಿಕ ಶ್ರದ್ಧಾಭಾವನೆಯಿಂದಾಗಿ ಗುಗ್ಗುಳ ಆಚರಣೆಯನ್ನು ನಡೆಸುವುದನ್ನು ಕಡಿಮೆ ಮಾಡುತ್ತಿದ್ದಾರೆ. ಜೊತೆಗೆ ಬೇರೆ ಬೇರೆ ರೀತಿಯ ಮದುವೆ ಸಂಪ್ರದಾಯಗಳನ್ನು ಅಳವಡಿಸಿಕೊಳ್ಳುತ್ತಿದ್ದಾರೆ. ಹಾಗಾಗಿ ಗುಗ್ಗಳ ಆಚರಣೆಯು ಮೊದಲಿದ್ದಂತೆ ಹೆಚ್ಚಾಗಿ ಕಂಡು ಬರುತ್ತಿಲ್ಲ. ಅಲಲ್ಲಿ ಕಂಡು ಬಂದರೂ ಸಹ ಮೊದಲಿದ್ದ ವಿಧಿ ನಿಷೇಧಗಳನ್ನು ಆಚರಿಸುತ್ತಿಲ್ಲ.

ಪ್ರಸ್ತುತ ಅಧ್ಯಯನದಲ್ಲಿ ಈ ಎಲ್ಲಾ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಅಧ್ಯಯನವನ್ನು ನಡೆಸಿದ್ದೇನೆ. ಅಧ್ಯಯನಕ್ಕೆ ಸಂಬಂಧಪಟ್ಟಂತೆ ಒಟ್ಟು ಒಂಭತ್ತು ಅಧ್ಯಾಯಗಳಾಗಿ ವರ್ಗೀಕರಣವನ್ನು ಮಾಡಿಕೊಂಡಿದ್ದೇನೆ. ಮೊದಲನೆಯ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ ಇದ್ದು, ಅಧ್ಯಯನವನ್ನು ಮಾಡಲು ಕಾರಣವೇನು, ಅಧ್ಯಯನಕ್ಕೆ ಬಳಸಿಕೊಂಡ ವಿಧಾನ, ಅಧ್ಯಯನದ ವ್ಯಾಪ್ತಿಯನ್ನು ಚರ್ಚಿಸಲಾಗಿದೆ.

ಅಧ್ಯಾಯ ಎರಡರಲ್ಲಿ ಗುಗ್ಗಳ ಆಚರಣೆ ಇದೆ. ಅದರಲ್ಲಿ ಗುಗ್ಗಳ ಪದದ ಅರ್ಥ, ಗುಗ್ಗಳದ ರಚನೆ, ಗುಗ್ಗಳದ ಪ್ರಕಾರಗಳು, ಗುಗ್ಗಳ ಆಚರಣೆಯ ಮಹತ್ವ, ಗುಗ್ಗಳ ಆಚರಣೆಯಲ್ಲಿ ಪುರವಂತರ ಪಾತ್ರ ಗುಗ್ಗಳ ಆಚರಣೆಯ ನೈವೇದ್ಯ, ನಂಬಿಕೆ, ವಿಧಿ ನಿಷೇಧಗಳು, ಗುಗ್ಗಳ ಆಚರಣೆಯಲ್ಲಿ ನಡೆಸುವ ಪವಾಡಗಳು ಹಾಗೂ ಉಪಯೋಗಿಸುವ ವಾದ್ಯಗಳು ವಿವಿಧ ಸಮುದಾಯಗಳ ಪಾತ್ರ ಮುಂತಾದವುಗಳನ್ನು ವಿವರವಾಗಿ ಚರ್ಚಿಸಲಾಗಿದೆ.

ಅಧ್ಯಾಯ ಮೂರರಲ್ಲಿ ಗುಗ್ಗಳ ಮದುವೆ ಆಚರಣೆಯ ಬಗೆಗೆ ವಿವರವಾಗಿ ಹೇಳಲಾಗಿದೆ. ಅಧ್ಯಾಯ ನಾಲ್ಕರಲ್ಲಿ ಹೂವಿನ ಹಡಗಲಿ ತಾಲೂಕಿನಲ್ಲಿರುವ ಪ್ರಮುಖವಾದ ದೇವಾಲಯಗಳ ಸಂಪೂರ್ಣ ವಿವರಣೆಗಳನ್ನು ಕೊಡಲಾಗಿದೆ.

ಐದನೆಯ ಅಧ್ಯಾಯವು ವೀರಭದ್ರನ ಹುಟ್ಟಿನ ಸಾಂಸ್ಕೃತಿಕ ಸನ್ನಿವೇಶ ಎಂದಿದೆ. ಇದರಲ್ಲಿ ವೀರಭದ್ರನ ಹುಟ್ಟಿಗೆ ಸಂಬಂಧಿಸಿದ ದಕ್ಷಬ್ರಹ್ಮನ ಯಜ್ಞ, ದಾಕ್ಷಾಯಣಿಯ ಆತ್ಮಾರ್ಪಣೆ, ಶಿವನಕೋಪ ಮತ್ತು ವೀರಭದ್ರ ಹಾಗೂ ಭದ್ರಕಾಳಿಯ ಹುಟ್ಟಿಗೆ ಸಂಬಂಧಿಸಿದ ಪುರಾಣಕತೆ ಮತ್ತು ಒಡಪನ್ನು ಹೇಳಲಾಗಿದೆ. ಈ ಕತೆ ಮತ್ತು ಒಡಪನ್ನು ವಿಶ್ಲೇಷಣೆಗೆ ಒಳಪಡಿಸಿ, ಶೈವ ಮತ್ತು ವೈಷ್ಣವರ ತಿಕ್ಕಾಟಗಳ ಬಗೆಗೆ ಸೂಕ್ಷ್ಮವಾಗಿ ಹೇಳಲಾಗಿದೆ. ಜೊತೆಗೆ ವೀರಭದ್ರನು ದಕ್ಷನ ಯಜ್ಞವನ್ನು ನಾಶ ಮಾಡುವುದರ ಮೂಲಕ ಆರಾಧ್ಯ ದೈವವಾಗಿದ್ದಾನೆ ಎಂದು ಹೇಳಲಾಗಿದೆ.

ಆರನೆಯ ಅಧ್ಯಾಯದಲ್ಲಿ ವೀರಭದ್ರ ದೈವದ ಸಾಂಸ್ಕೃತಿಕ ಚರಿತ್ರೆಯ ಬಗೆಗೆ ವಿವರಿಸಲಾಗಿದೆ. ವೀರಭದ್ರನು ತನ್ನ ಹುಟ್ಟಿನ ಜೊತೆಗೆ ಸಾಂಸ್ಕೃತಿಕ ಸಂಘರ್ಷವನ್ನು ಕಟ್ಟಿಕೊಂಡು ಆ ಮುಖಾಂತರ ಗೆಲುವನ್ನು ಪಡೆದುಕೊಳ್ಳುತ್ತಾನೆ. ನಂತರ ವೀರಭದ್ರನು ಮಾಡಿದಂತಹ ಪವಾಡಗಳನ್ನು ಕುರಿತಂತೆ ಹಲವಾರು ಐತಿಹ್ಯಗಳು, ಪುರಾಣ ಕತೆಗಳು, ಒಡಬುಗಳು ಇವೆ. ಅವುಗಳೆಲ್ಲವನ್ನು ಈ ಅಧ್ಯಾಯದಲ್ಲಿ ಸಂಗ್ರಹಿಸಿಕೊಡಲಾಗಿದೆ. ಸಂಗ್ರಹಿಸಿದ ಮಾಹಿತಿಗಳ ಪ್ರಕಾರ ವೀರಭದ್ರನು ಶೈವ ಮತ್ತು ವೀರಶೈವರಲ್ಲಿ ತನ್ನ ಪವಾಡಗಳ ಮುಖಾಂತರ ಆರಾಧ್ಯ ದೈವ ಪುರುಷನಾಗಿರುವನು.

ವೀರಭದ್ರನು ಶಿವನ ಅಣತಿಯಂತೆ ದಕ್ಷನನ್ನು ಕೊಂದ ನಂತರ ಪ್ರಮುಖ ಯುದ್ಧ ದೈವವಾಗಿ ಕಾಣಿಸಿಕೊಂಡಿದ್ದಾನೆ. ಚಾಲುಕ್ಯರ ಕಾಲದಿಂದ ಇಂದಿನವರೆಗೆ ವೀರಭದ್ರ ದೈವದ ಮೂರ್ತಿಗಳು ಮತ್ತು ದೇವಾಲಯಗಳು ಕಾಣಿಸಿಕೊಂಡಿರುವುದನ್ನು ಹೇಳಲಾಗಿದೆ. ದೈವಕ್ಕೆ ಸಂಬಂಧಿಸಿದ ಗುಗ್ಗಳ ಸೇವೆ, ದೈವದ ಪ್ರಸರಣಕ್ಕಾಗಿ ಹುಟ್ಟಿಕೊಂಡಿರುವ ವೀರಗಾಸೆ ಮತ್ತು ಪುರವಂತಿಕೆಯ ಮೇಳಗಳನ್ನು ಗುರುತಿಸಲಾಗಿದೆ.

ಅಧ್ಯಾಯ ಏಳರಲ್ಲಿ ವೀರಭದ್ರ ದೈವದ ಕುರಿತ ಶಿಷ್ಟ ಸಾಹಿತ್ಯ, ಪುರಾಣಗಳು, ಒಡಬು (ವಚನಗಳು) ಪರಾಕುಗಳನ್ನು ಸಂಗ್ರಹಿಸಿಕೊಡಲಾಗಿದೆ. ಎಂಟನೆಯ ಅಧ್ಯಾಯದಲ್ಲಿ ಆಧುನಿಕ ಜಗತ್ತಿನಲ್ಲಿ ಗುಗ್ಗಳವು ಯಾವ ರೀತಿಯಲ್ಲಿ ಇದೆ ಎಂಬುದರ ಬಗೆಗೆ ಚರ್ಚಿಸಲಾಗಿದೆ. ಕೊನೆಯ ಅಧ್ಯಾಯ ಸಮಾರೋಪವಾಗಿದೆ.

# ಸಾಂಸ್ಕೃತಿಕ ಪದಕೋಶ

| | | |
|---|---|---|
| ಅಗ್ನಿಪುಟ | : | ಗುಗ್ಗಳದಲ್ಲಿ ಇರುವಂತ ಕಟ್ಟಿಗೆಗೆ ದೀಪ ಹಚ್ಚುವುದು. |
| ಅಡ್ಡಣಿಗೆ | : | ಊಟ ಮಾಡಲು ಸುಲಭವಿರುವಂತೆ ಸುಮಾರು ೧ ಅಡಿ ಎತ್ತರವಾಗಿ ಮೂರು ಕಾಲಿನ ಮೇಲೆ ತಟ್ಟೆ ಕೂಡುವಂತೆ ದುಂಡನೆ ಕಟ್ಟಿನಿಂದ ಮಾಡಿದ ವಸ್ತು. |
| ಅಂಥಪ್ಪ | : | ಒಡಬು ಹೇಳುವಾಗ ಉಪಯೋಗಿಸುವ ಒಂದು ಪದ. |
| ಅರಿದಲೆ | : | ರಾಕ್ಷಸನ ತಲೆ |
| ಆದಿಶೇಷ | : | ನಾಗರಹಾವು |
| ಆರಾಧಿಸು | : | ಪ್ರಾರ್ಥಿಸು. |
| ಆವಿಗೆ | : | ಪಾದರಕ್ಷೆ (ಚಪ್ಪಲಿ) |
| ಇಳೇವು | : | ಮದುವೆಗೆ ಮುಂಚೆ ನೆರವೇರಿಸುವ ಕಾರ್ಯ. |
| ಉಂಗುಷ್ಠ | : | ಕಾಲು ಅಥವಾ ಕೈಯ ಹೆಬ್ಬೆರಳು. |
| ಉಣ್ಣೆ | : | ಕುರಿಯ ಕೂದಲು. |
| ಉತ್ತರೀಯ | : | ಮೇಲಿನ, ನಂತರದ |
| ಉಪೇಕ್ಷಿಸು | : | ಉದಾಸೀನತೆ |
| ಉಲ್ಪಿ | : | ಮದುವೆ ಮತ್ತು ಗ್ರಾಮ ದೇವತೆಯ ಜಾತ್ರೆಯ ಸಂದರ್ಭದಲ್ಲಿ ನಿಗದಿತ ವ್ಯಕ್ತಿ ಅಥವಾ ಮನೆತನದವರಿಗೆ ಉಲ್ಪಿಯನ್ನು ಕೊಡುತ್ತಾರೆ. ಉಲ್ಪಿ ಎಂದರೆ: ಎಲೆ, ಅಡಿಕೆ, ಗೋಧಿಹಿಟ್ಟು, ಬೇಳೆ, ಬೆಲ್ಲ ಇವೆಲ್ಲ ಕೂಡಿರುವಂತದ್ದು. |
| ಉಲ್ಲಾಸ | : | ಸಂತೋಷ, ಆನಂದ. |
| ಋತುಮತಿ | : | ಪ್ರೌಢಾವಸ್ಥೆಗೆ ಬರುವುದು, ಹೆಣ್ಣು ಪ್ರಾಯಕ್ಕೆ ಬಂದಲು, ದೊಡ್ಡವಳಾದಳು. |
| ಋಲ್ವೆಜರ | : | ಯಜ್ಞ ಪುರೋಹಿತ. |
| ಐರಾಣಿ | : | ಕುಂಬಾರರು ಮದುವೆ ಸಂದರ್ಭಕ್ಕಾಗಿ ಮಣ್ಣಿನಿಂದ ಮಾಡಿದ ಮಡಿಕೆ. |
| ಐಲುಗಿತ್ತಿಯರು | : | ಸಂಪ್ರದಾಯವನ್ನು ಮುಂದುವರಿಸಿಕೊಂಡು ಹೋಗುವವರು (ಮುತ್ತೈದೆಯರು) |
| ಕಕ್ಕಿಸು | : | ವಾಂತಿ ಮಾಡಿಸು. |
| ಕಟ್ಟುನಿಟ್ಟಾದ | : | ನಿಯಮಾನುಸಾರ, ಬಿಗಿಯಾದ. |
| ಕಠಾರಿ | : | ಬಾಕು (ಕಿರುಗತ್ತಿ) ಆಯುಧ. |
| ಕಪಾಲ | : | ತಲೆ ಬುರುಡೆ. |
| ಕರಿಗಮನ | : | ಆನೆ |
| ಕರವಸ್ತ್ರ | : | ಕೈಯಲ್ಲಿ ಇರುವ ಒಂದು ಬಟ್ಟೆ ಅಥವಾ ಗುಗ್ಗಳ ಪರಡಿಗೆಗಳನ್ನು ಕಟ್ಟಲು ಬಳಸುವ ಒಂದು ಬಟ್ಟೆ ತುಂಡು. |

| | | |
|---|---|---|
| ಕರ್ಣ | : | ಕಿವಿ. |
| ಕರಡಿಗೆ | : | ವೀರಶೈವರು ಕೊರಳಲ್ಲಿ ಧರಿಸುವ ಲಿಂಗದ ಪಟ್ಟಿಗೆ. |
| ಕರ | : | ಕೈ. |
| ಕಮಂಡಲ | : | ಋಷಿಮುನಿಗಳು ನೀರಿನ ಬಿಂದಿಗೆ. |
| ಕಳಸಗಿತ್ತಿ | : | ಕಾರ್ಯದಲ್ಲಿ ಕಳಸ ಹಿಡಿದಿರುವವಳು (ಮುತ್ತೈದೆ). |
| ಕಡೆಗೀಲು | : | ಬಂಡಿಗಾಲಿ ಕಳಚದಂತೆ ಕೊನೆಯಲ್ಲಿ ಆಳವಡಿಸುವ ಕಬ್ಬಿಣದ ಕೋಲು. |
| ಕರ್‍ವಾಣಿ | : | ಪಾರ್ವತಿಯ ಇನ್ನೊಂದು ಹೆಸರು. |
| ಕಾಶಿ | : | ಒಂದು ಬಗೆಯ ವೀರಭದ್ರನ ಉಡುಪು. |
| ಕಾಲಗ್ನಿ | : | ಯಮ |
| ಕಾರ್ಯಸ್ಥರು | : | ಮದುವೆಯಲ್ಲಿ ಮುಖ್ಯವಾದ ಕಾರ್ಯಗಳನ್ನು ನೆರವೇರಿಸುವವರು. |
| ಕಾಂಚಾಳ ಗಿಡ | : | ಗಿಡದ ಹೆಸರು. |
| ಕಾಕುರುಳು | : | ಗೋವಿನ ಸಗಣೆಯಿಂದ ದುಂಡಗೆ ತಟ್ಟಿ ಆದನ್ನು ಒಣಗಿಸುವುದು. |
| ಕೆಂಜೆಡೆ | : | ಕೋಪದ ಜಡೆ. |
| ಕೆಂಗಣ್ಣು | : | ಸಿಟ್ಟಿನ ಕಣ್ಣು (ಸಿಟ್ಟಿನಿಂದ ಕೂಡಿದಾಗ ಕೆಂಪು ಕಣ್ಣು). |
| ಕಂಕಣ | : | ಶುಭ ಕಾರ್ಯದಲ್ಲಿ ದಾರ ಎಲೆಯಿಂದ ಕೂಡಿದ ವಸ್ತುವನ್ನು ಕೈಗೆ ಕಟ್ಟುವುದು. |
| ಕಂಠ | : | ಕೊರಳು, ಕುತ್ತಿಗೆ. |
| ಕುಂಬಿಗಳು | : | ಗುಡಿ ಅಥವಾ ಮನೆ ಮೇಲ್ಭಾಗದಲ್ಲಿ ಮನೆ ಮಾಳಿಗೆಗಿಂತ ಸುಮಾರು ಮೂರು-ನಾಲ್ಕು ಅಡಿ ಎತ್ತರ ಕಟ್ಟಿರುವ ಕಟ್ಟಡ. |
| ಕೊಂಡ | : | ಅಗ್ನಿ, ಬೆಂಕಿಯಿಂದ ಕೂಡಿದ ಹೊಂಡ. |
| ಕೋರುಟ | : | ಮದುವೆ ಹಿಂದಿನ ದಿನ ಮದು ಮಕ್ಕಳು ಬಂಧು-ಮಿತ್ರರ ಮನೆ ಮನೆಗೆ ಹೋಗಿ ತಿಂದು ಎರಡು ಬರುವ ಒಂದು ಪದ್ಧತಿ. |
| ಕೋರೆದವಡೆ | : | ಚೂಪಾದ ಹಲ್ಲುಗಳು. |
| ಗದಾ ಪ್ರಹಾರ | : | ಗದೆಯಿಂದ ಹೊಡೆಯುವುದು. |
| ಗಣಂಗಳ | : | ಐದು ಮಂದಿ ಜಂಗಮರಿಗೆ ಕರೆಯುವ ಹೆಸರು. |
| ಗರ್ವಿಷ್ಟಿ | : | ಸೊಕ್ಕಿನಿಂದ ಕೂಡಿರುವವಳು. |
| ಗಂಧರ್ವ ಕನ್ನಿಕೆ | : | ದೇವಲೋಕದ ಹುಡುಗಿಯರು. |
| ಗಾವುದ | : | ದೂರವನ್ನು ಆಳೆಯುವ ಪ್ರಮಾಣ. |
| ಗೋಳಕ | : | ಶಿವಲಿಂಗ. |
| ಘಟ್ಟ | : | ಹಂತ. |
| ಘೃತ | : | ತುಪ್ಪ. |
| ಚಿಮ್ಮಟಿಗೆ | : | ಯಾವುದಾದರೊಂದು ವಸ್ತುವನ್ನು ಹಿಡಿಯಲು ಉಪಯೋಗಿಸುವ ಸಾಧನ. |

| | |
|---|---|
| ಚೌರಿ ಕೂದಲು : | ಜನ ಸಾಮಾನ್ಯರ ಕೂದಲಿನಿಂದ ಮಾಡಿದ ಕೃತಕವಾದ ಕಟ್ಟು. |
| ಜಗದ್ರಕ್ಷಕ : | ಜಗತ್ತನ್ನು ರಕ್ಷಿಸುವವನು. |
| ಜಡೆ : | ಕೂದಲು. |
| ಜರ : | ಸ್ವಲ್ಪ. |
| ಛಲದಂಕ ಮಲ್ಲ : | ವೀರಭದ್ರನ ಬಿರುದಾವಳಿ. |
| ಡಾಬು : | ಸೊಂಟ ಪಟ್ಟಿ. |
| ತರಿ : | ಕತ್ತರಿಸು. |
| ತಾಳಿ : | ಮಾಂಗಲ್ಯ. |
| ತ್ರಿಪುಂಡ : | ವೈಷ್ಣವರು ಹಣೆಯಲ್ಲಿ ಧರಿಸುವ ಮೂರು ನಾಮ. |
| ತಿಕ್ಕಾಟ : | ಜಗಳ. |
| ತೊಗಲು : | ಚರ್ಮ. |
| ತೊನ್ನು : | ಒಂದು ಚರ್ಮ ರೋಗದ ಹೆಸರು. |
| ತೋಳು : | ಬಾಹು, ರಟ್ಟೆ. |
| ದಧಿ : | ಮೊಸರು. |
| ದಮನ : | ನಾಶಗೊಳಿಸು. |
| ದಾರಣ : | ಧರಿಸು ಅಥವಾ ತೊಡುವುದು. |
| ಧ್ವಾರ : | ಬಾಗಿಲು. |
| ದಿಕ್ಪಾಲಕರು : | ಬಾಗಿಲನ್ನು ಕಾಯುವವರು. |
| ದೀವಿಟಿಗೆ : | ಆಚರಣೆಯಲ್ಲಿ ಬೆಳಕಿಗಾಗಿ ಹಚ್ಚಿದ ಬೆಂಕಿ. |
| ದೈತ್ಯ : | ರಾಕ್ಷಸ. |
| ದೊಡ್ಡಸ್ಥಿಕೆ : | ಯಜಮಾನಿಕ ಸಾಷ್ಟಾಂಗ. |
| ನಾರುಮಡಿ : | ಶುಭ್ರವಾದ ಬಟ್ಟೆ. |
| ನಾಸಿಕ : | ಮೂಗು. |
| ನಿವಾಳಿ : | ದೃಷ್ಟಿದೋಷವನ್ನು ತೆಗೆ. |
| ನಿಶ್ಚಿತ : | ಮದುವೆಯನ್ನು ನಿಶ್ಚಯ ಮಾಡುವ ಒಂದು ವಿಧಿ. |
| ನಿಷೇಧ : | ನಿರ್ಬಂಧ |
| ನೀಗಿದಳು : | ತೀರಿಕೊಂಡಳು; ಪ್ರಾಣಬಿಡು. |
| ನೆತ್ತರ : | ರಕ್ತ. |
| ನೈವೇದ್ಯ : | ಎಡೆ ಮಾಡಿದ ಅಡಿಗೆಯನ್ನು ಮೊದಲು ದೇವರಿಗೆ ಅರ್ಪಿಸುವುದು. |
| ಪಗಡೆ : | ಜೂಜು (ಒಂದು ಆಟ) |

| | | |
|---|---|---|
| ಪರಡಿ | : | ( ಉತ್ತತ್ತಿ, ಅಡಿಕೆ, ಎಲೆ, ತಾಳಿಪತ್ರ, ದಕ್ಷಿಣೆ ಇಟ್ಟು ಕೊಂಪು ವಸ್ತ್ರದಲ್ಲಿ ಕಟ್ಟಿರುವ ಒಂದು ಗಂಟು. |
| ಪರಾಕ | : | ವೀರಭದ್ರನಿಗೆ ಹೊಗಳಿ ಹೇಳುವ ಮಂತ್ರಗಳು. |
| ಪ್ರಜ್ವಲ | : | ಪ್ರಕಾಶ ಮಾನ. |
| ಪಾವಕ ಜ್ವಾಲೆ | : | ಬೆಂಕಿ ಜ್ವಾಲೆ. |
| ಪಾರಣ ದಾನ | : | ಜೀವ ದಾನ. |
| ಪಿನಾಕ | : | ಶಿವನ ಧನಸ್ಸು. |
| ಪಿಸಿದ | : | ತುಂಡು ಮಾಡು. |
| ಪುರವಂತರು | : | ವೀರಭದ್ರನ ವೇಶಹಾಕಿ ಒಡಬುಗಳನ್ನು ಹೇಳುತ್ತಾ ಕುಣಿಯುವವರು. |
| ಪೊಡ ಮಡಲು | : | ಅಡ್ಡ ಬಿದ್ದು ನಮಸ್ಕರಿಸುವುದು. |
| ಫಣಿ ನೇತ್ರ | : | ಹಣೆ ಗಣ್ಣು. |
| ರಂಡೆ ಮುಂಡೆ | : | ಗಂಡ ಸತ್ತ ಹೆಂಡತಿ. |
| ರುದ್ರಾಕ್ಷಿ | : | ಒಂದು ಜಾಲೆಯ ಮರ ಮತ್ತು ಆದರಕಾಯಿ. |
| ರುದ್ರೂಟ | : | ಗುಗ್ಗಳ ಮದುವೆಯಲ್ಲಿ ಬಂದಿರುವ ಪುರವಂತರು. |
| ರೋಧನೆ | : | ಅಳಲು ದುಃಖ. |
| ರೌದ್ರಾವತಾರ | : | ಸಿಟ್ಟಿನಿಂದ ಕೂಡಿರುವಂತಹ. |
| ಲಿಂಗೈಕ್ಯ | : | ಜೀವಂತ ಸಮಾಧಿ. |
| ಲೆಕ್ಕಣಿಕೆ | : | ಮಸಿಯಿಂದ ಬರೆಯುವ ಸಾಧನೆ. |
| ವಡವಾಗ್ನಿ | : | ಹೊಟ್ಟೆ ಉರಿ. |
| ವರ | : | ಅನುಗ್ರಹ. |
| ವಿದಗ್ಧ | : | ತಿಳಿದವನು, ತಿಳಿದ ಸುಡಲ್ಪಟ್ಟ; ಬೇಯಿಸಿದ, ಹಾಳಾದ. |
| ವಿಜೃಂಭಣೆ | : | ಸಡಗರ, ಆದ್ದೂರಿ. |
| ವಿದ್ಯುಕ್ತವಾಗಿ | : | ಶಾಸ್ತ್ರೋಕ್ತವಾಗಿ. |
| ವೀರಗಾಸೆ | : | ವೀರಭದ್ರನ ಜನನದ ಹಿನ್ನೆಲೆಯಲ್ಲಿ ಮಾಡುವ ಕುಣಿತ. |
| ವಕ್ಷಸ್ಥಳ | : | ಹೊಕ್ಕಳು. |
| ಹಲಗೆ | : | ಇದು ವೀರಭದ್ರನ ಮೂರ್ತಿ. ಇದನ್ನು ತಾಮ್ರ, ಬೆಳ್ಳಿ ಲೋಹದಿಂದ ತಯಾರಿಸುತ್ತಾರೆ. |

# ವಕ್ತೃ ವಿವರ

| ಕ್ರ. ಸಂ | ಹೆಸರು | ವಯಸ್ಸು | ವೃತ್ತಿ | ಊರು | ಜಾತಿ | ಉಪಜಾತಿ |
|---|---|---|---|---|---|---|
| 1) | ಕೌಟಿ ವೀರಭದ್ರಪ್ಪ | ೫೯ | ವ್ಯವಸಾಯ | ಹಿರೇ ಹಡಗಲಿ | ಲಿಂಗಾಯತ | ಸಿಂಪಿಗರು |
| 2) | ಹಾವೇರಿ ವೀರಣ್ಣ | ೫೦ | ವ್ಯಾಪಾರಿ | ಹಿರೇ ಹಡಗಲಿ | ಲಿಂಗಾಯತ | ಬಣಜಿಗರು |
| 3) | ದೇವರಾಜ | ೩೦ | ಶಿಕ್ಷಕರು | ಹಿರೇ ಹಡಗಲಿ | ಲಿಂಗಾಯತ | ಸಿಂಪಿಗರು |
| 4) | ಕೊಂಪಿ ವೀರಪ್ಪ | ೬೫ | ವ್ಯವಸಾಯ | ಹಿರೇ ಹಡಗಲಿ | ಲಿಂಗಾಯತ | ಸಿಂಪಿಗರು |
| 5) | ಹಣ್ಣಿ ಮಹಾಬಲೇಶ್ವರಪ್ಪ | ೬೨ | ವ್ಯವಸಾಯ | ಹೂ. ಹಡಗಲಿ | ವೀರಶೈವ | ಪಂಚಮಶಾಲಿ |
| 6) | ವೀರಭದ್ರಯ್ಯ. ಎನ್. ಎಂ. | ೭೬ | ಪೂಜಾರಿ | ಹೊಳಲು | ವೀರಶೈವ | ಜಂಗಮರು |
| 7) | ಕುಪ್ಪಸದ ವೀರಪ್ಪ | ೬೮ | ವ್ಯವಸಾಯ | ಹಿರೇಕೊಳಚಿ | ಲಿಂಗಾಯತ | ಸಿಂಪಿಗರು |
| 8) | ನಿಂಗಪ್ಪ | ೪೭ | ವ್ಯವಸಾಯ | ನವಲಿ | ಲಿಂಗಾಯತ | ಮಡಿವಾಳರು |
| 9) | ಬಣಕಾರ ವೀರಪ್ಪ | ೬೦ | ವ್ಯವಸಾಯ | ಹ್ಯಾರಡ | ಲಿಂಗಾಯತ | ನಾಗಚಿಂಪಿಗ |
| 10) | ಪೂಜಾರಿ ವೀರಪ್ಪ | ೬೫ | ವ್ಯವಸಾಯ | ನವಲಿ | ಲಿಂಗಾಯತ | ಬಣಜಿಗರು |
| 11) | ಸಿ. ಎಂ. ಬೆಲ್ಲದ್ | ೭೯ | ಸ್ವತಂತ್ರ ಯೋಧರು | ನವಲಿ | ಲಿಂಗಾಯತ | ಬಣಜಿಗರು |
| 12) | ಹಾಲಯ್ಯ | ೭೪ | ಪುರೋಹಿತ | ಸೋಗಿ | ವೀರಶೈವ | ಜಂಗಮರು |
| 13) | ಮಾಂತಪ್ಪ | ೬೫ | ವ್ಯವಸಾಯ | ಇಟಗಿ | ವೀರಶೈವ | ಪಂಚಮಶಾಲಿ |
| 14) | ಬೆಟ್ಟನಗೌಡ | ೬೮ | ವ್ಯಾಪಾರಿ | ಇಟಗಿ | ವೀರಶೈವ | ಪಂಚಮಶಾಲಿ |
| 15) | ಬಸವನಗೌಡ. ಜೆ. | ೫೫ | ವ್ಯವಸಾಯ | ಹೊಳಗುಂದಿ | ವೀರಶೈವ | ಪಂಚಮಶಾಲಿ |
| 16) | ಗುರುಲಿಂಗಯ್ಯ | ೭೭ | ವ್ಯವಸಾಯ | ಹೂ. ಹಡಗಲಿ | ವೀರಶೈವ | ಜಂಗಮರು |
| 17) | ರಾಜೇಂದ್ರಪ್ಪ | ೭೦ | ವ್ಯವಸಾಯ | ಹೂ. ಹಡಗಲಿ | ಲಿಂಗಾಯತ | ಬಣಜಿಗರು |
| 18) | ಪಿ. ಕರವೀರಪ್ಪ | ೬೦ | ವ್ಯವಸಾಯ | ಹಿರೇ ಹಡಗಲಿ | ವೀರಶೈವ | ಪಂಚಮಶಾಲಿ |
| 19) | ಹೆಚ್. ಅಂದಾನಪ್ಪ | ೬೦ | ವ್ಯವಸಾಯ | ಹಿರೇ ಹಡಗಲಿ | ಲಿಂಗಾಯತ | ಬಣಜಿಗರು |
| 20) | ಮಹಾಂತಪ್ಪ | ೬೫ | ಟೈಲರ್ | ಹಿರೇ ಹಡಗಲಿ | ಲಿಂಗಾಯತ | ಶಿವಚಿಂಪಿಗರು |
| 21) | ಗುರುಮೂರ್ತಪ್ಪ | ೬೧ | ವ್ಯಾಪಾರಿ | ಉತ್ತಂಗಿ | ಲಿಂಗಾಯತ | ಪಂಚಮಶಾಲಿ |
| 22) | ರುದ್ರಪ್ಪ. ಕೆ. | ೬೦ | ವ್ಯವಸಾಯ, ಪುರವಂತಿಕೆ | ಬಾವಿಹಳ್ಳಿ | ವೀರಶೈವ ಲಿಂಗಾಯತ | ಪಂಚಮಶಾಲಿ |

# ಆಧಾರ ಗ್ರಂಥಗಳು

೧. ಡಾ. ಅಂಬಳಿಕೆ ಹಿರಿಯಣ್ಣ, ೧೯೯೯, ಮಲೆನಾಡಿನ ವೈಷ್ಣವ ಒಕ್ಕಲಿಗರ ಸಂಸ್ಕೃತಿ, ಬೆಂಗಳೂರು, ಕನ್ನಡ ಪುಸ್ತಕ ಪ್ರಾಧಿಕಾರ.

೨. ಕಮಲಾ ಹೆಮ್ಮಿಗೆ, ೨೦೦೦, ವೀರಭದ್ರ ದೇವರ ಒಡಬುಗಳು ಧಾರವಾಡ, ಯಕ್ಷ ಪ್ರಕಾಶನ.

೩. ಡಾ|| ಹೆಚ್. ಚಂದ್ರಶೇಖರ, ೧೯೯೬. ಗುಗ್ಗಳ ಯಾಗದ ಪಳೆಯುಳಿಕೆ, ಬೆಂಗಳೂರು. ಪ್ರಜಾವಾಣಿ ವಿಶೇಷಾಂಕ.

೪. ಜೋತಿರ್ವಿದ್ವಾನ್ ಪುರೋಹಿತ, ಮಹಾಕೂಟಯ್ಯ ಶಾಸ್ತ್ರಿಗಳು. ಹಿರೇಮಠ (ವಿರಕ್ತಮಠ) ೧೯೭೧ ವೀರಶೈವ ವಿವಾಹ ಪದ್ಧತಿ, ಹೊಳೆ ಆಲೂರು, ನಾಗನೂರು ಬೃಹನ್ಮಠಾಧ್ಯಕ್ಷರಾದ ವೇ|| ಪಂ||ಮಹಾದೇವಯ್ಯನವರು.

೫. ತಾರೀಹಳ್ಳಿ ಹನುಮಂತಪ್ಪ,೨೦೦೧. ಹೊಸಪೇಟೆ ನಾಯಕರ ಏಳು ಕೇರಿಗಳ ಸಾಂಸ್ಕೃತಿಕ ಅಧ್ಯಯನ (ಅಪ್ರಕಟಿತ ಪಿ. ಹೆಚ್‌ಡಿ. ಮಹಾ ಪ್ರಬಂಧ) ಕನ್ನಡ ವಿಶ್ವವಿದ್ಯಾಲಯ,ಹಂಪಿ, ವಿದ್ಯಾರಣ್ಯ.

೬. ನಿಸರ್ಗ, ಇರಕಲ್ಲಗಡ ೨೦೦೨, ಕಣ್ಮರೆಯತ್ತ 'ಗುಗ್ಗಳ ಕೊಡ' ಬೆಂಗಳೂರು. ಸುಧಾ ವಾರಪತ್ರಿಕೆ. (೫ನೇ ಡಿಸೆಂಬರ)

೭. ಪ್ರೊ|| ಹಿ.ಚಿ. ಬೋರಲಿಂಗಯ್ಯ, ೧೯೯೬, ಕರ್ನಾಟಕ ಜನಪದ ಕಲೆಗಳ ವಿಶ್ವಕೋಶ, ವಿದ್ಯಾರಣ್ಯ, ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೮. ಶಂಕ್ರಪ್ಪ ಬಸಪ್ಪ ತೊಂಡಿಹಾಳ, ೨೦೦೦, ಶ್ರೀ ವೀರಭದ್ರ ದೇವರ ವಡಪುಗಳು, ಗದಗ, ಪಾರು ಪ್ರಕಾಶನ.

೯. ಶ್ರೀ ವೀರಭದ್ರ ದೇವರ ವಚನಶಾಸ್ತ್ರ.

೧೦. ವೀರಭದ್ರ ದೇವರ ವಡಪುಗಳು.

ವಧು-ವರ ಹಾಗೂ ವರನ ತಾಯಿ ಗುಗ್ಗಳದ ಪೂಜೆಗಾಗಿ ಸಿದ್ಧಗೊಂಡಿರುವುದು



ಗುಗ್ಗಳ ಹಾಗೂ ಗುಗ್ಗಳ ತಯಾರಿಸಿದವರು



ಗದ್ದಿಗೆಯ ಮೇಲಿಟ್ಟ ಗುಗ್ಗಳದ ಕೊಡಗಳು



ಮೆರವಣಿಗೆಗೆ ಗುಗ್ಗಳವನ್ನು ತೆಗೆದುಕೊಂಡು ಹೋಗುತ್ತಿರುವುದು

ಗುಗ್ಗಳ ಕೊಡಕ್ಕೆ ಬಿದುರಿನ ಡಾಬು ಕಟ್ಟಿ ಸಿದ್ಧಗೊಳಿಸುತ್ತಿರುವುದು



ವೀರಭದ್ರನ ನಂದಿ ಕೋಲು ಕುಣಿಸುತ್ತಿರುವುದು



ಗಲ್ಲದ ಶಸ್ತ್ರ ಪವಾಡ



ಗುಗ್ಗಳ ಆಡಿಸುತ್ತಿರುವುದು



ವೀರಭದ್ರ ದೈವದ ಪೂಜಾ ಸ್ಥಳ



ಗುಗ್ಗಳ ಕೊಡದ ತಳಭಾಗ ಒಡೆದು ಸಿದ್ಧಗೊಳಿಸುತ್ತಿರುವುದು



ಗುಗ್ಗಳಕ್ಕೆ ಎಣ್ಣೆ ಹಾಕುತ್ತಿರುವುದು



ವಧುವರರನ್ನು ಸುರಿಗಿ ಸ್ನಾನ ಆದನಂತರ ಗುಗ್ಗಳ ಪೂಜಿಸಲು ಕರೆ ತರುವುದು



ಮದುಮಕ್ಕಳ ಮಾಡುವುದು



ಗಂಗೆ ಪೂಜೆಯಿಂದ ಬಂದ ಮದುಮಕ್ಕಳನ್ನು  ಪೂಜಿಸುತ್ತಿರುವ ಪುರವಂತರು.



